

ಕರ್ನಾಟಕ ಸರಕಾರ

ಕಾದಂಬರಿ

C.ನಂ
4956

# ಸಂಸ್ಕಾರ

ಯು.ಆರ್. ಅನಂತಮೂರ್ತಿ

ಶಿಷ್ಟ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ

033,3NAN1;1
M2

25

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ಶೆ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

4956

# ಸಂಸ್ಕಾರ

ಯು. ಆರ್. ಅನಂತಮೂರ್ತಿ




ವಿಶ್ವ ಕನ್ನಡ ಸಮ್ಮೇಳನ
೧೪/೩ ಎ, ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨

*SAMSKARA*: Novel by Dr. U. R. Ananthamurthy. Published by K. Jayacharya, K.A.S., Additional Director, Directorate of Kannada and Culture (VISWA KANNADA SAMMELANA) 14/3 A, Nrupatunga Road, Bangalore 560 002. Pages: 143 + viii, Price: Rs. 2-00, 5000 Copies.

© U. R. ANANTHAMURTHY

O33,3NAN1,1
M2
~~1406~~

ಬೆಲೆ : ರೂ. 2-00

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. ~~[illegible]~~ 4956
~~1406~~

ಮುದ್ರಕರು
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

**ಆರ್. ಗುಂಡೂರಾವ್**
ಮುಖ್ಯ ಮಂತ್ರಿ




ವಿಧಾನಸೌಧ
ಬೆಂಗಳೂರು
ದಿನಾಂಕ ೧೮-೯-೧೯೮೨

## ಸಂಕಲ್ಪ . . . . ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು.

ಇದರಂತೆ ಒಂದುನೂರಾಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳೂ ಇವೆ. ಅನ್ಯಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸ ವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವನ್ನುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ಆರ್. ಗುಂಡೂರಾವ್

ಮುಖ್ಯ ಮಂತ್ರಿಗಳು

## ಅರ್ಪಣೆ

ಶಾಂತವೇರಿ ಗೋಪಾಲಗೌಡ
ಕೆ. ಶಂಕರನಾರಾಯಣ ಭಟ್ಟ
ಕೆ. ವಿ. ಸುಬ್ಬಣ್ಣ
—ಇವರಿಗೆ

# ಸಂಸ್ಕಾರ

"Knowingly or unknowingly, Ananthamurthy has portrayed a barbaric civilization, where the books, the Laws, are buttressed by magic, and where a too elaborate Social organisation is unquickened by intellect or creativity or ideas of moral responsibility (except to the self in its climb to salvation). These people are all helpless, disadvantaged, easily unbalanced; The civilization they have inherited has long gone sour; living instinctive lives, crippled by rules......they make up a society without a head."

V. S. Naipaul, *India: A Defect of Vision,*
The New York Review, Aug 5, 1979.

# ಅಧ್ಯಾಯ : ಒಂದು

ಒಣಗಿ ಮುರುಟಿದ ಭಾಗೀರಥಿಯ ಕೀಚುಗಾಯಿ ದೇಹಕ್ಕೆ ಸ್ನಾನ ಮಾಡಿಸಿ, ಮಡಿಯುಡಿಸಿ, ಯಥಾವತ್ತಾಗಿ ಪೂಜೆ ನೈವೇದ್ಯಾದಿಗಳು ಮುಗಿದಮೇಲೆ, ದೇವರ ಪ್ರಸಾದದ ಹೂ ಮುಡಿಸಿ, ತೀರ್ಥ ಕೊಟ್ಟು, ಅವಳಿಂದ ಕಾಲು ಮುಟ್ಟಿಸಿಕೊಂಡು, ಆಶೀರ್ವದಿಸಿ, ರವೆಗಂಜಿಯನ್ನು ಬಟ್ಟಲಲ್ಲಿ ಪ್ರಾಣೇಶಾಚಾರ್ಯರು ತಂದರು.

"ಮೊದಲು ನಿಮ್ಮ ಊಟವಾಗಲಿ"

ಎಂದಳು ಭಾಗೀರಥಿ ಕ್ಷೀಣಸ್ವರದಲ್ಲಿ.

"ಇಲ್ಲ. ಮೊದಲು ನಿನ್ನ ಗಂಜಿಯಾಗಲಿ."

ಇಪ್ಪತ್ತು ವರ್ಷಗಳಿಂದ ಒಬ್ಬರಿಗೊಬ್ಬರು ಆಡಿಕೊಂಡು ಪರಿಪಾಠವಾದ ಮಾತು. ನಸುಕಿನ ಸ್ನಾನ, ಸಂಧ್ಯಾವಂದನ, ಅಡಿಗೆ, ಹೆಂಡತಿಗೆ ಮದ್ದು, ಮತ್ತೆ ಹೊಳೆ ದಾಟಿ ಹೋಗಿ ಗುಡಿಯ ಮಾರುತಿಯ ಪೂಜೆ—ಇದು ತಪ್ಪದ ಆಚಾರ. ಊಟವಾದಮೇಲೆ ಒಬ್ಬೊಬ್ಬರಾಗಿ ಅಗ್ರಹಾರದ ಬ್ರಾಹ್ಮಣರು ಮನೆಯ ಚಿಟ್ಟೆಯ ಮೇಲೆ ನೆರೆಯುತ್ತಾರೆ—ದಿನದಿನಕ್ಕೂ ಪ್ರಿಯವಾಗಿ ಉಳಿದಿರುವ ತನ್ನ ಪುರಾಣ-ಪುಣ್ಯಕತೆಗಳ ವಾಚನವನ್ನು ಕೇಳಲು. ಸಂಜೆ ಮತ್ತೆ ಸ್ನಾನ, ಸಂಧ್ಯಾವಂದನ, ಹೆಂಡತಿಗೆ ಗಂಜಿ, ಮದ್ದು, ಅಡಿಗೆ, ಊಟ—ತಿರುಗಿ ಜಗುಲಿಯಲ್ಲಿ ಬಂದು ಕುಳಿತ ಬ್ರಾಹ್ಮಣರಿಗೆ ಪ್ರವಚನ. ಭಾಗೀರಥಿ ಆಗೊಮ್ಮೆ ಈಗೊಮ್ಮೆ ಅನ್ನುವುದುಂಟು :

"ನನ್ನನ್ನು ಕಟ್ಟಿಕೊಂಡು ನಿಮಗೇನು ಸುಖ? ಮನೆಗೊಂದು ಮಗು ಬೇಡವೇ? ಇನ್ನೊಂದು ಮದುವೆಯಾಗಿ."

"ನನ್ನಂತಹ ವೃದ್ಧನಿಗೆ ಮದುವೆ...."

ಎಂದು ಪ್ರಾಣೇಶಾಚಾರ್ಯರು ನಗುತ್ತಾರೆ.

"ಇನ್ನೂ ನಲವತ್ತು ದಾಟದ ನೀವು ಎಂತಹ ವೃದ್ಧರು. ಕಾಶಿಗೆ ಹೋಗಿ ಸಂಸ್ಕೃತ ಓದಿ ಬಂದ ನಿಮಗೆ ಹೆಣ್ಣೊಂದನ್ನು ಧಾರೆ ಎರೆದುಕೊಡಲು ಯಾವ ತಂದೆಗೆ ಇಷ್ಟವಿಲ್ಲ? ಮನೆಗೊಂದು ಮಗು ಬೇಕು. ನನ್ನ ಕೈಹಿಡಿದಾಗಿನಿಂದ ನಿಮಗೆಲ್ಲಿ ಸುಖ ಸಿಕ್ಕಿದೆ...."

ಪ್ರಾಣೇಶಾಚಾರ್ಯರು ಮುಗುಳ್ನಕ್ಕು, ಎದ್ದು ಕೂರಲು ಯತ್ನಿಸುವ

ಹೆಂಡತಿಯನ್ನು ಮಲಗಿಸಿ, ನಿದ್ದೆ ಮಾಡು ಎನ್ನುತ್ತಾರೆ. ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡು ಎನ್ನಲಿಲ್ಲವೇ ಭಗವಂತ ? ಮುಕ್ತಿಮಾರ್ಗದಲ್ಲಿರುವ ತಮ್ಮನ್ನು ಪರೀಕ್ಷಿಸಲೆಂದೇ ಬ್ರಾಹ್ಮಣ ಜನ್ಮ ಕೊಟ್ಟು ಇಂತಹ ಸಂಸಾರಕ್ಕೆ ನನ್ನನ್ನು ಅವ ತೊಡಗಿಸಿದ. ಪಂಚಾಮೃತದ ಸೇವನೆಯಷ್ಟು ಸುಖವಾದ ಧನ್ಯಭಾವ, ಪಶ್ಚಾತ್ತಾಪ ಹೆಂಡತಿಯ ಮೇಲೆ ಬಂದು, ಇವಳು ರೋಗಿಯಾಗಿದ್ದರಿಂದ ನಾನು ಇನ್ನಷ್ಟು ಹದವಾದೆ ಎಂದು ತಮ್ಮ ಪಾಡಿನ ಬಗ್ಗೆ ಹಿಗ್ಗುತ್ತಾರೆ.

ಊಟಕ್ಕೆ ಕೂರುವ ಮುಂಚೆ ಗೋಗ್ರಾಸವನ್ನು ಬಾಳೆಲೆಯಲ್ಲಿ ಎತ್ತಿ ಹಿತ್ತಲಿನಲ್ಲಿ ಮೇಯುತ್ತಿದ್ದ ಗೌರಿಯ ಎದುರು ಇಟ್ಟು, ಹಸುವಿನ ರೋಮಾಂಚಿತ ಮೈಯನ್ನು ಒರೆಸಿ ಕಣ್ಣಿಗೊತ್ತಿಕೊಂಡು ಒಳಗೆ ಬರುತ್ತಿದ್ದಂತೆ 'ಆಚಾರ್ಯರೆ, ಆಚಾರ್ಯರೆ' ಎಂದು ಕರೆಯುವ ಹೆಣ್ಣಿನ ಸ್ವರ ಕೇಳಿಸಿತು. ಆಲಿಸಿದರೆ ನಾರಣಪ್ಪನ ಸೂಳೆ ಚಂದ್ರಿಯ ಸ್ವರದಂತಿದೆ. ಅವಳ ಹತ್ತಿರ ಮಾತನಾಡಿದರೆ ಮತ್ತೆ ಸ್ನಾನ ಮಾಡಿ ಊಟಮಾಡಬೇಕು. ಆದರೆ ಹೆಣ್ಣು ಹೆಂಗಸೊಬ್ಬಳನ್ನು ಅಂಗಳದಲ್ಲಿ ಕಾಯಿಸಿದರೆ ತುತ್ತು ಗಂಟಲಲ್ಲಿಳಿಯುವುದು ಶಕ್ಯವೇ ?

ಜಗುಲಿಗೆ ಬಂದರು. ಚಂದ್ರಿ ಸರ್ರನೆ ತಲೆಮೇಲೆ ಸೆರಗೆಳೆದುಕೊಂಡು ಬಿಳಚಿ ಭಯಗ್ರಸ್ತಳಾಗಿ ನಿಂತಳು.

"ಏನಮ್ಮ ಬಂದ ವಿಷಯ ?"

"ಅವರು....ಅವರು...."

ಚಂದ್ರಿ ಕಂಪಿಸುತ್ತ ಮಾತು ಹೊರಡದೆ ಕಂಬಕ್ಕೆ ಆತಳು.

"ಯಾರು ? ನಾರಣಪ್ಪನೆ ? ಏನಾಯಿತು ?"

"ಹೋದರು...."

ಚಂದ್ರಿ ಮುಖ ಮುಚ್ಚಿಕೊಂಡಳು.

"ನಾರಾಯಣ, ನಾರಾಯಣ—ಯಾವತ್ತು ?"

"ಈಗ...."

"ನಾರಾಯಣ—ಏನಾಗಿತ್ತು ?"

ಚಂದ್ರಿ ಬಿಕ್ಕುತ್ತ ಹೇಳಿದಳು :

"ಶಿವಮೊಗ್ಗೆಯಿಂದ ಬಂದವರೆ ಜ್ವರ ಬಂದು ಮಲಗಿದರು. ನಾಲ್ಕು ದಿನದ ಜ್ವರ—ಅಷ್ಟೆ....ಪಕ್ಕೆಯ ಹತ್ತಿರ ಗೆಡ್ಡೆಯೆದ್ದಿತ್ತು, ನೋವಿಗೆ ಬರುವ ಬಾವಿನ ಹಾಗೆ...."

"ನಾರಾಯಣ."

ಉಟ್ಟ ಪಟ್ಟೆ ಮಡಿಯಲ್ಲೆ ಪ್ರಾಣೇಶಾಚಾರ್ಯರು ಓಡುತ್ತ ಗರುಡಾಚಾರ್ಯನ ಮನೆಗೆ ಹೋಗಿ 'ಗರುಡಾ, ಗರುಡಾ' ಎಂದು ಕರೆಯುತ್ತ ಅಡಿಗೆಮನೆಗೆ ನುಗ್ಗಿದರು. ನಾರಣಪ್ಪ ಗರುಡಾಚಾರ್ಯನಿಗೆ ಐದು ತಲೆಯ ಸಂಬಂಧ. ನಾರಣಪ್ಪನ ಮುತ್ತಜ್ಜನ ಅಜ್ಜಿಯೂ ಗರುಡಾಚಾರ್ಯನ ಮುತ್ತಜ್ಜಿಯೂ ಅಕ್ಕತಂಗಿಯರು. ಕಲಸಿದ ಸಾರಿನ ತುತ್ತನ್ನು ಇನ್ನೇನು ಬಾಯಿಗೆತ್ತ ಬೇಕೆಂದಿದ್ದ ಗರುಡಾಚಾರ್ಯನಿಗೆ—

"ನಾರಾಯಣ....ಗರುಡಾ, ಊಟಮಾಡಬೇಡ. ನಾರಣಪ್ಪ ತೀರಿ ಕೊಂಡನಂತೆ"

ಎಂದು ಮಧ್ಯಾಹ್ನದ ಸೆಖೆಗೆ ಬೆವರುತ್ತಿದ್ದ ಮುಖವನ್ನು ಒರೆಸಿಕೊಂಡರು. ಗರುಡಾಚಾರ್ಯ ದಂಗಾಗಿ, ತನಗೂ ನಾರಣಪ್ಪನಿಗೂ ಆಣೆಭಾಷೆಯಾಗಿ ಎಲ್ಲ ಸಂಬಂಧವೂ ಕಳಚಿಕೊಂಡಿದ್ದರೂ ಸಹ, ಕಲಸಿದ ತುತ್ತನ್ನು ಎಲೆಯ ಮೇಲೆಯೇ ಬಿಟ್ಟು, ಆಪೋಶನ ತೆಗೆದುಕೊಂಡು ಎದ್ದ. ಸಟ್ಟುಗ ಹಿಡಿದು ನಿಶ್ಚೇಷ್ಟಿತಳಾಗಿ ನಿಂತ ಹೆಂಡತಿ ಸೀತಾದೇವಿಗೆ 'ಮಕ್ಕಳಿಗೆ ಅಡ್ಡಿಯಿಲ್ಲ, ಊಟ ಮಾಡಲಿ. ಶವಸಂಸ್ಕಾರವಾಗುವ ತನಕ ನಾವು ಊಟ ಮಾಡುವಂತಿಲ್ಲ' ಎಂದು ಪ್ರಾಣೇಶಾಚಾರ್ಯರ ಕೂಡ ಹೊರಬಂದ. ಸುದ್ದಿ ತಿಳಿಯುವುದ ರೊಳಗೆ ಅಕ್ಕಪಕ್ಕದವರೆಲ್ಲ ಎಲ್ಲಿ ಊಟಮಾಡಿಬಿಡುತ್ತಾರೋ ಎಂದು ಭಯ ದಿಂದ ಪ್ರಾಣೇಶಾಚಾರ್ಯರು ಉಡುಪಿ ಲಕ್ಷ್ಮಣಾಚಾರ್ಯರ ಮನೆಗೆ, ಗರುಡಾಚಾರ್ಯ ಅರೆಮರುಳು ಲಕ್ಷ್ಮೀದೇವಮ್ಮ, ಕೆಳಮನೆ ದುರ್ಗಾಭಟ್ಟರ ಮನೆಗೆ ಓಡುತ್ತೋಡುತ್ತ ಸುದ್ದಿ ಮುಟ್ಟಿಸಿದರು. ಸುದ್ದಿ ಕಿಚ್ಚಿನಂತೆ ಅಗ್ರಹಾರದ ಉಳಿದ ಹತ್ತು ಮನೆಗಳಿಗೂ ಹಬ್ಬಿತು. ಮಕ್ಕಳನ್ನು ಒಳಗೆ ಕೂಡಿಸಿ ಬಾಗಿಲು ಕಿಟಕಿ ಹಾಕಿದ್ದಾಯಿತು. ದೇವರ ದಯೆಯಿಂದ ಇನ್ನೂ ಯಾವ ಬ್ರಾಹ್ಮಣನೂ ಊಟಮಾಡಿರಲಿಲ್ಲ. ನಾರಣಪ್ಪನ ಸಾವನ್ನು ಕೇಳಿ ಹೆಂಗಸರು ಮಕ್ಕಳಾದಿಯಾಗಿ ಅಗ್ರಹಾರದ ಒಂದು ನರಪಿಳ್ಳೆಗೂ ವ್ಯಥೆ ಯಾಗದಿದ್ದರೂ ಕೂಡ ಎಲ್ಲರ ಹೃದಯದಲ್ಲೂ ಒಂದು ಅವ್ಯಕ್ತ, ಅಪರಿಚಿತ ಭೀತಿ, ಕಳವಳ ಹುಟ್ಟಿತು. ಬದುಕಿನಲ್ಲಿ ವೈರಿ, ಸತ್ತು ಅನ್ನಕಂಟಕ, ಶವವಾಗಿ ಇನ್ನು ಸಮಸ್ಯೆ ಎಂದು ತನ್ನ ಷಡ್ಡಕನನ್ನು ಶಪಿಸುತ್ತ ಉಡುಪಿ ಲಕ್ಷ್ಮಣಾಚಾರ್ಯ ಕೈ ತೊಳೆದ. ಆಚಾರ್ಯರ ಜಗುಲಿಯಲ್ಲಿ ಸೇರಲು ಹೊರಟ ಪ್ರತಿ ಗಂಡಸಿನ ಕಿವಿಯಲ್ಲೂ ಹೆಂಡತಿ ಊದಿದಳು: "ಪ್ರಾಣೇಶಾ

ಚಾರ್ಯರು ಖುದ್ದು ತೀರ್ಮಾನಿಸದ ಹೊರತು ನೀವಾಗಿ ಅವನ ಶವಸಂಸ್ಕಾರ ಮಾಡಲು ಒಪ್ಪಬೇಡಿ. ನಾಳೆ ಗುರುಗಳು ಬಹಿಷ್ಕಾರ ಹಾಕಿದರೆ ಏನು ಗತಿ ?"

ಪುರಾಣ ಕೇಳಲಿಕ್ಕೆಂದು ಕಿಕ್ಕಿರಿದು ಕೂರುವ ರೀತಿಯಲ್ಲಿ—ಆದರೆ ಇವತ್ತು ಅವ್ಯಕ್ತ ಶಂಕೆಯಲ್ಲಿ—ಜಗುಲಿಯಲ್ಲಿ ನೆರೆದಿದ್ದ ಬ್ರಾಹ್ಮಣರಿಗೆ ಪ್ರಾಣೇಶಾಚಾರ್ಯರು ತುಳಸಿಮಣಿಸರವನ್ನು ಕಂಠದ ಸುತ್ತ ಸುತ್ತುತ್ತ ತನಗೇ ಹಾಕಿಕೊಂಡ ಪ್ರಶ್ನೆಯ ಹಾಗೆ ಅಂದರು :

"ನಾರಣಪ್ಪನ ಶವಸಂಸ್ಕಾರವಾಗಬೇಕು : ಮೊದಲನೆಯ ಪ್ರಶ್ನೆ. ಅವನಿಗೆ ಮಕ್ಕಳಿಲ್ಲ—ಯಾರಾದರೂ ಅವನ ಬೊಜ್ಜ ಮಾಡಬೇಕು : ಎರಡನೆಯ ಪ್ರಶ್ನೆ."

ಅಂಗಳದಲ್ಲಿ ಕಂಬಕ್ಕಾತು ನಿಂತಿದ್ದ ಚಂದ್ರಿ, ಬ್ರಾಹ್ಮಣರು ಇದಕ್ಕೇನೆನ್ನುತ್ತಾರೆಂದು ಆತಂಕದಿಂದ ಕಾದಳು. ಕುತೂಹಲ ತಡೆಯಲಾರದೆ ಹಿತ್ತಲ ಬಾಗಿಲಿನಿಂದ ಬಂದು ಪ್ರಾಣೇಶಾಚಾರ್ಯರ ನಡುಮನೆಯಲ್ಲಿ ನಿಂತು ಆಲಿಸುತ್ತಿದ್ದ ಹೆಂಗಸರು ತಮ್ಮ ಗಂಡಸರು ಎಲ್ಲಿ ದುಡುಕಿಬಿಡುತ್ತಾರೊ ಎಂದು ಶಂಕಿತರಾದರು.

ಆಚಾರ್ಯರು ಆಡಿದ ಮಾತಿಗೆಲ್ಲ ಸಾಮಾನ್ಯವಾಗಿ ಅನ್ನುವ ರೀತಿಯಲ್ಲಿ ಗರುಡಾಚಾರ್ಯ ತನ್ನ ದಷ್ಟಪುಷ್ಟ ಕಪ್ಪು ಬಾಹುಗಳನ್ನು ಸವರಿಕೊಳ್ಳುತ್ತ "ಹೌದು, ಹಾವ್‌ದು, ಹಾವ್‌ದು" ಎಂದ.

"ಶವಸಂಸ್ಕಾರವಾಗುವವರೆಗೆ ಯಾರೂ ಊಟಮಾಡುವಂತಿಲ್ಲವಲ್ಲ."

ಗುಂಪಿನಲ್ಲಿದ್ದ ಬಡ ಬ್ರಾಹ್ಮಣರಲ್ಲಿ ಒಬ್ಬನಾದ ಬಲರಾಮನ ಗೋವಿನಂತಹ ಕೃಶ ಶರೀರದ ದಾಸಾಚಾರ್ಯ ಹೇಳಿದ.

"ನಿಜ....ನಿಜ." ಲಕ್ಷ್ಮಣಾಚಾರ್ಯ ತನ್ನ ಹೊಟ್ಟೆಯನ್ನುಜ್ಜಿಕೊಳ್ಳುತ್ತ ಮುಖವನ್ನು ಮುಂದಕ್ಕೆ ಹಿಂದಕ್ಕೆ ಮಾಡಿ ಹೇಳಿ ರೆಪ್ಪೆಗಳನ್ನು ಬಡಿದ. ಪುಷ್ಟವಾಗಿದ್ದ ಅವನ ಏಕಮಾತ್ರ ಅಂಗವೆಂದರೆ ಜ್ವರಗಡ್ಡೆಯಿಂದ ಬಾತಿದ್ದ ಹೊಟ್ಟೆ. ಕಾರಣ—ಬಚ್ಚುಗೆನ್ನೆ, ಗುಳಿಬಿದ್ದ ಹಳದಿ ಕಣ್ಣು, ಎಲುಬು ನೆಟ್ಟ ಎದೆ, ಸೊಟ್ಟಗಾದ ಕಾಲಿನಿಂದಾಗಿ ಶರೀರದ ಸಮತೂಕ ತಪ್ಪಿ ಮುಂಭಾರವಾಗಿತ್ತು ; ಕಾರಣ—ಪೃಷ್ಠವನ್ನು ಹಿಂದಕ್ಕೊಡ್ಡಿ ಅವ ನಡೆಯುವ— ಎಂದು ಪಾರಿಜಾತಪುರದ ಲೇವಡಿಯ ಪಂಚಗ್ರಾಮದವರ ಹಾಸ್ಯ.

ಯಾರಿಂದಲೂ ನೇರವಾದ ಸೂಚನೆ ಬರದಿದ್ದುದು ನೋಡಿ ಪ್ರಾಣೇಶಾಚಾರ್ಯರು—

"ಆದ್ದರಿಂದ ಈಗ ಯಾರು ಅವನ ಶವಸಂಸ್ಕಾರ ಮತ್ತು ಬೊಜ್ಜ ಮಾಡಬೇಕು ಎಂಬುದು ನಮ್ಮ ಮುಂದಿರೋ ಸಮಸ್ಯೆ. ಸಂಬಂಧಿಗಳು, ತಪ್ಪಿದರೆ ಯಾವ ಬ್ರಾಹ್ಮಣನಾದರೂ ಮಾಡಬಹುದೆಂದು ಧರ್ಮಶಾಸ್ತ್ರದಲ್ಲಿದೆ."

ಸಂಬಂಧಿಗಳು ಎನ್ನುವ ಮಾತನ್ನೆತ್ತಿದ್ದರಿಂದ ಉಳಿದ ಬ್ರಾಹ್ಮಣರು ಗರುಡಾಚಾರ್ಯ ಮತ್ತು ಲಕ್ಷ್ಮಣಾಚಾರ್ಯರ ಮುಖ ನೋಡಿದರು. ಲಕ್ಷ್ಮಣಾಚಾರ್ಯ ತನಗಲ್ಲ ಎನ್ನುವ ಹಾಗೆ ಕಣ್ಣು ಮುಚ್ಚಿಕೊಂಡ. ಆದರೆ ಕೋರ್ಟು ಕಛೇರಿ ಹತ್ತಿದ್ದ ಗರುಡಾಚಾರ್ಯ ತಾನೀಗ ಮಾತಾಡುವುದು ಅವಶ್ಯವೆಂದು ಒಂದು ಚಿಟಿಕೆ ನಶ್ಯ ಏರಿಸಿ, ಗಂಟಲು ಕೆರೆದುಕೊಂಡ :

"ಧರ್ಮಶಾಸ್ತ್ರದ ಪ್ರಕಾರ ನಾವು ನಡೆಯೋದು ಸರಿ. ನಮ್ಮಲ್ಲೆಲ್ಲ ಮಹಾವಿದ್ವಾಂಸರಾದ ತಮ್ಮ ವಾಕ್ಯ ನಮಗೆ ವೇದವಾಕ್ಯ. ತಮ್ಮ ಅಪ್ಪಣೆಯಾದರೆ ಸೈ. ನನಗೂ ಅವನಿಗೂ ಒಂದು ತಲೆತಲಾಂತರದ ಸಂಬಂಧ ಇರೋದು ನಿಜ. ಆದರೆ ತಮಗೆ ತಿಳಿದಂತೆ ನಾನೂ ಅವನ ಅಪ್ಪನೂ ಕೋರ್ಟು ಹತ್ತಿ, ಆ ತೋಟದ ಕಾರಣಕ್ಕಾಗಿ ಜಗಳವಾಡಿ, ಅವನ ಅಪ್ಪ ಸತ್ತಮೇಲೆ ನಾನು ಧರ್ಮಸ್ಥಳದ ನ್ಯಾಯ ತಂದರೂ ಈ ನಾರಣಪ್ಪ ದೈವಾಜ್ಞೆ ಧಿಕ್ಕರಿಸಿ—ಏನು ?—ನಮಗೂ ಅವನಿಗೂ ಇನ್ನುಮುಂದೆ ತಲೆತಲಾಂತರಕ್ಕೂ ಮಾತುಕತೆ, ಮದುವೆ, ಮುಂಜಿ, ಊಟ-ಉಪಚಾರ ಇತ್ಯಾದಿಗಳು ಇಲ್ಲವೆಂದು ಆಣೆಭಾಷೆ ಹಾಕಿಕೊಂಡಮೇಲೆ ಏನು—?"

ಗರುಡಾಚಾರ್ಯನ ನಾಸಿಕೋತ್ಪನ್ನ ವಾಗ್ಝರಿ ವಾಕ್ಯ ತಪ್ಪಿ ನಿಂತು ಇನ್ನೆರಡು ಚಿಟಿಕೆ ನಸ್ಯದಿಂದ ಸ್ಫೂರ್ತಿವಾಯಿತು. ಧೈರ್ಯ ತಂದು ಸುತ್ತ ನೋಡಿ, ಚಂದ್ರಿಯ ಮುಖ ಕಂಡು, ಮುಚ್ಚುಮರೆಯೇಕೆಂದು ಅಂದೇಬಿಟ್ಟ:

"ನೀವು ಹೇಳಿದ ಮಾತನ್ನ ಗುರುಗಳೂ ಒಪ್ಪುತ್ತಾರೆ. ಏನು ? ನಾನು ಸಂಸ್ಕಾರ ಮಾಡಬಹುದೋ, ಬಾರದೋ ವಿಷಯ ಒತ್ತಟ್ಟಿಗಿರಲಿ. ಅವ ಬ್ರಾಹ್ಮಣ ಹೌದೋ ಅಲ್ಲವೋ ಎಂಬೋದು ನಿಜವಾದ ಪ್ರಶ್ನೆ. ಏನು ? —ಶೂದ್ರಳ ಸಹವಾಸ ಮಾಡಿದವ...."

ಈ ಮಾಧ್ವರ ಆಚಾರ ಎಷ್ಟು ಆಳವಾದ್ದೆಂದು ಕುತೂಹಲದಿಂದ ನೋಡುತ್ತಿದ್ದ ಅಗ್ರಹಾರದ ಏಕಮಾತ್ರ ಸ್ಮಾರ್ತ ದುರ್ಗಾಭಟ್ಟ ಚಂದ್ರಿಯನ್ನು ವಾರೆಗಣ್ಣಿನಿಂದ ನೋಡುತ್ತ ಕಿಡಿ ಹಾರಿಸಿದ :

"ಛಿ ಛಿ ಛಿ, ದುಡುಕಬೇಡಿ ಆಚಾರ್ಯರೇ. ಶೂದ್ರಳೊಬ್ಬಳನ್ನ ಸೂಳೆಯಾಗಿಟ್ಟುಕೊಂಡಾಕ್ಷಣ ಬ್ರಾಹ್ಮಣ್ಯ ನಾಶವಾಗಲ್ಲ. ಉತ್ತರದಿಂದ ಈ ಕಡೆ

ಬಂದ ನಮ್ಮ ಪೂರ್ವಿಕರು—ಬೇಕಾದರೆ ಪ್ರಾಣೇಶಾಚಾರ್ಯರನ್ನು ಕೇಳಿ—ದ್ರಾವಿಡ ಹೆಂಗಸರ ಸಹವಾಸ ಮಾಡಿದರೆಂದು ಇತಿಹಾಸದ ಪ್ರತೀತಿ. ನಾನು ಗೇಲಿಗೆ ಅನ್ನುತ್ತಿದ್ದೇನೆಂದಲ್ಲ....ಹಾಗೆ ನೋಡುತ್ತಹೋದರೆ ದಕ್ಷಿಣ ಕನ್ನಡ ಜಿಲ್ಲೆಗೆ ಹೋಗಿ ಬರುವ ಲೌಕಿಕರು ಬಸರೂರು ಸೂಳೆಯರ...."

ಮಾಧ್ವರನ್ನಿವ ಕಾಲು ಕೆರೆದು ಗೇಲಿಮಾಡುತ್ತಿದ್ದಾನೆಂದು ಗರುಡಾಚಾರ್ಯನಿಗೆ ರೇಗಿತು:

"ಸ್ವಲ್ಪ, ಸ್ವಲ್ಪ ತಡೆಯಿರಿ ದುರ್ಗಾಭಟ್ಟರೆ, ಇಲ್ಲಿ ಪ್ರಶ್ನೆ ಬರಿ ಕಾಮ ಸಂಬಂಧದ್ದಲ್ಲ. ಅನುಲೋಮ ವಿಲೋಮದ ಬಗ್ಗೆ ಕಾಶಿಗೆ ಹೋಗಿ ವೇದಾಂತ ಓದಿ ಬಂದ ವೇದಾಂತಶಿರೋಮಣಿ ಪ್ರಾಣೇಶಾಚಾರ್ಯರಿಗೆ ತಾವು ಕಲಿಸಿ ಕೊಡಬೇಕಿಲ್ಲ. ಏನು? ನಿಮ್ಮ ಮಠದ, ನಮ್ಮ ಮಠದ ದಿಗ್ಗಜಪಂಡಿತರ ಜೊತೆ ವಾದಿಸಿ, ದಕ್ಷಿಣದ ಸಮಸ್ತ ಪೀಠಗಳಲ್ಲಿ ಪ್ರಶಸ್ತಿ ಗಳಿಸಿ, ಹದಿನೈದು ಜರಿಶಾಲುಗಳನ್ನ ಬೆಳ್ಳಿತಟ್ಟೆಗಳನ್ನ ಬಹುಮಾನವಾಗಿ ಪಡೆದ—ಏನು?—ನಮ್ಮ ಆಚಾರ್ಯರಿಗೆ—ಏನು?"

ಪ್ರಾಣೇಶಾಚಾರ್ಯರಿಗೆ ಮಾತು ಮುಖ್ಯ ಪ್ರಶ್ನೆಯಿಂದ ದೂರ ಸರಿದು ತನ್ನ ಪ್ರಶಂಸೆಗೆ ಇಳಿದಿದ್ದರಿಂದ ಸಂಕೋಚವಾಗಿ—

"ಲಕ್ಷ್ಮಣಾ, ನೀನು ಹೇಳೋದು ಏನು? ನಾರಣಪ್ಪನಿಗೆ ನಿನ್ನ ಹೆಂಡತಿಯ ತಂಗಿಯನ್ನೇ ಕೊಟ್ಟಿತ್ತಲ್ಲವೇ?"

ಲಕ್ಷ್ಮಣಾಚಾರ್ಯ ಕಣ್ಣನ್ನು ಮುಚ್ಚಿ—

"ಎಲ್ಲಾ ಒಟ್ಟು ತಮ್ಮ ಅಪ್ಪಣೆ, ತಮ್ಮ ಅನುಮತಿ. ನಮಗೆ ಏನು ಧರ್ಮಸೂಕ್ಷ್ಮ ಗೊತ್ತು? ನಾರಣಪ್ಪ—ಗರುಡ ಹೇಳೋ ಹಾಗೇ—ಕೀಳು ಜಾತಿಯ ಹೆಣ್ಣೊಂದರ ಸಂಪರ್ಕವನ್ನ...." ಎಂದು ಮಾತನ್ನು ಅರ್ಧಕ್ಕೆ ನಿಲ್ಲಿಸಿದ. ಕಣ್ಣನ್ನು ಬಿಟ್ಟು ಮೂಗನ್ನು ಅಂಗವಸ್ತ್ರದಿಂದ ತೋಡಿಕೊಳ್ಳುತ್ತ—"ಪ್ರಶ್ನೆ ತಾವು ತಿಳಿದಿರೋ ಹಾಗೆ ಅವಳು ಮಾಡಿದ ಅಡಿಗೇನೂ ಊಟ ಮಾಡ್ತಿದ್ದ ಎಂಬೋದು...."

"ಮದ್ಯಪಾನಾನ್ನೂ ಮಾಡ್ತಿದ್ದ ಎಂಬೋದು...." ನಾರಣಪ್ಪನ ಎದುರು ಮನೆಯ ಪದ್ಮನಾಭಾಚಾರ್ಯ ಧ್ವನಿಗೂಡಿಸಿದ.

"ಮದ್ಯಪಾನಾ ಇರಲಿ, ಮಾಂಸಾಹಾರಾನ್ನೂ ಮಾಡುತ್ತಿದ್ದ ಎಂಬೋದು" ಗರುಡಾಚಾರ್ಯ ದುರ್ಗಾಭಟ್ಟರ ಕಡೆ ತಿರುಗಿ ಅಂದ: "ನಿಮಗೆ ಅದೂ ಅಡ್ಡಿಯಿರಲಿಕ್ಕಿಲ್ಲ. ನಿಮ್ಮ ಮಠಾಚಾರ್ಯರು ಅನುಭವ ಪೂರ್ಣಾ ಆಗಲಿ

ಕ್ಕೆಂದು ಪರಕಾಯಪ್ರವೇಶಾ ಮಾಡಿ ರಾಣಿ ಜೊತೆ ಮೈಸುರೆತವರಲ್ಲವೆ ?"

ಮಾತು ಹದ ಮೀರುತ್ತಿದೆಯೆಂದು ಪ್ರಾಣೇಶಾಚಾರ್ಯರು "ಗರುಡಾ, ಸ್ವಲ್ಪ ಸುಮ್ಮನಿರು" ಎಂದರು.

"ತಾಳಿ ಕಟ್ಟಿದ ಹೆಂಡತಿಯನ್ನು ಬಿಟ್ಟ. ಹೋಗಲಿ ಎಂದರೆ....", ಕಣ್ಣು ಮುಚ್ಚಿ ಲಕ್ಷ್ಮಣಾಚಾರ್ಯ ಮತ್ತೆ ಮಾತನ್ನಾಡಲು ಪ್ರಾರಂಭಿಸಿದ: "ಯಾವಳನ್ನೊ ಕಟ್ಟಿಕೊಂಡ. ಭ್ರಾಂತಿ ಹಿಡಿದು ಸತ್ತ ನನ್ನ ಮನೆಯವಳ ತಂಗಿಯ ಸಂಸ್ಕಾರಾನ್ನೂ ಮಾಡಲಿಲ್ಲ. ಅದೂ ಹೋಗಲಿ ಎಂದರೆ ಅವ ಸ್ವತಃ ಅಪ್ಪ ಅಮ್ಮನ ಶ್ರಾದ್ಧಾನ್ನೂ ಮಾಡಲಿಲ್ಲ. ನಮಗೆ ಹತ್ತರದವನೆಂದು ನಾನೇನೂ ಮುಚ್ಚಿಕೊಳ್ಳುವವನಲ್ಲ. ನನ್ನ ಹೆಂಡತಿಯ ತಾಯಿಯ ಅಣ್ಣನ ಮಗ ಅವನು. ಸ್ವಂತದವನೆಂದು ನಾವು ಮಡಿಲಲ್ಲಿ ಹಾಕಿಕೊಳ್ಳೋಷ್ಟು ಹಾಕ್ಕೊಂಡೆವು. ಹೋಗಲಿ ಎಂದರೆ, ಎಲ್ಲ ಬ್ರಾಹ್ಮಣರ ಎದುರು ಹೊಳೆಗೆ ಬಂದು, ತಲೆತಲಾಂತರದಿಂದ ಮನೆಯಲ್ಲಿ ಪೂಜೆ ಮಾಡಿದ ಆ ಸಾಲಿಗ್ರಾಮ ವನ್ನ ಅವ ನೀರಿಗೆ ಎಸೆದು ಥೂ ಎಂದು ಉಗಿದುಬಿಡೋದ? ಅದೂ ಹೋಗಲಿ ಎಂದರೆ ನಮಗೆಲ್ಲ ಕಾಣಲಿ ಎಂದೇ ತುರುಕರನ್ನು ಕರೆದುಕೊಂಡು ಬಂದು ಅಂಗಳದಲ್ಲೆ ಅಪೇಯಪಾನ ಅಭಕ್ಷ್ಯಭೋಜನವನ್ನು ಮಾಡೋದ? ಅಯ್ಯ, ಯಾಕಯ್ಯ ಎಂದೇನಾದರೂ ಹಿತಾ ಹೇಳಹೋದರೆ ಹೀನಾಮಾನ ಬೈದುಬಿಡುತ್ತಿದ್ದ. ಅವನಿಗೆ ಜೀವವಿರುವಷ್ಟೂ ಕಾಲ ಅವನಿಗೆ ಹೆದರಿ ಕೊಂಡು ಬದುಕಬೇಕಾಗಿ ಬಂತು."

ತನ್ನ ಗಂಡ ಲಾಯಕ್ಕಾಗಿ ಹೇಳಿದರೆಂದು ಒಳಗಿನಿಂದ ಆಲಿಸುತ್ತಿದ್ದ ಅವರ ಹೆಂಡತಿ ಅನಸೂಯಳಿಗೆ ಆನಂದವಾಯಿತು. ಕಂಬಕ್ಕೊರಗಿ ಕೂತಿದ್ದ ಚಂದ್ರಿ ಕಣ್ಣಿಗೆ ಬಿದ್ದು, ಮನಸಾರೆ ಶಪಿಸಿದಳು: ಅಪರಾತ್ರಿಯಲ್ಲಿ ಇವಳನ್ನು ಹುಲಿ ಮೆಟ್ಟಲಿ. ಹಾವು ಕಡಿಯಲಿ. ಈ ರಂಡೆ, ಈ ರಂಭೆ ಅವನ ತಲೆಗೆ ಮದ್ದು ಹಾಕಿಲ್ಲದಿದ್ದರೆ ತನ್ನ ಸ್ವಂತ ಸೋದರಮಾವನ ಮಗನಾದ ಅವ ಯಾಕೆ ತನ್ನ ಕುಟುಂಬದ ಹೆಣ್ಣನ್ನ ಖಾಯಿಲೆ ಹಿಡಿದಿದೇಂತ ದೂಕಿ, ಆಸ್ತೀನ ಪರಭಾರೆ ಮಾಡಿ, ಈ ಮುಂಡೆಯ ಕೊರಳಿಗೆ ಪಿತ್ರಾರ್ಜಿತ ಬಂಗಾರಾನ್ನೆಲ್ಲ ಹಾಕಿ....ಚಂದ್ರಿಯ ಕೊರಳಿನಲ್ಲಿದ್ದ ನಾಲ್ಕೆಳೆಯ ಚಿನ್ನದ ಸರ, ಕೈಯ ಕಡಗ ನೋಡಿ ಅನಸೂಯಳಿಗೆ ದುಃಖ ತಡೆಯಲಾರದೆ ಗೊಳೋ ಎಂದು ಅತ್ತು ಬಿಟ್ಟಳು. ಈಗ ತನ್ನ ತಂಗಿ ಬದುಕಿದ್ದರೆ ಇದು ಅವಳ ಕೊರಳಿನಲ್ಲಿರಬೇಕಿತ್ತು. ತನ್ನ ರಕ್ತಸಂಬಂಧಿಯ ಶವ ಹೀಗೆ ಸಂಸ್ಕಾರವಿಲ್ಲದೆ ಕಾಯಬೇಕಾಗಿ ಬರು

ತ್ತಿತ್ತು? ಎಲ್ಲ ಈ ದರಿದ್ರದ ರಂಡೆಯಿಂದ ಆಯಿತಲ್ಲ, ಅವಳ ಮುಖಕ್ಕೆ ಬೆಂಕಿಯಿಡಲಿ ಎಂದು ಕುದಿದು ಕುದಿದು ಗೋಳಾಡಿದಳು.

ಬ್ರಾಹ್ಮಣಾರ್ಥದಿಂದಲೇ ಜೀವನ ನಡೆಯಬೇಕಾಗಿದ್ದ, ಭೋಜನವೆಂದರೆ ಹತ್ತು ಮೈಲಿ ಎಗ್ಗಿಲ್ಲದೆ ಕಾಲಿ ಹಿಡಿದು ನಡೆದುಬಿಡುತ್ತಿದ್ದ ದಾಸಾಚಾರ್ಯ ತನ್ನ ಕಷ್ಟವನ್ನ ತೋಡಿಕೊಂಡ :

"ಅವನನ್ನು ನಮ್ಮ ಅಗ್ರಹಾರದಲ್ಲಿ ಇಟ್ಟುಕೊಂಡೀವಿ ಅಂತ—ನಿಮಗೆಲ್ಲ ತಿಳಿದಿರೋ ಹಾಗೆ ಸಂತರ್ಪಣೆ ಬ್ರಾಹ್ಮಣಾರ್ಥ ಅದು ಇದೂಂತ ಯಾವುದಕ್ಕೂ ಎರಡು ವರ್ಷ ನಮಗೆ ಕರೆ ಬರಲಿಲ್ಲ. ಈಗ ದುಡುಕಿ ನಾವೇನಾದರೂ ಅವನ ಶವಸಂಸ್ಕಾರ ಮಾಡಿದ್ದೇ ಆದ ಪಕ್ಷದಲ್ಲಿ ಬ್ರಾಹ್ಮಣಾರ್ಥಕ್ಕೆ ಸೊನ್ನೆಯೇ ಸರಿ. ಅಂದರೆ ಈಗ ಅವನ ಶವಾನ್ನ ಅಗ್ರಹಾರದಾಗ ಇಟ್ಟುಕೊಂಡು ಊಟ ಬಿಟ್ಟು ಉಪವಾಸ ಇರಲಿಕ್ಕೆ ಶಕ್ಯವೂ ಇಲ್ಲ. ಈ ಧರ್ಮಸಂಕಟದಲ್ಲಿ ಪ್ರಾಣೇಶಾಚಾರ್ಯರು ಧರ್ಮಸೂಕ್ಷ್ಮ ಏನೂಂತ ತಿಳಿದು ಹೇಳಬೇಕು. ಅವರು ಅಂದದ್ದಕ್ಕೆ ಎದುರು ಹೇಳೋರು ಯಾರು ನಮ್ಮ ಮತದಲ್ಲಿ...."

ಇದು ತಮಗೆ ಸೇರಿದ ಪ್ರಶ್ನೆಯಲ್ಲವೆಂದು ಉದಾಸೀನರಾದ ದುರ್ಗಾಭಟ್ಟರು ಚಂದ್ರಿಯನ್ನು ಪರೀಕ್ಷಿಸುತ್ತ ಕೂತರು. ಸಾಮಾನ್ಯ ಮನೆಯಿಂದ ಹೊರಗೆ ಹೊರಡದಿದ್ದ, ಕುಂದಾಪುರದಿಂದ ನಾರಣಪ್ಪ ಮೆಚ್ಚಿ ತಂದ ಈ ವಸ್ತು ಇಷ್ಟು ಪಕ್ಕಾಗಿ ಅವರ ರಸಿಕ ಕಣ್ಣಿಗೆ ಸಿಕ್ಕದ್ದು ಇವತ್ತೇ ಪ್ರಥಮ ಬಾರಿಗೆ. ಥೇಟು ವಾತ್ಸ್ಯಾಯನೋಕ್ತ ವರ್ಣನೆಯ ಚಿತ್ತಿನಿ. ಉಂಗುಷ್ಠಕ್ಕಿಂತ ಉದ್ದವಾದ ಆ ಬೆರಳು ನೋಡು. ಆ ಮೊಲೆಗಳನ್ನು ನೋಡು, ಸಂಭೋಗದಲ್ಲಿವಳು ಗಂಡನ್ನು ಹೀರಿಬಿಡುತ್ತಾಳೆ. ಚಂಚಲವಾಗಿರಬೇಕಾಗಿದ್ದ ಕಣ್ಣುಗಳು ಈಗ ದುಃಖದಿಂದ ಭೀತಿಯಿಂದ ಬಾಡಿ, ಆಪ್ಯಾಯಮಾನವಾಗಿದ್ದಾಳೆ. ಅವರ ಮಲಗುವ ಕೋಣೆಯಲ್ಲಿ ತೂಗುಹಾಕಿದ್ದ ಆ ರವಿವರ್ಮನ ಪಟದ ಅಂಚಲ್ಲಿ ಬಡತನದ ಸೆರಗಿಗೆ ಮೀರಿದ ಮೊಲೆಗಳನ್ನು ಸಂಕೋಚದಿಂದ ಮುಚ್ಚಿಕೊಂಡ ಮತ್ಸ್ಯಗಂಧಿಯ ಮೂಗು, ಕಣ್ಣು, ತುಟಿ: ಇವಳಿಗೆಂದು ನಾರಣಪ್ಪ ಶಾಲಿಗ್ರಾಮವನ್ನೆಸೆದ, ಮಾಂಸ-ಮದ್ಯಾಹಾರ ಮಾಡಿದ ಎಂಬೋದು ಆಶ್ಚರ್ಯವಲ್ಲ. ಅವನ ಧೈರ್ಯ ಆಶ್ಚರ್ಯ. ಆ ಮುಸಲ್ಮಾನ ಹುಡುಗಿಯನ್ನು ಮದುವೆಯಾದ ಜಗನ್ನಾಥ ಶೃಂಗಾರಶತಕದಲ್ಲಿ ಮ್ಲೇಚ್ಛಕನ್ನಿಕೆಯ ಮೊಲೆಗಳನ್ನುವರ್ಣಿಸಿದ್ದು ನೆನಪಾಗುತ್ತದೆ. ಪ್ರಾಣೇಶಾಚಾರ್ಯರು

ಇಲ್ಲದಿದ್ದರೆ, ನಾರಣಪ್ಪ ಸತ್ತಿರದಿದ್ದರೆ, ಅರಸಿಕರಾದರೂ ಈ ಬ್ರಾಹ್ಮಣರಿಗೆ ಆ ಶ್ಲೋಕವನ್ನು ಹೇಳಿ ವಿವರಿಸಿಬಿಡುತ್ತಿದ್ದರು. ಕಾಮಾತುರಾಣಾಂ—ಅರ್ಥಾತ್ ನಾರಣಪ್ಪನಂತಹವರಿಗೆ—ನ ಭಯಂ, ನ ಲಜ್ಜಾ.

ಸಭೆ ಮೌನವಾಗಿದ್ದುದನ್ನು ಕಂಡು ದುರ್ಗಾಭಟ್ಟರು ಅಂದರು :

"ನಾವು ಹೇಳಬೇಕಾದ್ದೆಲ್ಲ ಹೇಳಿಯಾಯಿತಲ್ಲ. ಸತ್ತವರ ತಪ್ಪನ್ನ ಹೆಕ್ಕಿ ಏನು ಪ್ರಯೋಜನ? ಈಗ ಪ್ರಾಣೇಶಾಚಾರ್ಯರು ಹೇಳಲಿ. ನಿಮಗೆ ಹೇಗೋ ನನಗೂ ಅವರು ಗುರುಸಮಾನರು. ಗರುಡಾಚಾರ್ಯ ಅವನ ಮತಗರ್ವದಲ್ಲಿ ಏನೇ ಅನ್ನಲಿ...."

ಪ್ರಾಣೇಶಾಚಾರ್ಯರು ತಮ್ಮ ಪ್ರತಿ ಮಾತನ್ನು ತೂಕ ಮಾಡುತ್ತ, ತನ್ನ ಹೆಗಲಿನ ಮೇಲೆ ಇಡಿಯ ಅಗ್ರಹಾರದ ಬ್ರಾಹ್ಮಣ್ಯದ ರಕ್ಷಣೆಯ ಹೊರೆ ಇದೆಯೆಂಬುದನ್ನರಿತು ತಡವರಿಸುತ್ತ ಹೇಳಿದರು :

"ಗರುಡಾ ಹೇಳಿದ: ಅವನಿಗೂ ತನಗೂ ಆಣೆಭಾಷೆ ಆಗಿದೇಂತ. ಅದಕ್ಕೆ ಧರ್ಮಶಾಸ್ತ್ರದಲ್ಲಿ ನಿವಾರಣೆಯಿದೆ. ಶಾಂತಿ ಮಾಡಿಸಿಕೊಳ್ಳಬೇಕು. ಗೋದಾನವಾಗಬೇಕು. ಪುಣ್ಯಕ್ಷೇತ್ರವೊಂದಕ್ಕೆ ಹೋಗಿಬರಬೇಕು. ಇದು ಖರ್ಚಿನ ಪ್ರಶ್ನೆ. ಈ ಖರ್ಚನ್ನ ನೀನು ಮಾಡು ಎಂಬೋದಕ್ಕೆ ನನಗೆ ಅಧಿಕಾರ ಇಲ್ಲ. ಇನ್ನು ಲಕ್ಷ್ಮಣ, ದಾಸ ಮತ್ತು ಉಳಿದವರು ಎತ್ತಿದ ಪ್ರಶ್ನೆ: ನಾರಣಪ್ಪ ಸತ್ಕುಲಪ್ರಸೂತನಾದ ಬ್ರಾಹ್ಮಣ ನಡಕೊಳ್ಳೊ ಹಾಗೆ ನಡಕೊಳ್ಳಲಿಲ್ಲ; ಅಗ್ರಹಾರಕ್ಕೆ ಅಪಖ್ಯಾತಿ ತಂದ ಎಂಬೋದು. ಇದು ಗಾಢವಾದ ಪ್ರಶ್ನೆ. ಇದಕ್ಕೆ ಉತ್ತರ ನನಗೆ ಹೊಳೆಯುತ್ತಿಲ್ಲ. ಕಾರಣ, ಅವನು ಬ್ರಾಹ್ಮಣ್ಯವನ್ನು ಬಿಟ್ಟರೂ ಬ್ರಾಹ್ಮಣ್ಯ ಅವನನ್ನು ಬಿಡಲಿಲ್ಲ ಎಂಬೋದು. ಅವನಿಗೆ ಬಹಿಷ್ಕಾರ ಹಾಕಲಿಲ್ಲ. ಶಾಸ್ತ್ರರೀತಿಯಲ್ಲಿ ಅವನು ಬಹಿಷ್ಕೃತನಾಗದೆ ಸತ್ತದ್ದರಿಂದ ಅವನು ಬ್ರಾಹ್ಮಣನಾಗಿಯೇ ಸತ್ತಂತೆ. ಹಾಗೆ ವಿಚಾರ ಮಾಡಿದಲ್ಲಿ ಬ್ರಾಹ್ಮಣರಲ್ಲದವರಿಗೆ ಅವನ ಶವವನ್ನು ಮುಟ್ಟುವ ಅಧಿಕಾರವಿಲ್ಲ. ಮುಟ್ಟಲು ಬಿಟ್ಟರೆ ಆಗಲೂ ನಮ್ಮ ಬ್ರಾಹ್ಮಣ್ಯಕ್ಕೆ ವಂಚನೆ ಬಂದಂತೆ. ಇಷ್ಟೆಲ್ಲ ಇದ್ದೂ ಅವನು ನಡೆದುಕೊಂಡ ರೀತಿಯನ್ನು ಕಂಡು ಕೇಳಿ ನೋಡಿದ ನಿಮಗೆ ಸಂಸ್ಕಾರ ಮಾಡಿ ಎಂದು ಕಡ್ಡಾಯವಾಗಿ ಹೇಳಲಿಕ್ಕೂ ನನಗೆ ಅಂಜಿಕೆಯಾಗುತ್ತದೆ. ಏನು ಮಾಡೋದು, ಧರ್ಮಶಾಸ್ತ್ರ ಇದಕ್ಕೆ ಏನೆನ್ನುತ್ತೆ, ದೋಷಪರಿಹಾರಕ್ಕೆ ಶಾಂತಿ ಇತ್ಯಾದಿಗಳ ಪರಿಹಾರವಿದೆಯೋ...."

ಬ್ರಾಹ್ಮಣರೆಲ್ಲರೂ ಬೆರಗಾದರು. ಹೆಂಗಸರು ಚಾವಡಿಗೆ ಬಂದು ನಿಂತರು. ಯಾರೂ ತಮ್ಮ ಕಣ್ಣನ್ನು ನಂಬಲಿಲ್ಲ ; ಚಂದ್ರಿ ತನ್ನ ನಾಲ್ಕೆಳೆ ಬಂಗಾರದ ಸರ, ಕಡಗ ಬಳೆಗಳನ್ನು ಪ್ರಾಣೇಶಾಚಾರ್ಯರ ಎದುರಿಗಿಟ್ಟು, ಅವರ ಸಂಸ್ಕಾರದ ಖರ್ಚಿಗೆ ಎಂದು ತೊದಲಿ ತಾನು ಮೊದಲು ನಿಂತಲ್ಲಿ ಹೋಗಿ ನಿಂತಳು.

ಎರಡು ಸಾವಿರ ರೂಪಾಯಿಯ ಚಿನ್ನವಾದರೂ ಇದೆ ಅದರಲ್ಲಿ ಎಂದು ಹೆಂಗಸರು ಲೆಕ್ಕ ಹಾಕಿದರು. ಒಬ್ಬಳಾದಮೇಲೆ ಒಬ್ಬಳು ತನ್ನ ಗಂಡನ ಮುಖ ನೋಡಿದಳು. ಬ್ರಾಹ್ಮಣರೆಲ್ಲ ಮುಖ ತಗ್ಗಿಸಿದರು : ಅವರಿಗೆ ಭಯವಾಗಿತ್ತು. ಬಂಗಾರದ ಆಸೆಯಿಂದ ಬ್ರಾಹ್ಮಣ್ಯ ನಾಶವಾದೀತೆಂದು ದಿಗಿಲಾಯಿತು. ಆದರೆ ಕ್ಷಣಮಾತ್ರದಲ್ಲಿ ಪ್ರತಿಯೊಬ್ಬನ ಮನಸ್ಸಿನಲ್ಲೂ ಹೊಳೆದ ಪ್ರಶ್ನೆ: ನಾನಲ್ಲದೆ ಬೇರೆ ಬ್ರಾಹ್ಮಣ ನಾರಣಪ್ಪನ ಬೊಜ್ಜಮಾಡಿ, ಬ್ರಾಹ್ಮಣ್ಯವನ್ನೂ ಕಳೆದುಕೊಳ್ಳದೆ, ಬಂಗಾರವನ್ನೂ ತನ್ನ ಹೆಂಡತಿಯ ಕೊರಳಿಗೆ ಏರಿಸಿದರೆ? ಲಕ್ಷ್ಮಣಾಚಾರ್ಯ, ಗರುಡಾಚಾರ್ಯರ ನಡುವೆ ಇದ್ದ ಪರಸ್ಪರ ದ್ವೇಷ ಅಸೂಯೆ ಈ ಹೊಸ ಕಾರಣದಿಂದ ಇನ್ನಷ್ಟು ಹೊತ್ತಿ ಉರಿಯಿತು. ಇವ ಮಾನಗೆಟ್ಟು ತನಗೆ ಸೇರಬೇಕಾದ ಬಂಗಾರವನ್ನು ದೋಚಿ, ಬ್ರಾಹ್ಮಣ್ಯವನ್ನೂ ಕಳೆದುಕೊಳ್ಳದೆ, ಬಡ ಗೋವೊಂದನ್ನು ನೆವಕ್ಕೆ ದಾನಮಾಡಿ, ಇಹಪರವೆರಡನ್ನೂ ಗಟ್ಟಿಮಾಡಿಕೊಂಡರೆ? ದುರ್ಗಾಭಟ್ಟರೆಂದುಕೊಂಡರು : ಈ ಮಾಧ್ವರೇನಾದರೂ ನಾರಣಪ್ಪನ ಶವಸಂಸ್ಕಾರ ಮಾಡಲಿ, ನಾನು ಊರೂರು ತಿರುಗಿ ಇವರು ಎಸಗಿದ ಕೃತ್ಯವೆಂಥಾದ್ದು ಎಂದು ಬೀದಿಗೆಳೆಯುತ್ತೇನೆ. ದಾಸಾಚಾರ್ಯರಾದಿ ಬಡ ಬ್ರಾಹ್ಮಣರಿಗೆ ಬಾಯಲ್ಲಿ ನೀರೂರಿ ಕಣ್ಣುಗಳು ಒದ್ದೆಯಾದುವು. ಗರುಡ, ಲಕ್ಷ್ಮಣ ಎಲ್ಲಿ ನಮಗೆ ನಾರಣಪ್ಪನ ಕರ್ಮ ಮಾಡಲು ಬಿಟ್ಟಾರು? ಪ್ರಾಣೇಶಾಚಾರ್ಯರೊಬ್ಬರು ಮಾತ್ರ—'ಏನೋ ಒಳ್ಳೆಯದು ಮಾಡ ಹೋಗಿ ಈ ಚಂದ್ರಿ ಎಲ್ಲವನ್ನೂ ಹದಗೆಡಿಸಿದಳಲ್ಲ' ಎಂದು ಕಳವಳಪಟ್ಟರು.

ಯಾರು ಎಲ್ಲಿ ಒಪ್ಪಿಬಿಡುತ್ತಾರೋ ಎಂಬ ಭಯದಿಂದ ಪ್ರತಿಯೊಬ್ಬ ಬ್ರಾಹ್ಮಣನೂ ನಾರಣಪ್ಪನಿಂದ ತಮಗಾದ ಅನ್ಯಾಯಕ್ಕಿಂತ ಇನ್ನೊಬ್ಬನಿಗಾದ ಅನ್ಯಾಯವನ್ನ ಕಣ್ಣಿಗೆ ಕಟ್ಟುವಂತೆ ಆತುರವಾಗಿ, ಸ್ಪರ್ಧೆಯಲ್ಲಿ ವಿವರಿಸತೊಡಗಿದರು :

"ಗರುಡಾಚಾರ್ಯನ ಮಗ ಮನೆ ಬಿಟ್ಟು ಓಡಿ ಹೋಗಿ ಮಿಲಿಟರಿ

ಸೇರುವಂತೆ ಪ್ರೇರೇಪಿಸಿದವ ನಾರಣಪ್ಪನಲ್ಲದೆ ಯಾರು? ಆವನಿಗೆ ಪ್ರಾಣೇಶಾಚಾರ್ಯರು ವೇದ ಕಲಿಸಿ ಕೂಡ ಕೊನೆಗೆ ನಡೆದದ್ದು ನಾರಣಪ್ಪನ ಮಾತೇ. ನಮ್ಮ ಹುಡುಗರನ್ನೆಲ್ಲ ಕೆಡಿಸಬೇಕೆಂದು ಹಠ ತೊಟ್ಟನಲ್ಲ...."

"ಈಗ ಪಾಪ ಲಕ್ಷ್ಮಣಾಚಾರ್ಯನ ಅಳಿಯನನ್ನೆ ನೋಡಿ. ಪರದೇಶೀ ಹುಡುಗನನ್ನ ಸಾಕಿ ಸಲುಹಿ, ಮಗಳನ್ನು ಕೊಟ್ಟು ಮದುವೆ ಮಾಡಿದರೆ, ನಾರಣಪ್ಪ ಅವನ ಬುದ್ಧೀನ್ನೂ ಕೆಡಿಸಿದ. ತಿಂಗಳಲ್ಲಿ ಒಂದು ದಿನ ಅವನ ಮೋರೆ ಕಾಣೋದೇ ಕಷ್ಟ...."

"ಅದೂ ಹೋಗಲಿ ಎಂದರೆ, ಆ ಗಣಪತಿ—ಕಟ್ಟೇಲಿರೋ ಮೀನು ತಲೆ ತಲಾಂತರದಿಂದಲೂ ದೇವರದ್ದು. ಅದನ್ನು ಹಿಡಿದರೆ ರಕ್ತಕಾರಿ ಸಾಯುತ್ತಾರೆಂದು ಪ್ರತೀತಿಯಿದ್ದರೂ ಈ ಚಾಂಡಾಲ ಅದನ್ನು ನಿರ್ಲಕ್ಷ್ಯಿಸಿ ತುರುಕರನ್ನು ಕಟ್ಟಿಕೊಂಡು ಹೋಗಿ ಸಿಡಿಮದ್ದು ಹಾಕಿ ಮೀನುಗಳನ್ನು ಕೊಂದ. ಈಗ ಶೂದ್ರಾದಿಗಳೂ ಅಲ್ಲಿ ಹೋಗಿ ಮೀನು ಹಿಡಿಯುತ್ತಾರೆ. ಬ್ರಾಹ್ಮಣರ ವರ್ಚಸ್ಸೇ ಅನ್ಯರ ಮೇಲೆ ಇರದ ಹಾಗೆ ಮಾಡಿದ ಅಧಮಾ ಅವ. ಅದೂ ಹೋಗಲಿ ಎಂದರೆ, ನಮ್ಮ ಅಗ್ರಹಾರಾನ್ನ ಹಾಳುಮಾಡಿದ್ದು ಸಾಲದೂಂತ ಪಾರಿಜಾತಪುರದ ಹುಡುಗರಿಗೆ ನಾಟಕದ ಹುಚ್ಚು ಹತ್ತಿಸಿದ."

"ಚಾಂಡಾಲನಿಗೆ ಬಹಿಷ್ಕಾರ ಹಾಕಿಸಿಬಿಡಬೇಕಿತ್ತು. ಏನು?"

"ಅದೆಲ್ಲಿ ಸಾಧ್ಯವಾಗುತ್ತಿತ್ತೊ, ಗರುಡ? ಬಹಿಷ್ಕಾರ ಹಾಕಿಸಿದರೆ ನಾನು ಮುಸಲ್ಮಾನನಾಗುತ್ತೇನೆ ಎಂದು ಹೆದರಿಸಿದ. ಪ್ರಥಮ ಏಕಾದಶಿ ದಿನ ತುರುಕರನ್ನು ಅಗ್ರಹಾರಕ್ಕೆ ತಂದು ಊಟ ಹಾಕಿದ. ಬಹಿಷ್ಕಾರ ಹಾಕಿ ನೋಡಿ—ನಾನು ತುರುಕನಾಗಿ, ನಿಮ್ಮನ್ನೆಲ್ಲ ಕಂಬಕ್ಕೆ ಕಟ್ಟಿಸಿ, ನಿಮ್ಮ ಬಾಯಿಗಿಷ್ಟು ಗೋಮಾಂಸ ತುರುಕಿ, ನಿಮ್ಮೆಲ್ಲರ ಬ್ರಾಹ್ಮಣ್ಯ ನಾಶಾ ಆಗೋಹಾಗೆ ಮಾಡ್ತೇನೆ ಎಂದಿದ್ದ. ಅವನು ತುರುಕಾ ಆಗಿಬಿಟ್ಟಿದ್ದರೆ ಅವನನ್ನ ಅಗ್ರಹಾರದಿಂದ ಓಡಿಸೋಕ್ಕೆ ಕಾಯಿದೆಯೂ ಇಲ್ಲ. ಏನು ಮಾಡೋದು ಹೇಳು ಇಂಥಾ ಸಂದಿಗ್ಧದಲ್ಲಿ? ಪ್ರಾಣೇಶಾಚಾರ್ಯರೂ ಕೈಕಟ್ಟಿ ಕೂರಲಿಲ್ಲವ?"

ಕಲಸಿದ ದಿಂಡುಮಾವಿನ ಗೊಜ್ಜಿನ ಅನ್ನವನ್ನು ಒಂದು ತುತ್ತೂ ತಿನ್ನಲಾರದೆ ಆಪೋಶನ ತೆಗೆದುಕೊಂಡು ಏಳಬೇಕಾಗಿ ಬಂದಿದ್ದರಿಂದ ಪ್ರಕ್ಷುಬ್ಧನಾಗಿದ್ದ ದಾಸಾಚಾರ್ಯ ತನ್ನ ಕೊನೆಯ ಮಾತು ಸೇರಿಸಿದ:

"ಅವನ ಅಪ್ಪ ಸತ್ತಮೇಲೆ ಅವನ ಹಿತ್ತಲಿನ ಹಲಸಿನಹಣ್ಣಿನ ಜೇನಿನಂತಹ ಒಂದು ತೊಳೆ ಒಬ್ಬ ಬ್ರಾಹ್ಮಣನ ಬಾಯಿಗೂ ದಕ್ಕಲಿಲ್ಲ...."

ಬಂಗಾರವನ್ನೆ ದುರುಗುಟ್ಟಿ ನೋಡುತ್ತಿದ್ದ ಹೆಂಗಸರಿಗೆ ತಮ್ಮ ಗಂಡಂದಿರ ಮಾತು ಕೇಳಿ ನಿರಾಶೆಯಾಯಿತು. ಗರುಡಾಚಾರ್ಯನ ಹೆಂಡತಿ ಸೀತಾ ದೇವಿಗೆ ತನ್ನ ಮಗ ಮಿಲಿಟರಿ ಸೇರಿದ್ದರ ಬಗ್ಗೆ ಅಧಿಕಪ್ರಸಂಗ ಮಾಡಲು ಏನು ಹಕ್ಕು ಲಕ್ಷ್ಮಣಾಚಾರ್ಯನಿಗೆ ಎಂದೂ, ಲಕ್ಷ್ಮಣಾಚಾರ್ಯನ ಹೆಂಡತಿ ಅನಸೂಯಳಿಗೆ ತನ್ನ ಅಳಿಯನ ಮಾತನ್ನೆತ್ತಲು ಗರುಡಾಚಾರ್ಯನಿಗೆ ಏನು ಹಕ್ಕು ಎಂದೂ, ಕೋಪ ಬಂದಿತು.

ಇದೆಂತಹ ಪರೀಕ್ಷೆ ಬಂತಪ್ಪ ಎಂದು ಪ್ರಾಣೇಶಾಚಾರ್ಯ ಸ್ವಗತವೆನ್ನು ವಂತೆ ಅಂದರು:

"ಈಗೇನು ಉಪಾಯ ಹಾಗಾದರೆ....ಅಗ್ರಹಾರದಲ್ಲೊಂದು ಹೆಣ ಇಟ್ಟುಕೊಂಡು ಕೈಕಟ್ಟಿ ಕೂರೋದು ಸಾಧ್ಯವ? ಸನಾತನಧರ್ಮದ ಪ್ರಕಾರ ಅಗ್ರಹಾರದಿಂದ ಹೆಣಾ ತೆಗೆದುಕೊಂಡು ಹೋಗೋವರೆಗೆ ದೇವರ ಪೂಜೆ, ಸ್ನಾನ, ಸಂಧ್ಯಾವಂದನೆ, ಊಟ, ಉಪಚಾರ ಏನೂ ನಡೆಯೋವಂತಿಲ್ಲ.... ಬಹಿಷ್ಕೃತನಲ್ಲದ್ದರಿಂದ ಬ್ರಾಹ್ಮಣರಲ್ಲದೆ ಬೇರೆ ಯಾರೂ ಅವನ ಹೆಣಾ ಮುಟ್ಟುವಂತಿಲ್ಲ...."

"ಬಹಿಷ್ಕಾರ ಹಾಕದೇ ಬಂದದ್ದೆ ಸಂದಿಗ್ಧ...."

ನಾರಣಪ್ಪನಿಗೆ ಬಹಿಷ್ಕಾರ ಹಾಕಿಸಬೇಕೆಂದು ಹಿಂದಿನಿಂದ ಗಲಾಟೆ ಮಾಡುತ್ತ ಬಂದಿದ್ದ ಗರುಡಾಚಾರ್ಯ—"ನನ್ನ ಮಾತನ್ನ ನೀವು ಕೇಳಲಿಲ್ಲ" ಎಂದು ಮೂದಲಿಸುವ ಧ್ವನಿಯಲ್ಲಿ ಹೇಳಿದ.

"ಅವನು ಮುಸಲ್ಮಾನನಾಗಿಬಿಟ್ಟಿದ್ದರೆ ಈ ಅಗ್ರಹಾರಾನ್ನ ನಾವೇ ಬಿಡ ಬೇಕಾಗಿ ಬಂದುಬಿಡ್ತಿತ್ತಲ್ಲ. ನಮಗೆ ದಿಕ್ಕೇ ಇಲ್ಲದೆ ಹೋಗ್ತಿತ್ತಲ್ಲ...."

ಬ್ರಾಹ್ಮಣರೆಲ್ಲ ಒಟ್ಟಾಗಿ ವಾದಿಸಿದರು.

ಇಡೀ ದಿನ ಊಟವಿಲ್ಲದೆ ಇರುವುದರ ಸಂಕಟವನ್ನು ಕಲ್ಪಿಸಿಕೊಂಡ ದಾಸಾಚಾರ್ಯನಿಗೆ ಥಟ್ಟನೆ ಒಂದು ಸೂಚನೆ ಹೊಳೆಯಿತು. ಹರ್ಷಿತನಾಗಿ ಎದ್ದುನಿಂತು ಹೇಳಿದ:

"ಪಾರಿಜಾತಪುರದ ಬ್ರಾಹ್ಮಣರಿಗೂ ನಾರಣಪ್ಪನಿಗೂ ಸ್ನೇಹವಿತ್ತೆಂದು ಕೇಳಿಬಲ್ಲೆ. ಪರಸ್ಪರ ಊಟ-ಉಪಚಾರವೂ ಇತ್ತಂತೆ. ಅಲ್ಲಿ ಹೋಗಿ ಕೇಳುವ. ಅವರ ಆಚಾರ ನಮ್ಮದರ ಹಾಗೆ ಬಿಗಿಯಲ್ಲವಲ್ಲ...."

ಪಾರಿಜಾತಪುರದವರು ಅಡ್ಡಪಂಕ್ತಿ ಬ್ರಾಹ್ಮಣರು; ಸ್ಮಾರ್ತರು. ಹಿಂದೆ ಒಂದು ಕಾಲದಲ್ಲಿ ಒಬ್ಬ ವಿಧವೆ ಬಸುರಾದ್ದನ್ನ ಅಗ್ರಹಾರದವರು ಮುಚ್ಚಿಟ್ಟು

ಕೊಂಡರೆಂದೂ, ಶೃಂಗೇರಿಯ ಗುರುಗಳಿಗೆ ಈ ಸುದ್ದಿ ತಲುಪಿ ಇಡೀ ಅಗ್ರಹಾರಕ್ಕೆ ಬಹಿಷ್ಕಾರ ಹಾಕಿದರೆಂದೂ ಪ್ರತೀತಿ. ಪಾರಿಜಾತಪುರದವರು ಒಟ್ಟಿನಲ್ಲಿ ಸುಖಿಗಳು; ನೇಮ ನಿಷ್ಠೆಯೆಂದು ಕುಣಿಯುವವರಲ್ಲ; ಅಡಿಕೆ ತೋಟ ಮಾಡುವುದರಲ್ಲಿ ನಿಸ್ಸೀಮರು—ಶ್ರೀಮಂತರು. ಆದಕಾರಣದಿಂದ ದುರ್ಗಾಭಟ್ಟನಿಗೆ ಅವರ ಮೇಲೆ ಪ್ರೀತಿ, ಅಲ್ಲದೆ ಎಷ್ಟೆಂದರೂ ತನ್ನ ಹಾಗೆ ಸ್ಮಾರ್ತರಲ್ಲವೆ ಎಂದು ಗುಟ್ಟಾದ ಅಭಿಮಾನ. ಗುಪ್ತವಾಗಿ ಆಗ ಈಗ ಅಲ್ಲಿ ಅವ ಅವಲಕ್ಕಿ ಉಪ್ಪಿಟ್ಟು ಕಾಫಿಯನ್ನು ಸೇವಿಸಿದ್ದೂ ಉಂಟು. ಖುದ್ದಾಗಿ ಊಟ ಮಾಡುವಷ್ಟು ಮುಂದೆ ಬಿದ್ದಿದ್ದಿಲ್ಲ—ಅಷ್ಟೆ. ವ್ಯವಹಾರದ ಹೊರತಾಗಿ ಇನ್ನೊಂದು ಅವನಿಗಿದ್ದ ಆಕರ್ಷಣೆಯೆಂದರೆ ಪಾರಿಜಾತಪುರದ ಎಲೆಯಡಿಕೆ ತಿನ್ನುವ ಸಕೇಶಿ ವಿಧವೆಯರು. ದಾಸಾಚಾರ್ಯನ ತಲೆಹರಟೆಗೆ ಕ್ರುದ್ಧನಾಗಿ 'ಈ ಮಾಧ್ವನ ಸೊಕ್ಕೆ—ಉಣ್ಣಲಿಕ್ಕೆ ಗತಿಯಿಲ್ಲದಿದ್ದರೂ' ಎಂದು ಎದ್ದುನಿಂತು:

"ನೀನು ಆಡಿದ್ದು ಪರಮ ಅನ್ಯಾಯದ ಮಾತು. ನೀವೇನೋ ಅವರು ಅಷ್ಟಪಂಕ್ತಿ ಬ್ರಾಹ್ಮಣರೂಂತ ತಿಳಿದರೂ, ಅವರು ತಾವು ಕೀಳೆಂದು ಭಾವಿಸಿಲ್ಲವಲ್ಲ? ನಿಮ್ಮ ಮತದವನ ಹೆಣಾನ ತೆಗೆಯೋದರಿಂದ ನಿಮ್ಮ ಜಾತಿ ಹೋಗೋದಾದರೆ ಅವರದ್ದೂ ಇನ್ನಷ್ಟು ಹೋದಂತೆ ಅಲ್ಲವೆ? ನೀವು ಹೋಗಿ ಕೇಳೋ ಸಾಹಸ ಮಾಡಿ—ತಕ್ಕ ಪೂಜೆ ಮಾಡಿಸಿಕೊಂಡು ಬರ್ತೀರಿ ಅಷ್ಟೆ. ಪಾರಿಜಾತಪುರದ ಮಂಜಯ್ಯನ ಹತ್ತಿರ ನಿಮ್ಮನ್ನೆಲ್ಲ ಕೊಳ್ಳುವಷ್ಟು ಹಣಾ ಇದೆ ಗೊತ್ತುಂಟ....?"

ಪ್ರಾಣೇಶಾಚಾರ್ಯರು ದುರ್ಗಾಭಟ್ಟನ ಕೋಪವನ್ನು ಶಮನ ಮಾಡಲು ಹೇಳಿದರು:

"ನೀವು ಅನ್ನೋದು ನ್ಯಾಯ, ಭಟ್ಟರೆ. ನಾವು ಮಾಡದ್ದನ್ನು ಇನ್ನೊಬ್ಬರ ಕೈಲಿ ಮಾಡಿಸೋದು ಬ್ರಾಹ್ಮಣ್ಯ ಅಲ್ಲ. ಆದರೆ ರಕ್ತಸಂಬಂಧ ಹೇಗೆ ದೊಡ್ಡದೋ ಸ್ನೇಹಸಂಬಂಧಾನೂ ಹಾಗೆ ದೊಡ್ಡದು ತಾನೆ? ನಾರಣಪ್ಪನಿಗೂ ಅವರಿಗೂ ಸ್ನೇಹಾ ಇರೋದು ನಿಜವಾದರೆ ಅವರಿಗೆ ತಮ್ಮ ಮಿತ್ರನೊಬ್ಬ ಸತ್ತ ವಾರ್ತೆ ತಿಳಿಯೋದು ಅವಶ್ಯಾಂತ ನೀವು ಒಪ್ಪುತ್ತೀರಿ ತಾನೆ?"

ದುರ್ಗಾಭಟ್ಟರು—"ಒಪ್ಪಿದೆ, ಆಚಾರ್ಯರೆ. ನಿಮ್ಮ ಮತದವರ ಬ್ರಾಹ್ಮಣ್ಯವೆಲ್ಲ ನಿಮ್ಮ ಕೈಯಲ್ಲಿದೆ ಈಗ. ತಮ್ಮ ಜವಾಬ್ದಾರಿ ದೊಡ್ಡದು. ತಾವು ನಿರ್ಧರಿಸಿದ್ದಕ್ಕೆ ಯಾರು ಅಡ್ಡಿ ಮಾಡ್ತಾರೆ?" ಎಂದು ಸತ್ಯವಾಗಿ ಅನ್ನಿಸಿದ್ದನ್ನು ಅಂದು ಸುಮ್ಮನಾದರು.

ಮತ್ತೆ ಬಂಗಾರದ ಪ್ರಶ್ನೆ ಎದ್ದಿತು. ಪಾರಿಜಾತಪುರದವರು ಸಂಸ್ಕಾರ ಮಾಡಲು ಒಪ್ಪಿದರೆ ಅವರಿಗೆ ಬಂಗಾರ ಸೇರುವುದು ಸರಿಯೋ ತಪ್ಪೋ? ಲಕ್ಷ್ಮಣಾಚಾರ್ಯರ ಹೆಂಡತಿ ಅನಸೂಯಳಿಗೆ ತನ್ನ ತಂಗಿಯ ಮೈಮೇಲೆ ಇರಬೇಕಾಗಿದ್ದ ಆಭರಣ ಆ ಅಷ್ಟಪಂಕ್ತಿ ಬ್ರಾಹ್ಮಣರಿಗೆ ದಕ್ಕುವುದು ಸಹಿಸಲಿಲ್ಲ. ತಡೆದುಕೊಳ್ಳಲಾರದೆ ಅಂದುಬಿಟ್ಟಳು:

"ಯಾರ ಆಸ್ತಿಯೆಂದು ಅವಳು ಈ ಬಂಗಾರಾನ್ನ ಸರಭಾರೆ ಮಾಡ್ತಾಳಂತೆ? ಎಲ್ಲ ನೆಟ್ಟಗಿದ್ದಿದ್ದರೆ ನನ್ನ ತಂಗಿಯ ಕೊರಳಲ್ಲಿರಬೇಕಾಗಿತ್ತು ಅದು" ಎಂದು ಬಿಕ್ಕಿ ಅತ್ತಳು.

ಹೆಂಡತಿಯ ಮಾತು ಲಕ್ಷ್ಮಣಾಚಾರ್ಯನಿಗೆ ಸರಿಯೆನ್ನಿಸಿದರೂ ತನ್ನ ಪತಿತ್ವಕ್ಕೆ ಚ್ಯುತಿಯಾಗದಿರಲೆಂದು,

"ಗಂಡಸರ ಕಾರುಬಾರಿನಲ್ಲಿ ನಿನ್ನದೇನು ಹರಟೆ—ಸುಮ್ಮನಿರು" ಎಂದು ಗದರಿಸಿದನು.

ಕ್ರುದ್ಧನಾದ ಗರುಡಾಚಾರ್ಯ,

"ಒಳ್ಳೆ ಮಾತಾಯಿತು. ಈ ಬಂಗಾರ ಧರ್ಮಸ್ಥಳದ ನ್ಯಾಯದ ಪ್ರಕಾರ ನನಗೆ ಸೇರಬೇಕು" ಎಂದು ಗುಡುಗಾಡಿದ.

ಬೇಸರ ಬಂದು ಪ್ರಾಣೇಶಾಚಾರ್ಯರು,

"ನೀವಷ್ಟು ತಾಳ್ಮೆಯಿಂದ ನಡೆದುಕೊಳ್ಳಿರಪ್ಪ. ನಮ್ಮ ಮುಂದಿರೋದು ಸಂಸ್ಕಾರವಾಗಬೇಕಾದ ಶವ. ಬಂಗಾರದ ವಿಷಯ ನನಗೆ ಬಿಡಿ. ಮೊದಲು ಪಾರಿಜಾತಪುರದವರಿಗೆ ಸುದ್ದಿ ಮುಟ್ಟಿಸಿ. ಅವರಾಗಿ ಸ್ವತಃ ಸಂಸ್ಕಾರ ನಡೆಸೋದಾದರೆ ನಡೆಸಲಿ...." ಎಂದು ಸಮಾಧಾನ ಹೇಳಿ, "ನೀವಿನ್ನು ಹೊರಡಿ. ನಾನಷ್ಟು ಮನುಸ್ಮೃತಿ ಇತ್ಯಾದಿ ಶಾಸ್ತ್ರಗಳನ್ನ ಹುಡುಕಿ ನೋಡ್ತೇನೆ—ಈ ಸಂದಿಗ್ಧಕ್ಕೆ ಉತ್ತರವಿದೆಯೋ ಅಂತ" ಎಂದು ಎದ್ದು ನಿಂತರು. ಚಂದ್ರಿ ತಲೆಯ ಮೇಲೆ ಸೆರಗು ಹೊದ್ದು, ಪ್ರಾಣೇಶಾಚಾರ್ಯರನ್ನು ಆರ್ತಳಾಗಿ ನೋಡಿದಳು.

## ಅಧ್ಯಾಯ : ಎರಡು

ಮಜ್ಜಿಗೆ-ಬೇರಿನಲ್ಲಿ ಜಿರಳೆ; ಉಗ್ರಾಣದಲ್ಲಿ ಹೆಗ್ಗಣ; ನಡುಮನೆಯಲ್ಲಿ ಹಗ್ಗದ ಮೇಲೆ ಮಡಿಸೀರೆ, ಮಡಿವಸ್ತ್ರ; ಅಂಗಳದಲ್ಲಿ ಒಣಗಲೆಂದು

ಚಾಪೆಯ ಮೇಲೆ ಹಾಕಿದ ಹಪ್ಪಳ, ಸಂಡಿಗೆ, ಬಾಳಕದ ಮೆಣಸಿನಕಾಯಿ ; ಹಿತ್ತಲಿನಲ್ಲಿ ತುಳಸಿ—ಇವು ಅಗ್ರಹಾರದ ಮನೆಮನೆಗೂ ಸಾಮಾನ್ಯ. ವಿನಾಯಿತಿ ಎಂದರೆ ಹಿತ್ತಲಲ್ಲಿ ಬೆಳೆಸಿದ ಬಗೆಬಗೆಯ ಪುಷ್ಪವೃಕ್ಷಗಳು ; ಭೀಮಾಚಾರ್ಯನ ಹಿತ್ತಲಿನಲ್ಲಿ ಪಾರಿಜಾತ, ಪದ್ಮನಾಭಾಚಾರ್ಯನಲ್ಲಿ ಮಲ್ಲಿಗೆ, ಲಕ್ಷ್ಮಣಾಚಾರ್ಯನಲ್ಲಿ ಕೆಂಡಸಂಪಿಗೆ, ಗರುಡಾಚಾರ್ಯನಲ್ಲಿ ರಂಜ, ದಾಸಾಚಾರ್ಯನಲ್ಲಿ ಮಂದಾರ, ದುರ್ಗಾಭಟ್ಟನಲ್ಲಿ ಶಂಖಪುಷ್ಪ, ಬಿಲ್ವಪತ್ರೆ. ದೇವರ ಪೂಜೆಗೆಂದು ಪ್ರತಿನಿತ್ಯ ಪ್ರತಿಯೊಬ್ಬನ ಮನೆಯಿಂದಲೂ ಪ್ರತಿಯೊಬ್ಬನೂ ಹೂವನ್ನಾರಿಸಲು ಹೋಗುವನು ; ಕುಶಲಪ್ರಶ್ನೆ ಮಾಡುವನು. ನಾರಣಪ್ಪನ ಮನೆಯಲ್ಲಿ ಬಿಟ್ಟ ಹೂ ಮಾತ್ರ ಚಂದ್ರಿಯ ತುರುಬಿಗೆ, ಮಲಗುವ ಕೋಣೆಯಲ್ಲಿದ್ದ ಹೂದಾನಿಗೆ. ಸಾಲದೆನ್ನುವುದಕ್ಕೆ ಮನೆಯ ಮುಂದೆಯೇ ಸರ್ಪಗಳಿಗೆ ಪ್ರಿಯವಾದ, ದೇವರ ಮುಡಿಗೆ ಅನರ್ಹವಾದ ತಾಮಸ ಪುಷ್ಪ—ರಾತ್ರಿರಾಣಿ. ಅದರ ಗೊಂಚಲು ಗೊಂಚಲು ಹೂವಿನ ರಾಶಿ ಕತ್ತಲಿನಲ್ಲಿ ಮದದಂತೆ ಆಡರಿ ಅದರ ನಿಶಾಚರ ವಾಸನೆಯನ್ನು ಚೆಲ್ಲುತ್ತದೆ ; ಸರ್ಪಬಂಧನದಲ್ಲೆಂಬಂತೆ ಅಗ್ರಹಾರಕ್ಕೆ ಆಗ್ರಹಾರವೇ ತತ್ತರಿಸುತ್ತದೆ ; ಸೂಕ್ಷ್ಮ ಮೂಗಿನವರು ತಲೆಬೇನೆ ಬರುತ್ತದೆಂದು ಪಂಚೆಯಿಂದ ಮೂಗು ಮುಚ್ಚಿ ನಡೆಯುತ್ತಾರೆ. ಕೂಡಿಟ್ಟ ಬಂಗಾರವನ್ನು ಕದಿಯಲು ಕಳ್ಳರು ಬರದಿರಲೆಂದು ಸರ್ಪಗಾವಲಿಗೆ ಅದನ್ನು ಬೆಳೆಸಿದ್ದಾನೆ ಎಂದು ಬುದ್ಧಿವಂತರು ಅನ್ನುವುದೂ ಉಂಟು. ಮೋಟು ಜಡೆಯ ಸೊರಗಿದ ಮೋರೆಯ ಮುತ್ತೈದೆಯರು ಮಂದಾರ ಮಲ್ಲಿಗೆ ಮುಡಿದರೆ ಕಪ್ಪು ನಾಗರದಂತಹ ಕೂದಲಿನ ಚಂದ್ರಿ ತುರುಬು ಹಾಕಿ ಕೆಂಡಸಂಪಿಗೆ, ಕೇದಗೆ ಮುಡಿಯುತ್ತಾಳೆ. ಕತ್ತಲಾದರೆ ಅಗ್ರಹಾರದ ಮೇಲೆ ರಾತ್ರಿರಾಣಿಯ ರಾಜ್ಯಭಾರವಾದರೆ, ಹಗಲು ಬ್ರಾಹ್ಮಣರು ಮೈಗೆ ಹಚ್ಚಿದ ಗಂಧದ, ಪಾರಿಜಾತ ಇತ್ಯಾದಿ ಮೃದು ಪುಷ್ಪಗಳ ಸೌಮ್ಯವಾಸನೆ. ಹೀಗೆಯೇ ಒಂದೊಂದು ಮನೆಯ ಹಿತ್ತಲಿನಲ್ಲಿ ಒಂದೊಂದು ರುಚಿಯ ಹಲಸು, ಮಾವು. 'ಹಣ್ಣನ್ನು ಹಂಚಿ ತಿನ್ನು, ಹೂವನ್ನು ಕೊಟ್ಟು ಮುಡಿ' ಎಂಬ ನಾಣ್ನುಡಿಯ ಮೇರೆಗೆ ಫಲ ಪುಷ್ಪದ ಹಂಚಿಕೆ ನಡೆಯುತ್ತದೆ. ಲಕ್ಷ್ಮಣಾಚಾರ್ಯ ಮಾತ್ರ ಮರದಲ್ಲಿ ಬಿಟ್ಟ ಹಣ್ಣನ್ನು ಗುಪ್ತವಾಗಿ ಅರ್ಧಕ್ಕರ್ಧ ಸಾಗಿಸಿ ಅಂಗಡಿ ಕೊಂಕಣಿಯರಿಗೆ ಮಾರುತ್ತಾನೆ. ಅವನದ್ದು ಬಲು ಜಿಪುಣ ಪ್ರಾಣ. ಹೆಂಡತಿಯ ತೌರಿನ ಕಡೆಯವರು ಬಂದಾಗ ಹದ್ದಿನ ಕಣ್ಣಿನಿಂದ ಹೆಂಡತಿಯ ಕೈಯನ್ನು

ಕಾಯುತ್ತಾನೆ; ಎಲ್ಲಿ ಏನನ್ನು ತೌರಿಗೆ ಕದ್ದುಕೊಡುತ್ತಾಳೋ ಎಂದು. ಚೈತ್ರ ವೈಶಾಖದಲ್ಲಿ ಪ್ರತಿ ಮನೆಯಲ್ಲೂ ಕೋಸುಂಬರಿ ಪಾನಕದ ದಾನ ನಡೆಯುತ್ತದೆ; ಕಾರ್ತಿಕದಲ್ಲಿ ದೀಪಾರತಿಗೆ ಪರಸ್ಪರ ಕರೆಯುತ್ತಾರೆ. ನಾರಣಪ್ಪನೊಬ್ಬ ಇವಕ್ಕೆಲ್ಲ ವಿನಾಯಿತಿ. ಅಗ್ರಹಾರದ ಬೀದಿಯ ಎರಡು ಪಕ್ಕಕ್ಕೂ ಒಟ್ಟು ಹತ್ತು ಮನೆಗಳು. ಎಲ್ಲದಕ್ಕಿಂತ ದೊಡ್ಡ ಮನೆ ನಾರಣಪ್ಪ ನದು—ಒಂದು ತುದಿಯಲ್ಲಿ. ಒಂದು ಪಕ್ಕದ ಮನೆಯವರ ಹಿತ್ತಲಿಗೆ ಹತ್ತಿಕೊಂಡ ತುಂಗೆ. ನದಿಗೆ ಇಳಿಯಲು ಹಿಂದಿನ ಪುಣ್ಯಾತ್ಮರು ಕಟ್ಟಿಸಿದ ಮೆಟ್ಟಲುಗಳು. ಶ್ರಾವಣದಲ್ಲಿ ತುಂಗೆ ಏರಿ, ಅಗ್ರಹಾರಕ್ಕೆ ನುಗ್ಗಿಬಿಡುವವ ಳಂತೆ ಮೂರು ನಾಲ್ಕು ದಿನ ಅಬ್ಬರಿಸಿ, ಮಕ್ಕಳ ಕಣ್ಣಿಗೆ ಕಿವಿಗೆ ಗೌಜಿನ ಹಬ್ಬವಾಗಿ, ಮತ್ತೆ ಇಳಿದು, ನಡುಬೇಸಗೆಯಲ್ಲಿ ಮೂರು ಸೀಳಿನ ಜಳಜಳ ಹೊಳೆಯಾಗುತ್ತಾಳೆ. ಆಗ ಬ್ರಾಹ್ಮಣರು ಮರಳಿನಲ್ಲಿ ಬಣ್ಣದ ಸೌತೆ, ಕಲ್ಲಂಗಡಿಹಣ್ಣನ್ನು ಬೆಳೆದು ಮಳೆಗಾಲಕ್ಕಷ್ಟು ತರಕಾರಿ ಮಾಡಿಕೊಳ್ಳು ತ್ತಾರೆ. ವರ್ಷದಲ್ಲಿ ಹನ್ನೆರಡು ತಿಂಗಳ ಕಾಲವೂ ಬಾಳೆಹಗ್ಗದಲ್ಲಿ ಈ ಬಣ್ಣದ ಸೌತೆಕಾಯಿಗಳು ಮಾಡಿಗೆ ತೂಗುಬಿದ್ದಿರುತ್ತವೆ. ಮಳೆಗಾಲದಲ್ಲಿ ಅದರದ್ದೆ ಪಲ್ಯ, ಹುಳಿ, ಗೊಜ್ಜು, ಅದರ ಬೀಜದ ಸಾರು; ಬಸುರಿಯರಂತೆ ಬ್ರಾಹ್ಮಣರು ಹುಳಿಮಾವಿನ ಗೊಜ್ಜುಸಾರಿಗೆ ಹಾತೊರೆಯುತ್ತಾರೆ. ಹನ್ನೆ ರಡು ತಿಂಗಳೂ ವ್ರತ, ಬ್ರಾಹ್ಮಣಾರ್ಥ, ಮದುವೆ, ಮುಂಜಿ, ಶ್ರಾದ್ಧದ ಕರೆ ಗಳು. ಆರಾಧನೆ, ಟೀಕಾಚಾರ್ಯರ ಪುಣ್ಯದಿನ ಇತ್ಯಾದಿ ದೊಡ್ಡ ಹಬ್ಬ ಗಳಿಗೆ ಮೂವತ್ತು ಮೈಲಿ ದೂರದಲ್ಲಿದ್ದ ಮಠದಲ್ಲಿ ಊಟ—ಹೀಗೆ ಬ್ರಾಹ್ಮಣರ ಜೀವನ ಸಾಂಗವಾಗಿ ಸಾಗುತ್ತದೆ.

ಈ ಅಗ್ರಹಾರದ ಹೆಸರು ದೂರ್ವಾಸಪುರ. ಅದರ ಹಿಂದೊಂದು ಸ್ಥಳ-ಪುರಾಣವುಂಟು. ಹರಿಯುವ ತುಂಗಾನದಿಯ ಮಧ್ಯದಲ್ಲಿ ಪುಟ್ಟ ದ್ವೀಪದೋ ಪಾದಿಯಲ್ಲಿ ವೃಕ್ಷಗಳಿಂದ ಕಗ್ಗಂಟಾದ ಒಂದು ಗುಡ್ಡವಿದೆ. ಅಲ್ಲಿ ದೂರ್ವಾಸರು ತಪಸ್ಸು ಮಾಡುತ್ತಿದ್ದರೆಂದು ಪ್ರತೀತಿ. ದ್ವಾಪರ ಯುಗದಲ್ಲಿ ಒಂದು ವಿಶೇಷ ಘಟನೆ ನಡೆಯಿತು. ಇಲ್ಲಿಂದ ಹತ್ತು ಮೈಲಿ ದೂರದಲ್ಲಿರುವ ಕೈಮರದಲ್ಲಿ ಪಂಚಪಾಂಡವರು ಅರಣ್ಯವಾಸ ಮಾಡುತ್ತಿದ್ದರಂತೆ—ಸ್ವಲ್ಪ ಕಾಲ. ಒಮ್ಮೆ ದ್ರೌಪದಿದೇವಿಗೆ ನೀರಿನಲ್ಲಿ ಈಜಬೇಕೆಂದು ಮನಸ್ಸಾಯಿ ತಂತೆ. ಕೈಹಿಡಿದವಳ ಸರ್ವ ಆಸೆಯನ್ನೂ ಈಡೇರಿಸುವ ಭೀಮಸೇನ ತುಂಗಾ ನದಿಗೆ ಕಟ್ಟುಹಾಕಿದ. ಇತ್ತ ಬೆಳಿಗ್ಗೆ ದೂರ್ವಾಸ ಮುನಿಗಳು ಸ್ನಾನ ಸಂಧ್ಯಾ

ವಂದನಾದಿ ಕಾರ್ಯಗಳಿಗೆಂದು ಎದ್ದು ನೋಡುತ್ತಾರೆ!—ತುಂಗೆಯಲ್ಲಿ ನೀರೇ ಇಲ್ಲ. ಕುಪಿತರಾದರು. ಧರ್ಮಜನಿಗೆ ಇದು ತಕ್ಷಣ ದಿವ್ಯದೃಷ್ಟಿಯಿಂದ ಹೊಳೆದು ಭೀಮಸೇನನಿಗೆ ಬುದ್ಧಿ ಹೇಳಿದ. ಸರ್ವದಾ ಅಣ್ಣನ ಮಾತಿಗೆ ಬದ್ಧನಾದ ವಾಯುಪುತ್ರ ತಾನು ಹಾಕಿದ ಕಟ್ಟೆಯನ್ನು ಮೂರು ಕಡೆ ಒಡೆದು ನೀರು ಬಿಟ್ಟ. ಈಗಲೂ ಕೈಮರದಲ್ಲಿ ಕಟ್ಟೆಯಿಂದ ಮೂರು ಸೀಳಾಗಿ ನದಿ ಹರಿಯುತ್ತದೆ. ದೂರ್ವಾಸಪುರದ ಬ್ರಾಹ್ಮಣರು ಅಕ್ಕಪಕ್ಕದ ಅಗ್ರಹಾರಗಳ ಬ್ರಾಹ್ಮಣರಿಗೆ ಹೇಳುವುದುಂಟು: ದ್ವಾದಶಿಯ ದಿನ ಪ್ರಾತಃಕಾಲ ಪುಣ್ಯಾತ್ಮರಿಗೆ ದೂರ್ವಾಸ ವನದಿಂದ ಶಂಖಧ್ವನಿ ಕೇಳಿಸುವುದೆಂಬ ಪ್ರತೀತಿ ಇದೆ—ಅಂತ. ಆದರೆ ಅಗ್ರಹಾರದ ಬ್ರಾಹ್ಮಣರು ಯಾರೂ ತಾವದನ್ನು ಕೇಳಿದ್ದೇವೆ ಎನ್ನುವ ಅವಿನಯ ತೋರಿಸುವುದಿಲ್ಲ.

ಹೀಗೆ ಸ್ಥಳಪುರಾಣದಿಂದ; ಮಹಾತಪಸ್ವಿ, ಜ್ಞಾನಿ, ವೇದಾಂತ ಶಿರೋಮಣಿ ಪ್ರಾಣೇಶಾಚಾರ್ಯರು ಬಂದು ನೆಲಸಿದ್ದರಿಂದ; ಚಾಂಡಾಲ ನಾರಣಪ್ಪನ ದೆಸೆಯಿಂದ, ದಶದಿಕ್ಕುಗಳಲ್ಲೂ ಅಗ್ರಹಾರ ಪ್ರಖ್ಯಾತವಾಗಿತ್ತು. ಆಚಾರ್ಯರ ಪುರಾಣ ಕೇಳಲೆಂದಂತೂ ಅಕ್ಕಪಕ್ಕದ ಅಗ್ರಹಾರದವರು ರಾಮನವಮಿ ಇತ್ಯಾದಿ ದಿನಗಳಲ್ಲಿ ಕಿಕ್ಕಿರಿಯುತ್ತಾರೆ. ಪ್ರಾಣೇಶಾಚಾರ್ಯರಿಗೆ ನಾರಣಪ್ಪ ದೊಡ್ಡದೊಂದು ಸಮಸ್ಯೆ. ದೇವರ ದಯಾನ್ನ ಸಮರ್ಥಿಸಬೇಕೆಂದು ರೋಗಿಯಾದ ಹೆಂಡತಿಯ ಸೇವೆಯನ್ನು ಮಾಡುತ್ತ, ನಾರಣಪ್ಪನ ದುರ್ನಡತೆಯನ್ನು ತಾಳ್ಮೆಯಿಂದ ಹೊಟ್ಟೆಯಲ್ಲಿ ಹಾಕಿಕೊಳ್ಳುತ್ತ, ಅರ್ಥ ಗೊತ್ತಿರದ ಮಂತ್ರಗಳಿಂದ ತುಂಬಿದ ಬ್ರಾಹ್ಮಣರ ತಲೆಯ ಕತ್ತಲನ್ನು ಮಂತ್ರಗಳನ್ನು ವಿವರಿಸುವುದರ ಮೂಲಕ ತುಸುತುಸುವೇ ದೂಡುತ್ತ, ಅವರ ಗೃಹಸ್ಥಧರ್ಮದ ಗಂಧ ತೇಯುತ್ತದೆ....

ಇತ್ತ ಬ್ರಾಹ್ಮಣರು ಭತ್ತ ಉದುರಿದರೆ ಅರಳಾಗುವಷ್ಟು ಕಾದ ಅಗ್ರಹಾರದ ಬೀದಿಯಲ್ಲಿ ತಲೆಯನ್ನು ಅಂಗವಸ್ತ್ರದಿಂದ ಮುಚ್ಚಿ ಹೊಟ್ಟೆಯ ಹಸಿವಿಗೆ ನಿಸ್ತ್ರಾಣರಾಗಿ ನಡೆದು, ಮೂರು ಸೀಳಾದ ತುಂಗಾನದಿಯನ್ನು ದಾಟಿ ತಂಪಾದ ಕಾಡು ಹೊಕ್ಕು ಒಂದು ಗಂಟೆ ಕಾಲೆಳೆದು ಪಾರಿಜಾತಪುರ ತಲ್ಪಿದರು. ಬಿಸಿಲಿಗೆ ನೆಲದ ತಂಪನ್ನು ಎತ್ತಿ ಹಿಡಿದ ಅಡಿಕೆತೋಟದ ಹಸಿರು ಗಾಳಿಯಿಲ್ಲದೆ ತೂಗಲಿಲ್ಲ. ಸುಡುವ ಧೂಳಿನಲ್ಲಿ ಬ್ರಾಹ್ಮಣರ ಬರಿಗಾಲು ಚುರುಚುರು ಸುಟ್ಟಿತು. ನಾರಾಯಣ ಸ್ಮರಣೆ ಮಾಡುತ್ತ ಬ್ರಾಹ್ಮಣರು ತಾವೆಂದೂ ಕಾಲಿಡದ ಸಾಹುಕಾರ ಮಂಜಯ್ಯನ ಮನೆಯೊಳಕ್ಕೆ ಬಂದರು.

ಜಮಾ-ಖರ್ಚು ಬರೆಯುತ್ತ ಕೂತಿದ್ದ ವ್ಯವಹಾರಕುಶಲ ಸಾಹುಕಾರರು:

"ಓಹೋಹೋ ಏನು ಬ್ರಾಹ್ಮಣರ ಗುಂಪಿಗೆ ಗುಂಪೇ ಇತ್ತ ಕಾಲು ಬೆಳೆಸಿತಲ್ಲ, ಓಹೋಹೋ ಬರೋಣವಾಗಲಿ, ಕೂರೋಣವಾಗಲಿ, ಆಯಾಸ ಪರಿಹಾರ ಮಾಡಿಕೊಳ್ಳೋಣಾಗಲಿ, ಕಾಲು ತೊಳೆಯುತ್ತೀರ. ಇವಳೇ ಒಂದಿಷ್ಟು ಬಾಳೆಹಣ್ಣನ್ನು ತನ್ನೇ...."

ಎಂದು ಸಾಂಗವಾಗಿ ಉಪಚಾರ ಹೇಳಿದರು. ಅವರ ಮಡದಿ ತಟ್ಟೆಯಲ್ಲಿ ಹಣ್ಣನ್ನು ತಂದು 'ಬಂದಿರಾ' ಎಂದು ಹೇಳಿ ಒಳಗೆ ಹೋದಳು. ಗರುಡಾಚಾರ್ಯ ಉಸ್ಸೆಂದು ಕೂತು ನಾರಣಪ್ಪ ಸತ್ತ ವಿಷಯವನ್ನು ತಿಳಿಸಿದ.

"ಅಯ್ಯೋ ಭಗವಂತ—ಆತನಿಗೇನಾಗಿತ್ತಪ್ಪ? ಎಂಟು ಹತ್ತು ದಿನಗಳ ಕೆಳಗೆ ವ್ಯವಹಾರಕ್ಕೆಂದು ಇತ್ತ ಬಂದಿದ್ದ, ಶಿವಮೊಗ್ಗೆಗೆ ಹೋಗಿ ಬರುತ್ತೇನೆಂದ. ನಿಮ್ಮದೇನಾದರೂ ಕೆಲಸವಿದೆಯೆ ಎಂದು ಕೇಳಿದ. ಮಂಡಿಯಲ್ಲಿ ಅಡಿಕೆ ಮಾರಾಟವಾಯಿತೆ ತಿಳಿದು ಬಾ ಎಂದಿದ್ದೆ. ಶಿವ ಶಿವಾ....ಬೃಹಸ್ಪತಿವಾರ ಹಿಂದಕ್ಕೆ ಬರುತ್ತೇನೆಂದಿದ್ದ....ಏನು ಕಾಯಿಲೆಯಂತೆ?"

"ನಾಲ್ಕು ದಿನದ ಜ್ವರ ಅಷ್ಟೆ—ಬಾವು ಎದ್ದಿತ್ತಂತೆ" ಎಂದು ಹೇಳಿದ ದಾಸಾಚಾರ್ಯ.

"ಶಿವ ಶಿವಾ" ಎಂದು ಮಂಜಯ್ಯ ಕಣ್ಣು ಮುಚ್ಚಿ ಬೀಸಣಿಗೆಯಿಂದ ಗಾಳಿ ಹಾಕಿಕೊಂಡರು. ಶಿವಮೊಗ್ಗೆಗೆ ಆಗಾಗ್ಗೆ ಹೋಗಿಬರುತ್ತಿದ್ದ ಅವರಿಗೆ ಎರಡಕ್ಷರದ ಭಯಂಕರ ರೋಗದ ಹೆಸರು ಮನಸ್ಸಿಗೆ ಬಂದು ಅದನ್ನು ತನಗೆ ಸ್ಪಷ್ಟವಾಗಿ ಹೇಳಿಕೊಳ್ಳಲೂ ಭೀತಿಯಾಗಿ—'ಶಿವ ಶಿವಾ' ಎಂದರು.

ಕ್ಷಣಮಾತ್ರದಲ್ಲಿ ಪಾರಿಜಾತಪುರದ ಅಡ್ಡಪಂಕ್ತಿ ಬ್ರಾಹ್ಮಣರೆಲ್ಲ ಕಟ್ಟೆಯ ಮೇಲೆ ಕೂಡಿದರು.

"ನಿಮಗೆಲ್ಲ ಗೊತ್ತುಂಟಲ್ಲ—" ವ್ಯವಹಾರದಲ್ಲಿ ಗಟ್ಟಿಗನಾದ ಗರುಡಾಚಾರ್ಯ ಹೇಳಿದ: "ಅಗ್ರಹಾರದ ನಮಗೂ ಅವನಿಗೂ ಜಗಳವಾಗಿ ಅನ್ನ ನೀರು ಇರಲಿಲ್ಲ. ನೀವೆಲ್ಲ ಅವನ ಮಿತ್ರರಾಗಿದ್ದಿರಲ್ಲ ಎಂದು, ಏನು. ಈಗ ಅವನ ಶವಸಂಸ್ಕಾರದ ಪ್ರಶ್ನೆ ಎದ್ದಿದ್ದರಿಂದ, ಏನು....?"

ಪಾರಿಜಾತಪುರದವರಿಗೆ ಮಿತ್ರವಿಯೋಗದಿಂದ ವ್ಯಥೆಯೊಯಿತು; ಮೇಲುಜಾತಿಯ ಬ್ರಾಹ್ಮಣನೊಬ್ಬನ ಶವಸಂಸ್ಕಾರದ ಸಂದರ್ಭ ದೊರೆತಿತೆಂದು ಸಂತೋಷವೂ ಆಯಿತು. ನಾರಣಪ್ಪ ತಮ್ಮಗಳ ಮನೆಯಲ್ಲಿ ಎಗ್ಗಿಲ್ಲದೆ

ಊಟಮಾಡುತ್ತಾನಲ್ಲ ಎಂಬುದೇ ಅವರಿಗೆ ಅವನ ಮೇಲೆ ಇದ್ದ ಪ್ರೀತಿಗೆ ಅರ್ಧ ಕಾರಣ.

ಪಾರಿಜಾತಪುರದ ಬ್ರಾಹ್ಮಣರಿಗೆ ಪುರೋಹಿತರಾದ ಶಂಕರಯ್ಯನವರು ಹೇಳಿದರು :

"ಬ್ರಾಹ್ಮಣಧರ್ಮದ ಪ್ರಕಾರ ಸರ್ಪವೂ ದ್ವಿಜ ಎಂದಿದೆ. ಅರ್ಥಾತ್ ಸರ್ಪದ ಹೆಣ ಕಣ್ಣಿಗೆ ಬಿದ್ದರೆ ಅದಕ್ಕೆ ಯಥೋಚಿತ ಸಂಸ್ಕಾರ ಮಾಡ ಬೇಕು, ಇಲ್ಲವೆ ಊಟ ಮಾಡುವಂತಿಲ್ಲ ಎಂಬ ವಿಧಿಯಿದೆ. ಇಂತಹ ಪ್ರಸಂಗ ದಲ್ಲಿ ಬ್ರಾಹ್ಮಣನೊಬ್ಬ ದೈವಾಧೀನನಾದಾಗ ನಾವು ಕೈಕಟ್ಟಿ ಕೂರುವುದು ಏನಕೇನ ಸರಿಯಲ್ಲ. ಏನೊಂತೀರಿ?"

ಎಂದವರು ತಮಗೂ ಶಾಸ್ತ್ರ ಗೊತ್ತಿದೆ, ನಿಮಗಿಂತ ನಾವು ಕೀಳಲ್ಲ ಎಂದು ಮಾಧ್ವರ ಗರ್ವ ಇಳಿಸಲು ಹೇಳಿದರು.

ಇದರಿಂದ ದುರ್ಗಾಭಟ್ಟರಿಗೆ ಅತೀವ ಕಳವಳವಾಯಿತು: ಈ ಭೋಳೇ ಬ್ರಾಹ್ಮಣ ದುಡುಕಿಬಿಟ್ಟು ಸ್ಮಾರ್ತರಿಗೇ ಅಪಕೀರ್ತಿ ಬರುವಂತೆ ಮಾಡಿ ಬಿಟ್ಟನಲ್ಲ ಎಂದು ವಕ್ರವಾಗಿ ಮಾತನ್ನಾಡಿದ :

"ಸರಿ ಸರಿ ಒಪ್ಪಿದೆ. ಪ್ರಾಣೇಶಾಚಾರ್ಯರೂ ಇದೇ ಹೇಳೋದು. ಆದರೆ ನಮಗೆ ಬಂದಿರೋ ಸಂದಿಗ್ಧ: ಮದ್ಯಮಾಂಸಾದಿಗಳನ್ನು ಮಾಡಿ ಸಾಲಿಗ್ರಾಮ ವನ್ನು ನೀರಿಗೆಸೆದ ನಾರಣಪ್ಪ ಬ್ರಾಹ್ಮಣ ಹೌದೆ ಅಲ್ಲವೆ ಎಂಬುದು. ಜಾತಿ ಕೆಡಲಿಕ್ಕೆ ಯಾರು ತಯ್ಯಾರು ಹೇಳಿ? ಆದರೆ ಬ್ರಾಹ್ಮಣನೊಬ್ಬನ ಶವಾನ್ನ ತೆಗೆಯದಿರೋದು ಅಧರ್ಮ ಎಂಬೋದನ್ನ ನಾನು ಸಂಪೂರ್ಣ ಒಪ್ಪು ತ್ತೇನೆ."

ಶಂಕರಯ್ಯನಿಗೆ ಎದೆ ಜಗ್ಗೆಂದು ಭೀತಿಯಾಯಿತು. ಮೊದಲೇ ಕೀಳೆಂದು ಜರಿಸಿಕೊಂಡ ತಮ್ಮವರು ಈ ಕೃತ್ಯದಿಂದ ಇನ್ನಷ್ಟು ಅಪಖ್ಯಾತರಾಗುವುದು ಅವರ ಮನಸ್ಸಿಗೆ ಸರಿಬರದೆ :

"ಹಾಗಿದ್ದಲ್ಲಿ, ಛಿ-ಛಿ-ಛಿ ನಾವು ದುಡುಕುವುದಿಲ್ಲಪ್ಪ. ನಿಮ್ಮಲ್ಲಿ ದಕ್ಷಿಣಕ್ಕೆ ಖ್ಯಾತರಾದ ಪ್ರಾಣೇಶಾಚಾರ್ಯರು ಇದ್ದಾರಲ್ಲ. ಅವರು ಆಪದ್ಧರ್ಮವೇನು, ಧರ್ಮಸೂಕ್ಷ್ಮವೇನು ಎಂಬೋದನ್ನ ತಿಳಿದು ಹೇಳಲಿ. ನಾವು ಖಂಡಿತ ನಾರಣಪ್ಪನ ಶವಸಂಸ್ಕಾರ, ವೈಕುಂಠಸಮಾರಾಧನೆಯನ್ನು ನಡೆಸೋಕೆ ಸಿದ್ಧ ರಿದ್ದೀವೆ" ಎಂದರು.

ಮಂಜಯ್ಯ—"ಖರ್ಚಿನ ಚಿಂತೆಯೇನೂ ಬೇಡ. ನನ್ನ ಮಿತ್ರನಲ್ಲವೆ ಅವ?

ನಾನೇ ಸ್ವತಃ ದಾನ ಇತ್ಯಾದಿಗಳನ್ನು ಮಾಡಿಸುತ್ತೇನೆ" ಎಂದು ಜಿಪುಣ ಮಾಧ್ವರಿಗೆ ಚುಚ್ಚಲೆಂದು ಹೇಳಿದರು.

## ಅಧ್ಯಾಯ : ಮೂರು

ಬ್ರಾಹ್ಮಣರೆಲ್ಲರೂ ಪಾರಿಜಾತಪುರಕ್ಕೆ ಹೊರಟುಹೋದಮೇಲೆ ಪ್ರಾಣೇಶಾಚಾರ್ಯರು ಕರುಣೆಯಿಂದ ಚಂದ್ರಿಗೆ 'ಕೂತುಕೊ' ಎಂದು ಹೇಳಿ ತನ್ನ ಹೆಂಡತಿ ಮಲಗಿದ್ದ ಊಟದ ಮನೆಗೆ ಬಂದರು. 'ಇವಳೇ, ಚಂದ್ರಿಯದು ತುಂಬ ನಿಷ್ಕಲ್ಮಷ ಹೃದಯ ಕಣೇ' ಎಂದು ಅವಳು ಬಂಗಾರವನ್ನು ಕೊಟ್ಟದ್ದು, ಅದರಿಂದ ಉದ್ಭವಿಸಿದ ಹೊಸ ಸಮಸ್ಯೆಯನ್ನು ವಿವರಿಸಿ, ತಾಳೆಗರಿ-ಗ್ರಂಥಗಳನ್ನೆಲ್ಲ ಬಿಚ್ಚಿ ಧರ್ಮಶಾಸ್ತ್ರವೇನೆನ್ನುತ್ತದೆಂದು ಹುಡುಕುತ್ತ ಕೂತರು. ಯಾವತ್ತಿನಿಂದಲೂ ಈ ನಾರಣಪ್ಪ ತನಗೆ ಸಮಸ್ಯೆಯಾಗಿಯೇ ಉಳಿದ. ಅಗ್ರಹಾರದಲ್ಲಿ ಕೊನೆಗೆ ಗೆಲ್ಲುವುದು ಸನಾತನ ಧರ್ಮವನ್ನು ಹಿಡಿದ ತನ್ನ ತಪಸ್ಸೋ ಅಥವಾ ಅವನ ರಾಕ್ಷಸಸ್ವಭಾವವೋ ಎಂದು ಅವರ ಹಟ. ಯಾವ ಶನಿಕಾಟದಿಂದ ಅವನು ಹೀಗಾದನೋ ಎಂದು ನೊಂದು, ದೇವರ ದಯದಿಂದ ಅವನು ಉದ್ಧಾರವಾಗಲಿ ಎಂದು ಅವರು ವಾರದಲ್ಲಿ ಎರಡು ದಿನ ರಾತ್ರೆ ಊಟ ಬಿಟ್ಟು ಒಪ್ಪತ್ತು ಮಾಡುತ್ತಿದ್ದರು. ಅಲ್ಲದೆ ಅವನ ಬಗ್ಗೆ ಅವರ ಹೃದಯದಲ್ಲಷ್ಟು ಪಶ್ಚಾತ್ತಾಪ, ಕಳವಳ ಇರೋಕ್ಕೆ ಕಾರಣ ಅವನ ತಾಯಿಗೆ ತಾನು ಕೊಟ್ಟದ್ದ ವಚನ : 'ನಿನ್ನ ಮಗನ ಹಿತಾನ್ನ ಕಾಯುತ್ತೇನೆ, ಅವನನ್ನು ಒಳ್ಳೆಯ ಮಾರ್ಗಕ್ಕೆ ತರುತ್ತೇನೆ'—ಹೀಗೆ ಸಾಯುವ ಮುದುಕಿಗೆ ಧೈರ್ಯ ಹೇಳಿದ್ದರು. ಆದರೆ ನಾರಣಪ್ಪ ಮಾರ್ಗ ಹತ್ತಲಿಲ್ಲ; ಬುದ್ಧಿವಾದ ಕಿವಿಗೆ ಹಾಕಿಕೊಳ್ಳಲಿಲ್ಲ. ತಾನು ವೇದ ಹೇಳಿ, ಮಂತ್ರಗಳನ್ನು ಬಾಯಿಪಾಠ ಮಾಡಿಸಿ ಬೆಳೆಸಿದ ಗರುಡನ ಮಗ ಶ್ಯಾಮ, ಲಕ್ಷ್ಮಣನ ಅಳಿಯ ಶ್ರೀಪತಿ—ಇಬ್ಬರನ್ನೂ ತನ್ನ ವರ್ಚಸ್ಸಿನಿಂದ ಕಸಿದುಕೊಂಡ. ಶ್ಯಾಮನಿಗೆ ಮನೆ ಬಿಟ್ಟು ಓಡಿಸಿ ಮಿಲಿಟರಿ ಸೇರಲು ಪ್ರೇರೇಪಿಸಿದ. ಗರುಡ ಲಕ್ಷ್ಮಣರು ತಂದ ದೂರುಗಳನ್ನು ಕೇಳಿ ಕೇಳಿ ಸಾಕಾಗಿ ಅವರು ಒಂದು ದಿನ ಅವನಲ್ಲಿಗೆ ಹೋಗಿದ್ದರು. ಸುಪ್ಪತ್ತಿಗೆಯ ಮೇಲೆ ಮಲಗಿದ್ದವ ತನ್ನನ್ನು ಕಂಡು, ಎದ್ದು ಕೂರುವಷ್ಟು ಮರ್ಯಾದೆ ತೋರಿಸಿದ. ಆದರೆ ಹಿತಾ ಹೇಳಲು ಹೋದರೆ

ಯದ್ವಾತದ್ವ ಮಾತಾಡಿದ. ಬ್ರಾಹ್ಮಣಧರ್ಮವನ್ನ ಜರಿದ: 'ಇನ್ನು ನಿಮ್ಮ ಶಾಸ್ತ್ರ ನಡೆಯೋದಿಲ್ಲ. ಮುಂದೆ ಬರೋದು ಕಾಂಗ್ರೆಸ್ಸು. ಪಂಚಮರನ್ನ ದೇವಸ್ಥಾನದೊಳಕ್ಕೆ ಬಿಡಬೇಕು' ಎಂದೆಲ್ಲ ಏನೇನೊ, ಅಸಂಬದ್ಧ ಪ್ರಲಾಪಿಸಿದ. ಬೇಡವೋ ಎಂದೆ. ಆ ಶ್ರೀಪತಿಯನ್ನ ಅವನ ಹೆಂಡತಿಯಿಂದ ದೂರ ಮಾಡ ಬೇಡವೋ ಎಂದೆ. ಆಹಹಾ ಎಂದು ನಕ್ಕುಬಿಟ್ಟ. ಸುಖ ಕೊಡದ ಹುಡುಗಿಯ ಕೂಡ ಯಾರು ತಾನೇ ಸಂಸಾರ ಮಾಡುತ್ತಾರೆ ಆಚಾರ್ಯರೇ, ಗೊಡ್ಡು ಬ್ರಾಹ್ಮಣರನ್ನ ಬಿಟ್ಟರೆ—ಎಂದು ಮೂದಲಿಸಿದ. 'ಸಂಬಂಧಾಂತ ನನಗೆ ಭ್ರಾಂತಿ ಹಿಡಿದ ಹುಡುಗಿನ್ನ ಕಟ್ಟಿ ಹಾಳುಮಾಡಬೇಕೂಂತ ಇದ್ದಿರಲ್ಲ— ನೀವು-ಬ್ರಾಹ್ಮಣರು—ನಿಮ್ಮ ಧರ್ಮ ನಿಮಗೇ ಇರಲಿ—ಇರೋದು ಒಂದು ಆಯುಷ್ಯ. ನಾನು ಚಾರ್ವಾಕವಂಶದವ 'ಋಣಂ ಕೃತ್ವಾ ಘೃತಂ ಪಿಬೇತ್' —ಎಂದ. ಈ ಭೌತಶರೀರ ಶಾಶ್ವತವಲ್ಲಪ್ಪ ಎಂದು ಬೋಧಿಸಿದೆ; ಬೇಡಿದೆ; 'ನೀನು ಏನೇ ಮಾಡು, ಹುಡುಗರನ್ನಾದರೂ ಹಾಳುಮಾಡಬೇಡ' ಎಂದು ಅಂಗಲಾಚಿದೆ. ಅದಕ್ಕೂ ನಕ್ಕುಬಿಟ್ಟ. 'ಮುಂಡೆಯರ ಆಸ್ತಿಗೆ ಮುಟ್ಟುಗೋಲು ಹಾಕಿ, ಮಾಟಮಂತ್ರಮಾಡಿಸಿ, ಕೆಟ್ಟದ್ದು ಬಗೆಯುವ ಗರುಡ ನಿಮ್ಮ ಪ್ರಕಾರ ಬ್ರಾಹ್ಮಣನೋ?' ಎಂದು ಗೇಲಿ ಮಾಡಿದ. 'ಕೊನೆಯಲ್ಲಿ ಗೆಲ್ಲೋದು ನಾನೋ, ನೀವೋ? ನೋಡುವ ಆಚಾರ್ಯರೆ, ಎಷ್ಟು ದಿನ ಈ ಬ್ರಾಹ್ಮಣ್ಯ ಉಳಿಯುತ್ತೆ ಅಂತ? ಈ ಬ್ರಾಹ್ಮಣ್ಯದ ಮರ್ಯಾದೇನೆಲ್ಲ ನಾನು ಬೇಕಾದರೆ ಒಂದು ಹೆಣ್ಣಿನ ಸುಖಕ್ಕೆ ಸುಳಿದು ಹಾಕಿಬಿಡ್ತೇನೆ. ನೀವಿನ್ನು ಹೊರಡಿ. ಹೆಚ್ಚಿಗೆ ಮಾತಾಡಿ ನಿಮ್ಮನ್ನ ನೋಯಿಸೋಕ್ಕೆ ಇಷ್ಟವಿಲ್ಲ' ಎಂದುಬಿಟ್ಟಿದ್ದ. ಇಂತಹ ಪ್ರಾಣಿಗೆ ಬಹಿಷ್ಕಾರ ಹಾಕಿಸೋಕ್ಕೆ ನಾನು ಯಾಕೆ ಅಡ್ಡಬಂದೆ? ಭೀತಿಯೋ? ಪಶ್ಚಾತ್ತಾಪವೋ? ಕೊನೆಗೆ ನಾನೇ ಗೆಲ್ಲುವೆನೆಂಬ ಹಟವೋ? ಅಂತೂ ಅವನು ಅಂದ ಹಾಗೆ—ಬದುಕಿದ್ದಾಗ ಹೇಗೋ ಹಾಗೆ ಈಗ ಸತ್ತು ನನ್ನ ಬ್ರಾಹ್ಮಣ್ಯದ ಸತ್ವಪರೀಕ್ಷೆ ಮಾಡುತ್ತಿದ್ದಾನೆ.

ಕೊನೆಯ ಸಾರಿ ನಾರಣಪ್ಪನನ್ನು ನೋಡಿದ್ದೆಂದರೆ ಮೂರು ತಿಂಗಳ ಹಿಂದೆ ಚತುರ್ದಶಿಯ ಒಂದು ಸಂಜೆ. ಅವತ್ತು ಬೆಳಿಗ್ಗೆ ಅವ ಮುಸಲ್ಮಾನರನ್ನ ಕರೆದುಕೊಂಡು ಹೋಗಿ, ಗಣಪತಿ ದೇವಸ್ಥಾನದ ಹೊಳೆಯ ದೇವರ ಮೀನನ್ನು ಹಿಡಿದು, ಅಗ್ರಹಾರದಲ್ಲಿ ಎಲ್ಲರ ಕಣ್ಣೆದುರು ಎತ್ತಿಕೊಂಡು ಹೋದ ಎಂದು ಗರುಡಾಚಾರ್ಯ ದೂರು ತಂದಿದ್ದ. ಮೇಲಕ್ಕೆ ಬಂದು ಕೈಯಿಂದ ಅಕ್ಕಿಯನ್ನು ತಿಂದು, ಹೊಳೆಯಲ್ಲಿ ನಿರಂಬಳ ಕ್ರೀಡಿಸುವ ಆ ಆಳೆತ್ತರದ ಮೀನು

ಗಳನ್ನು ಹಿಡಿದರೆ ರಕ್ತ ಕಾರಿ ಸಾಯುತ್ತಾರೆಂಬ ನಂಬಿಕೆಯನ್ನು ನಾರಣಪ್ಪ ನಿರ್ಲಕ್ಷ್ಯಿಸಿದನೆಂದು ಪ್ರಾಣೇಶಾಚಾರ್ಯರಿಗೆ ಗಾಬರಿಯಾಯಿತು: ಇವ ಹೀಗೆ ದಾರಿ ಹಾಕಿಕೊಟ್ಟಮೇಲೆ ಶೂದ್ರಾದಿಗಳಾಗಿ ಎಲ್ಲರಿಗೂ ನ್ಯಾಯ ಧರ್ಮದ ಅಂಕೆ ತಪ್ಪಿಹೋಗದೆ ಇರುತ್ತದೋ? ದೈವಭಯದಿಂದಲಾದರೂ ಸಾಮಾನ್ಯರಲ್ಲಿ ಇಷ್ಟಾದರೂ ಧರ್ಮಬುದ್ಧಿ ಈ ಕಲಿಗಾಲದಲ್ಲಿ ಉಳಿದಿರೋದು. ಅದೂ ನಾಶವಾದರೆ? ಈ ಭೂಮಿಯನ್ನು ಎತ್ತಿಹಿಡಿಯೋ ಶಕ್ತಿ ಇನ್ನೆಲ್ಲಿ ಉಳಿದಿರುತ್ತೆ? ಈಗ ತಾನು ಸುಮ್ಮನಿರೋದು ಅತ್ಯಂತ ಅನುಚಿತವೆಂದು ದಡದಡನೆ ನಡೆದು ನಾರಣಪ್ಪನ ಮುಖಕ್ಕೆ ಮುಖಕೊಟ್ಟು ಅವನ ಪಡಸಾಲೆ ಯಲ್ಲಿ ನಿಂತರು.

ಕುಡಿದಿದ್ದ ಎಂದು ಕಾಣುತ್ತದೆ: ಕಣ್ಣು ಕೆಂಪಾಗಿತ್ತು, ಕ್ರಾಪು ಕೆದರಿತ್ತು....

ಆಗ—ತನ್ನನ್ನು ಕಂಡೊಡನೆ ಥಡ್ಡನೆದ್ದು ಬಟ್ಟೆಯಿಂದ ಬಾಯಿ ಮುಚ್ಚಿಕೊಂಡನಲ್ಲವೆ?

ಅವನ ಸ್ವಭಾವ ಚಕ್ರವ್ಯೂಹದಂತೆಂದು, ಅದರೊಳಕ್ಕೆ ತನಗೆ ಹೊಗಲು ಪ್ರಾಯಶಃ ಎಡೆಯಿಲ್ಲವೆಂದು ಕೆಲವೊಮ್ಮೆ ಪರಿತಪಿಸುತ್ತಿದ್ದ ಆಚಾರ್ಯರಿಗೆ, ಅವನ ಗರ್ವದ ರಾವಣತ್ವದಲ್ಲಿ ತನ್ನನ್ನು ಕಂಡು ಅಂಜುವಷ್ಟಾದರೂ ಬಿರುಕು ಬಿಟ್ಟದ್ದು ನೋಡಿ, ಒಳಗಿನಿಂದ ಸಾತ್ವಿಕಶಕ್ತಿ ನುಗ್ಗಿದಂತಾಗಿ ಆಶೋದಯವಾಯಿತು.

ಈಗ ಮಾತು ವ್ಯರ್ಥವೆಂದು ಅವರಿಗೆ ಗೊತ್ತು. ತನ್ನೊಳಗಿನ ಸಾತ್ವಿಕ ಗಂಗಾಜಲ ಅವನೊಳಕ್ಕೆ ಮೌನವಾಗಿ ನುಗ್ಗದ ಹೊರ್ತು ಅವನು ಅರಳುವವನಲ್ಲವೆಂದು ಅವರಿಗೆ ಗೊತ್ತು. ಗರುಡನಂತೆರಗಿ ಅವನನ್ನು ಜರ್ಜರಗೊಳಿಸಿ. ಒಳಗಿನ ಅಮೃತವನ್ನು ಪುಟಿಸಬೇಕೆಂದು ಕಾಮದಂತಹ ಆಸೆಯೆದ್ದಿತು.

ಕಠೋರವಾಗಿ ನೋಡಿದರು. ಸಾಮಾನ್ಯ ಪಾಪಿ ಅಂಜಿ, ಹೇಸಿ, ಭೂಗತವಾಗಬೇಕು—ಹಾಗೆ ನೋಡಿದರು. ಇವನ ಕಣ್ಣಿಂದ ಪಶ್ಚಾತ್ತಾಪದ ಎರಡು ಹನಿ ನೀರು ಬೀಳಲಿ ಸಾಕು. ತನಗಿಂತ ಐದು ವರ್ಷ ಕಿರಿಯವನಾದ ನಾರಣಪ್ಪನನ್ನು ಭ್ರಾತೃವಾತ್ಸಲ್ಯದಿಂದ ಹಿಡಿದಪ್ಪಿಬಿಡುತ್ತೇನೆಂದು ಕಾಮಿಸಿ ನೋಡಿದರು.

ನಾರಣಪ್ಪ ತಲೆ ತಗ್ಗಿಸಿದ. ಭರ್ರನೆ ಹಾರಿ ಕವಿದುಕೊಂಡ ಗರುಡನ

ತೊಡೆಗೆ ಸಿಕ್ಕಿದವನಂತೆ, ಕ್ಷಣ ಹುಳುವಾದಂತೆ, ಮುಚ್ಚಿದ ಬಾಗಿಲೊಂದನ್ನು ತುಸು ತೆರೆದು ಇಣುಕಿ ತಬ್ಬಿಬ್ಬಾದ ಹಾಗೆ—ಕಂಡ....

ಇಲ್ಲ. ಬಾಯಿಂದ ಬಟ್ಟೆಯನ್ನು ತೆಗೆದು, ಕುರ್ಚಿಯ ಮೇಲೆ ಬಿಸಾಕಿ, ಗಹಗಹಿಸಿ ನಕ್ಕ:

"ಚಂದ್ರೀ, ಎಲ್ಲಿ ಬಾಟಲು? ಆಚಾರ್ಯರಿಗಷ್ಟು ತೀರ್ಥ ಕೊಡು."

"ಬಾಯಿ ಮುಚ್ಚು!" ಪ್ರಾಣೇಶಾಚಾರ್ಯರು ಸರ್ವಾಂಗ ಕಂಪಿಸುತ್ತ, ತಮ್ಮ ವರ್ಚಸ್ಸಿನಿಂದ ಥಟ್ಟನೆ ಸುಣುಚಿಕೊಂಡವನನ್ನು ಕಂಡು, ಮೆಟ್ಟಿಲಿಳಿಯುವಾಗ ಪಾದ ತಪ್ಪಿದವರಂತೆ ಹತಾಶರಾದರು.

"ಆಹಾ! ಆಚಾರ್ಯರಿಗೂ ಸಿಟ್ಟು ಬರುತ್ತದಲ್ಲವೆ? ಕಾಮಕ್ರೋಧಾದಿಗಳು ನಮ್ಮಂತಹವರಿಗೆ ಮಾತ್ರವೆಂದು ತಿಳಿದಿದ್ದೆ. ಕಾಮನ ತುಳಿದವನಿಗೆ ಕೋಪ ಮೂಗಿನ ತುದೀಲೇ ಇರುತ್ತಂತೆ....ದೂರ್ವಾಸ, ಪರಾಶರ, ಭೃಗು, ಬೃಹಸ್ಪತಿ, ಕಾಶ್ಯಪ—ಚಂದ್ರೀ, ಎಲ್ಲಿ ಬಾಟಲು? ಅಲ್ಲ ಆಚಾರ್ಯರೇ, ನಿಮ್ಮ ಋಷಿಗಳು ಸೈ ಬೇಕಾದರೆ. ಮೀನಿನ ವಾಸನೆಯವಳನ್ನ ದೋಣಿಯಲ್ಲಿ ಕೆಡಸಿ ಸುಗಂಧಿಮಾಡಿದವನ ಹೆಸರೇನು? ಅಂತಹ ಪರಂಪರೇಲಿ ಬಂದ ಈ ಅಗ್ರಹಾರದ ಬಡ ಬ್ರಾಹ್ಮಣರನ್ನ ನೋಡಿರಪ್ಪ...."

"ನಾರಣಪ್ಪ, ಬಾಯಿ ಮುಚ್ಚು" ಎಂದೆ.

ಚಂದ್ರಿ ಬಾಟಲು ತರದಿದ್ದುದನ್ನು ಕಂಡು ನಾರಣಪ್ಪ ರೇಗಿ ಸ್ವತಃ ಉಪ್ಪರಿಗೆಗೆ ದಪದಪನೆ ಹತ್ತಿ ಸರಾಯನ್ನು ತಂದು ಬಟ್ಟಲು ತುಂಬಿಸಿದ. ಚಂದ್ರಿ ಬೇಡವೆಂದು ಅವನ ಕೈ ಹಿಡಿಯಹೋದರೆ ಅವಳನ್ನು ನೂಕಿದ. ಪ್ರಾಣೇಶಾಚಾರ್ಯರು ಕಣ್ಣುಮುಚ್ಚಿ ಹೊರಡಲೆಂದು ಬೆನ್ನು ತಿರುಗಿಸಿದರು.

"ಆಚಾರ್ಯರೆ, ಸ್ವಲ್ಪ ನಿಲ್ಲಿ" ಎಂದ. ತಾನೀಗ ಹೊರಟುಬಿಟ್ಟರೆ ಭೀತನಂತೆ ಕಾಣಿಸುವೆನೆಂದು ಹೆದರಿ ಪ್ರಾಣೇಶಾಚಾರ್ಯರು ಯಾಂತ್ರಿಕವಾಗಿ ನಿಂತರು. ಸರಾಯಿಯ ವಾಸನೆ ಅಸಹ್ಯವಾಯಿತು. "ಕೇಳಿ" ಎಂದು ನಾರಣಪ್ಪ ಆಜ್ಞೆ ಮಾಡಿ, ಬಟ್ಟಲಿನಿಂದ ಒಂದು ಗುಟುಕು ಕುಡಿದು ವಕ್ರವಾಗಿ ನಗುತ್ತ ಹೇಳಿದ:

"ಕೊನೆಗೆ ಗೆಲ್ಲೋದು ನಾನೋ ನೀವೋ—ನೋಡುವ. ನಾನು ಬ್ರಾಹ್ಮಣ್ಯದ ನಾಶಮಾಡ್ತೇನೆ. ಮಾಡಿಯೇ ತೀರ್ತೇನೆ. ನನ್ನ ದುಃಖವೆಂದರೆ ನಾಶಮಾಡೋಕ್ಕೆ ಈ ಅಗ್ರಹಾರದಲ್ಲಿ ಬ್ರಾಹ್ಮಣ್ಯಾನೇ ಉಳಿದಿಲ್ಲಲ್ಲಾಂತ—ನಿಮ್ಮೊಬ್ಬರನ್ನ ಬಿಟ್ಟರೆ, ಗರುಡ, ಲಕ್ಷ್ಮಣ, ದುರ್ಗಾಭಟ್ಟ—ಅಹಹಾ—ಎಂಥ ಬ್ರಾಹ್ಮಣರಯ್ಯ? ನಾನೇನಾದರೂ ಬ್ರಾಹ್ಮಣನಾಗಿ ಉಳಿದಿದ್ದರೆ

ನಿಮ್ಮ ಗರುಡಾಚಾರ್ಯ ನನ್ನನ್ನ ಆಪೋಶನಾ ತಗೊಂಡುಬಿಡ್ತಿದ್ದ. ಅಥವಾ ಆಸ್ತಿ ಮೇಲಿನ ಆಸೆಗೆ—ಹೇಲಿನಲ್ಲಿ ಬಿದ್ದಿರೋ ಕಾಸನ್ನ ನಾಲಗೇಂದ ನೆಕ್ಕಿ ತೆಗಿಯೋ ಆ ಲಕ್ಷ್ಮಣ ತನ್ನ ಇನ್ನೊಂದು ನರಪೇತಲ ನಾದಿನಿಯನ್ನ ನನಗೆ ಕಟ್ಟಿರುತ್ತಿದ್ದ. ಒಟ್ಟಿನಲ್ಲಿ—ಜುಟ್ಟು ಬಿಟ್ಟು, ಅಂಗಾರ ಹಾಕಿ ನಿಮ್ಮ ಕಟ್ಟೇ ಮೇಲೆ ಕೂತು, ನೀವು ಹೇಳೋ ಪುರಾಣಾನ್ನ ಕೇಳಿಸಿಕೊಂಡು ಇರಬೇಕಾಗಿತ್ತು...." ನಾರಣಪ್ಪ ಇನ್ನೊಂದು ಗುಟುಕು ಕುಡಿದು ತೇಗಿದ. ಒಳಗಿನಿಂದ ಭಯಗ್ರಸ್ತಳಾಗಿ ನೋಡುತ್ತ ನಿಂತಿದ್ದ ಚಂದ್ರಿ ಕೈಮುಗಿದು ಹೋಗಿರೆನ್ನುವಂತೆ ಸಂಜ್ಞೆ ಮಾಡಿದಳು. ಪ್ರಾಣೇಶಾಚಾರ್ಯರು ಮತ್ತೆ ತಿರುಗಿದರು—ಕುಡುಕನ ಜೊತೆ ಏನು ಹರಟೆ ಅಂತ.

"ಆಚಾರ್ಯರೆ, ಕೇಳಿ ಇಲ್ಲಿ. ನಿಮ್ಮ ಮಾತನ್ನೇ ಯಾವತ್ತೂ ಅಗ್ರಹಾರ ಕೇಳ್ತಾ ಇರಬೇಕೆಂದು ಯಾಕೆ ಗರ್ವ? ಸ್ವಲ್ಪ ನನ್ನ ಮಾತನ್ನೂ ಕಿವಿಗೆ ಹಾಕಿಕೊಳ್ಳಿ. ನಾನೊಂದು ಪುರಾಣ ಹೇಳ್ತೇನೆ. ಕೇಳಿ!

"ಒಂದು ಅಗ್ರಹಾರದಲ್ಲಿ ಒಬ್ಬ ಪರಮಪೂಜ್ಯ ಆಚಾರಿಯಿದ್ದ—ಒಂದಾನೊಂದು ಕಾಲದಲ್ಲಿ. ಅವನ ಹೆಂಡತಿ ಸದಾ ರೋಗಿಯಾದ್ದರಿಂದ ಸ್ತ್ರೀಸುಖವೇನೆಂದು ತಿಳಿಯದ ಅವನ ತೇಜಸ್ಸು—ಅಂದರೆ ಅವನ ಖ್ಯಾತಿ—ಊರೂರು ಹರಡಿತ್ತು. ಅಗ್ರಹಾರದಲ್ಲಿ ಉಳಿದ ಬ್ರಾಹ್ಮಣರು ಪರಮಪಾಪಿಗಳು. ಅನ್ನಮೂಲ, ಕಾಂಚನಮೂಲವಾದ ಸರ್ವಪಾಪಗಳನ್ನೂ ಮಾಡಿದವರು. ಆದರೆ ತಮ್ಮ ಪಾಪಾನ್ನ ಹೇಗೂ ಈ ಆಚಾರಿ ಮಾಡುವ ಪುಣ್ಯ ಮುಚ್ಚುತ್ತಲ್ಲಾಂತ ಅವರು ಇನ್ನಷ್ಟು ಪಾಪಾನ್ನ ಸಲೀಸಾಗಿ ಮಾಡತೊಡಗಿದರು. ಹೀಗೆ ಆಚಾರಿಯ ಪುಣ್ಯ ಏರಿದಷ್ಟೂ ಅವರ ಪಾಪಾನೂ ಏರಿತು. ಒಂದು ದಿನ ಒಂದು ತಮಾಷೆಯಾಯ್ತು. ಏನು ಆಚಾರ್ಯರೆ, ಕೇಳಿಸಿಕೊಳ್ಳುತ್ತಿದ್ದೀರೇನು? ನಾವು ಮಾಡೋ ಕರ್ಮಕ್ಕೆಲ್ಲ ತದ್ರೂಪವಾದ ಫಲ ಹೇಗೋ ಹಾಗೆ ತದ್ವಿರುದ್ಧವಾದ ಫಲಾನೂ ಪ್ರಾಪ್ತವಾಗುತ್ತದೆ ಎಂಬೋದು ನನ್ನ ಕತೆಯ ನೀತಿ. ಕೇಳಿಸಿಕೊಂಡು ಉಳಿದ ಬ್ರಾಹ್ಮಣರಿಗೂ ಹೇಳಿ.

"ಏನದು ತಮಾಷೇಂದರೆ ಆ ಅಗ್ರಹಾರದಲ್ಲಿ ಒಬ್ಬ ಯುವಕನಿದ್ದ. ಅವನ ಕೈಹಿಡಿದ ಹೆಂಡತಿ ಅವನ ಜೊತೆ ಮಲಗ್ತಾ ಇರಲಿಲ್ಲ—ಮಾತೃವಾಕ್ಯ ಪರಿಪಾಲನಾರ್ಥವಾಗಿ. ಆ ಯುವಕ ಈ ಆಚಾರಿ ಪುರಾಣ ಓದೋದನ್ನ ಕೇಳಲಿಕ್ಕೆಂದು ಪ್ರತಿ ಸಂಜೆಯೂ ಹಾಜರು. ಕಾರಣ—ಜೀವನದಲ್ಲಿ ಅನುಭವ ಇಲ್ಲದಿದ್ದರೂ ಈ ಆಚಾರಿ ಕಾವ್ಯಗೀವ್ಯಾಂದರೆ ಬಲೇ ರಸಿಕ.

ಒಂದು ದಿನ ಕಾಳಿದಾಸನ ಶಕುಂತಲೆಯ ವರ್ಣನೆ ನಡೆದಿತ್ತು. ಮುಟ್ಟಿ ಹೋದರೆ ಚಿಗುಟಿದಾಂತ ತಾಯಿಯ ಹತ್ತಿರ ಹೋಗಿ ದೂರು ಹೇಳುವ ಹೆಂಡತಿಯಿಂದ ಬೇಸತ್ತ ಈ ಯುವಕನಿಗೆ ಆಚಾರಿಯ ವರ್ಣನೆಯಿಂದ ತನ್ನ ಮೈಯೊಳಗೆ ಒಂದು ಹೆಣ್ಣು ಬೆಳೆದಂತಾಗಿ, ತೊಡೇಲಿ ಕಿಚ್ಚು ಉರಿದು —ಅಂದರೆ ಏನೂ ಅಂತ ನಿಮಗೆ ಗೊತ್ತೆ, ಆಚಾರ್ಯರೇ?—ಆಚಾರಿ ಜಗುಲಿಂದ ಜಿಗಿದ, ಓಡಿದ. ಹೆಚ್ಚು ಕೇಳಿಸಿಕೊಳ್ಳೊ ಸಹನೆಯಿಲ್ಲದೆ ಸೀದ ಹೊಳೆಗೆ ತಣ್ಣೀರಿನಲ್ಲಿ ಮಿಾಯಲೆಂದು ಓಡಿದ. ಪುಣ್ಯವಶಾತ್ ಅಲ್ಲೊಬ್ಬಳು ಹೊಲತಿ. ಬೆಳದಿಂಗಳು. ಪುಣ್ಯವಶಾತ್ ಅವಳ ಮೈಮೇಲೆ ಅಷ್ಟೇನೂ ವಸ್ತ್ರವಿಲ್ಲದೆ ನೋಡಬೇಕೆಂದು ಅವನು ಬಯಸಿದ ಅಂಗಾಂಗಗಳೆಲ್ಲ ನಿರಾ ಯಾಸವಾಗಿ ಕಣ್ಣಿನ ಎದುರಿನಲ್ಲಿ. ನಿಮ್ಮ ಋಷಿ ಒಲಿದ ಮತ್ಸ್ಯಗಂಧೀ ತರಹದವಳು ಅವಳು. ಇವಳೇ ಶಕುಂತಳಾಂತ ಭ್ರಮಿಸಿ ಈ ಬ್ರಾಹ್ಮಣ ಯುವಕ ಅವಳನ್ನ ಅಲ್ಲೇ ಸಂಭೋಗಿಸಿಬಿಟ್ಟ—ಚಂದ್ರಸಾಕ್ಷಿಯಾಗಿ.

"ಈಗ, ಅರ್ಥಮಾಡಿ ಹೇಳಿ, ಆಚಾರ್ಯರೆ: ಆ ಆಚಾರೀನೇ ಊರಿನ ಬ್ರಾಹ್ಮಣ್ಯಾನ್ನ ಹಾಳುಮಾಡಿದಂತೆ—ಹೌದೋ ಅಲ್ಲವೊ? ಅದಕ್ಕೇ ಹಿರಿಯರು ಹೇಳ್ತಾ ಇದ್ದದ್ದು: ವೇದ ಪುರಾಣ ಓದಿರೊ, ಆದರೆ ಅದಕ್ಕೆ ಅರ್ಥಮಾಡಲಿಕ್ಕೆ ಹೋಗಬೇಡಿರೊ—ಅಂತ. ಕಾಶಿಗೆ ಹೋಗಿ ಬಂದವರಲ್ಲವ ನೀವು? ನೀವೇ ಹೇಳಿ? ಬ್ರಾಹ್ಮಣ್ಯ ಯಾರಿಂದ ಕೆಟ್ಟಿತು?"

ನಾರಣಪ್ಪನ ಮಾತನ್ನು ನಿಶ್ಚಲವಾಗಿ ನಿಂತು ಕೇಳುತ್ತ ಕೇಳುತ್ತ ಪ್ರಾಣೇಶಾಚಾರ್ಯರಿಗೆ ಕಳವಳವಾಯಿತು: ಕುಡುಕನ ತಲೆ ಕೆಟ್ಟ ಮಾತೋ? ನಿಜವೋ? ತನ್ನಿಂದ ಅಂತಹ ಪ್ರಮಾದವಾಗಿರೋದು ಶಕ್ಯವೋ?

"ಪುಣ್ಯಕ್ಕೆ ನಾಲಿಗೆಯಿಲ್ಲಪ್ಪ, ಪಾಪಕ್ಕಿದೆ." ಪ್ರಾಣೇಶಾಚಾರ್ಯರು ನಿಟ್ಟುಸಿರಿಟ್ಟು, "ದೇವರೇ ನಿನಗೆ ಕರುಣೆ ತೋರಿಸಬೇಕು—ಅಷ್ಟೇ" ಎಂದರು.

"ನೀವು ರಸಭರಿತವಾದ ಪುರಾಣ ಓದುತ್ತೀರಿ: ಆದರೆ ಗೊಡ್ಡಾಗಿ ಬಾಳೂಂತ ಬೋಧಿಸ್ತೀರಿ. ಆದರೆ ನನ್ನ ಮಾತಿಗೆ ಒಂದೇ ಅರ್ಥ: ಹೆಣ್ಣಿನ ಜೊತೆ ಮಲಗು ಎಂದರೆ ಹೆಣ್ಣಿನ ಜೊತೆ ಮಲಗು; ಮಿಾನು ತಿನ್ನು ಎಂದರೆ ಮಿಾನು ತಿನ್ನು. ನಿಮಗೆಲ್ಲ ಒಂದು ಬುದ್ಧಿವಾದದ ಮಾತು ಹೇಳಲಾ, ಆಚಾರ್ಯರೆ? ಮೊದಲು ನಿಮ್ಮಗಳ ಆ ರೋಗಗ್ರಸ್ತ ಹೆಂಡಿರನ್ನ ಹೊಳೆಗೆ ನೂಕಿ. ಪುರಾಣದ ಋಷಿಗಳಂತೆ ಒಳ್ಳೆ ಮಿಾನುಸಾರು ಮಾಡಬಲ್ಲ ಒಬ್ಬ ಮತ್ಸ್ಯಗಂಧೀನ್ನ ತಬ್ಬಿಕೊಂಡು ಮಲಗಿ. ಕಣ್ಣು ಬಿಟ್ಟು ನೋಡಿದಾಗ

ನಿಮಗೆ ಪರಮಾತ್ಮನ ಅನುಭವ ಆಗಿರದಿದ್ದರೆ ನನ್ನ ಹೆಸರು ನಾರಣಪ್ಪನಲ್ಲ" ಎಂದು ಕಣ್ಣು ಮಿಟಕಿಸಿ ಬಟ್ಟಲಿನಲ್ಲಿದ್ದ ಸರಾಯನ್ನು ಗಟಗಟನೆ ಕುಡಿದು ಹೇಯ್ ಎಂದು ತೇಗಿದ.

ತನ್ನ ರೋಗಗ್ರಸ್ತ ಹೆಂಡತೀನ್ನ ಇವ ಹೀಗೆ ಚುಚ್ಚುತ್ತಿರಬಹುದೆಂದು ಆಚಾರ್ಯರು ಪೂರ್ಣ ವ್ಯಗ್ರರಾಗಿ "ಥೂ ನೀಚ" ಎಂದು ಬೈದು ಮನೆಗೆ ಬಂದುಬಿಟ್ಟರು. ಅವತ್ತು ರಾತ್ರೆ ಜಪಕ್ಕೆ ಕೂತರೆ ಚಿತ್ತವೃತ್ತಿಯ ನಿರೋಧ ಸಾಧ್ಯವಾಗಲಿಲ್ಲ. ಪರಮಾತ್ಮ ಎಂದು ಕಳವಳಪಟ್ಟರು. ಸಂಜೆ ಹೊತ್ತು ರಸಭರಿತ ಕತೆಗಳನ್ನ ಓದೋದು ಬಿಟ್ಟು ವ್ರತದ ನೀತಿಕತೆಗಳನ್ನು ಹೇಳ ತೊಡಗಿದರು. ಪರಿಣಾಮ—ತನಗೆ ಪುರಾಣ ಹೇಳುವುದರಲ್ಲಿದ್ದ ಹುಮ್ಮಸ್ಸೇ ಮಾಯವಾಯಿತು. ಜೀವ ತುಂಬಿದ ಕಣ್ಣುಗಳಿಂದ ನೋಡುತ್ತ, ಕೇಳುತ್ತ ತನ್ನ ಹೃದಯಕ್ಕಷ್ಟು ಗೆಲವು ತರುತ್ತಿದ್ದ ಹುಡುಗರು ಬರೋದನ್ನ ನಿಲ್ಲಿಸಿದರು. ಪುಣ್ಯಸಂಪಾದನಾಕಾಂಕ್ಷಿಗಳಾದ, ಕತೆಯ ಮಧ್ಯದಲ್ಲಿ ಆಕಳಿಸುತ್ತ ಹರಿನಾಮಸ್ಮರಣೆ ಮಾಡುವ ವಿಧವೆಯರು, ವೃದ್ಧರು ಮಾತ್ರ ಬರಹತ್ತಿದರು.

ತಾಳೆಗರಿ ಓಲೆಗಳನ್ನು ಓದುತ್ತ, ಚಿಂತಿಸುತ್ತ ಕೂತಿದ್ದ ಪ್ರಾಣೇಶಾಚಾರ್ಯರು ಹೆಂಡತಿ ನರಳಿದ್ದನ್ನು ಗಮನಿಸಿ, ಮಧ್ಯಾಹ್ನದ ಔಷಧಿ ಇನ್ನೂ ಕೊಟ್ಟಿಲ್ಲ ಅಲ್ಲವೆ ಎಂದು ಬಟ್ಟಲಲ್ಲಿ ಮದ್ದನ್ನು ತಂದು, ಹೆಂಡತಿಯನ್ನು ಎತ್ತಿ ಎದೆಗಾನಿಸಿಕೊಂಡು ಅವಳ ಬಾಯಲ್ಲಿ ಹೊಯ್ದು, 'ಮಲಗಿ ನಿದ್ದೆ ಮಾಡು' ಎಂದರು. ನಡುಮನೆಗೆ ಬಂದು 'ಧರ್ಮಶಾಸ್ತ್ರದಲ್ಲಿ ಇದಕ್ಕೆ ಉತ್ತರ ವಿಲ್ಲ ಅಂದರೆ ಏನು ಅರ್ಥ' ಎಂದು ಹಟ ತೊಟ್ಟು ಓದತೊಡಗಿದರು.

## ಅಧ್ಯಾಯ : ನಾಲ್ಕು

ಇತ್ತ ಪಾರಿಜಾತಪುರದಿಂದ ಬಿಸಿಲಿನಲ್ಲಿ ಹಸಿವಿನಲ್ಲಿ ಹರಿ ಹರಿ ಎಂದು ನಡೆದುಬಂದು ಮನೆಯಲ್ಲಷ್ಟು ವಿಶ್ರಮಿಸಿಕೊಳ್ಳೋಣೆಂದರೆ ಬ್ರಾಹ್ಮಣರಿಗೆ ಅವರ ಕಾಂತೆಯರ ಪ್ರಭುಸಂಮಿತಿ ಪ್ರಾರಂಭವಾಯಿತು. ಮುಖ್ಯವಾಗಿ ಗರುಡಾಚಾರ್ಯ, ಲಕ್ಷ್ಮಣಾಚಾರ್ಯರಿಗೆ.

ಗರುಡಾಚಾರ್ಯನ ಏಕಮಾತ್ರ ಸಂತಾನವಾದ ಅವನ ಮಗ ಶ್ಯಾಮ ಮನೆಯಿಂದ ಓಡಿಬಿಟ್ಟು ಮಿಲಿಟರಿ ಸೇರಿದ್ದಕ್ಕೆ ಬಗೆಬಗೆಯ ಕಾರಣಗಳನ್ನು

ಅಗ್ರಹಾರದಲ್ಲಿ ಹೇಳುತ್ತಾರೆ. ತಂದೆಯ ಶಿಕ್ಷೆ ತಡೆಯಲಾರದೆ ಹೋದ ಎಂದು ಗರುಡಾಚಾರ್ಯನನ್ನು ಕಂಡರೆ ಆಗದವರು ಅಂದರೆ, ನಾರಣಪ್ಪನನ್ನು ಕಂಡರೆ ಆಗದ ಎಲ್ಲರೂ ಅವನ ಪ್ರೇರಣೆಯಿಂದ ಮಿಲಿಟರಿ ಸೇರಿದ ಎಂದು ಅನ್ನುತ್ತಾರೆ. ಅಲ್ಲದೆ ಪ್ರಾಣೇಶಾಚಾರ್ಯರಿಂದ ಪಾಠ ಹೇಳಿಸಿಕೊಂಡೂ ಹೀಗೆ ಅವ ಓಡಿಹೋಗುವ ದುರ್ಬುದ್ಧಿ ಮಾಡಿರಬೇಕಾದರೆ—ಲಕ್ಷ್ಮಣಾಚಾರ್ಯನ ಮತ—ಗರುಡ ನಾರಣಪ್ಪನ ತಂದೆಯ ಮೇಲೆ ಮಾಡಿಸಿದ ಮಾಟ ಈಗ ಗರುಡನ ಮೇಲೆಯೇ ತಿರುಗಿಬಿದ್ದದ್ದು. ಸೃಷ್ಟಿಸಿದವನನ್ನೇ ಸುಟ್ಟು ಬಿಡಲು ಹೋದ ಭಸ್ಮಾಸುರನಂತೆ ಈ ಮಾಟಮಂತ್ರಗಳು. ಗರುಡ ಮಾಟ ಮಾಡಿಸದಿದ್ದರೆ, 'ಸತ್ಕುಲದಲ್ಲಿ ಹುಟ್ಟಿದ ನಾರಣಪ್ಪ ಹೀಗೇಕೆ ಚಾಂಡಾಲನಾಗುತ್ತಿದ್ದ' ಎಂದು ತನ್ನ ತಾಯಿಯ ಕುಲಕ್ಕೆ ಕಳಂಕ ತಟ್ಟಿತೆಂದು ನೋಯುತ್ತಿದ್ದ ಲಕ್ಷ್ಮಣಾಚಾರ್ಯನ ಹೆಂಡತಿ ಅನಸೂಯ ಹೇಳುತ್ತಾಳೆ.

ಚಂಡಾಲ ನಾರಣಪ್ಪನ ಪ್ರೇರಣೆಯಿಂದ ಕೈಗೆ ಬಂದ ಮಗ ಕೆಟ್ಟು ಓಡಿದನೆಂದು ಗರುಡಾಚಾರ್ಯನ ಹೆಂಡತಿ ಸೀತಾದೇವಿ ಅನ್ನ ನೀರು ಬಿಟ್ಟು ಸೊರಗಿ, ಮಮ್ಮಲಮರುಗಿ, ಹಗಲು ರಾತ್ರಿ ದಾರಿ ಕಾದು, ಮೂರು ತಿಂಗಳಾದ ಮೇಲೆ, ಶ್ಯಾಮನಿಂದ—ತಾನು ಪುಣೆಯಲ್ಲಿರುವುದಾಗಿಯೂ, ಮಿಲಿಟರಿ ಸೇರಿರುವುದಾಗಿಯೂ, ಪತ್ರ ಬರೆದುಕೊಟ್ಟು ಸೇರಿದ ಮೇಲೆ ಆರುನೂರು ರೂಪಾಯಿಗಳನ್ನು ಕೊಡದ ಹೊರ್ತು ಬಿಟ್ಟು ಬರುವಂತಿಲ್ಲೆಂದೂ—ತಾಯಿಗೆ ಕಾಗದ ಬಂದಿತ್ತು. ಸೀತಾದೇವಿ ಸೊಂಟದ ಮೇಲೆ ಕೈಯಿಟ್ಟು, ನಾರಣಪ್ಪನನ್ನು ದಾರಿಯಲ್ಲಿ ನಿಲ್ಲಿಸಿ ಬಯ್ದು, ಅತ್ತು, ಮಗನಿಗೆ 'ಮಾಂಸಾಹಾರ ಮಾಡಬೇಡ, ಸ್ನಾನ ಸಂಧ್ಯಾವಂದನೆ ಬಿಡಬೇಡ'ವೆಂದು ಕಾಗದ ಬರೆಸಿದ್ದಳು. ಮಗನಿಗೆ ಒಳ್ಳೆಯ ಬುದ್ಧಿ ಬರಲೆಂದು ಶುಕ್ರವಾರದ ರಾತ್ರೆಯ ಊಟ ಬಿಟ್ಟಳು. ಗರುಡಾಚಾರ್ಯರು ದೂರ್ವಾಸ-ಕೋಪ ತಾಳಿ, 'ಅವನು ಸತ್ತಂತೆ ನನ್ನ ಪಾಲಿಗೆ, ಈ ಸೂರಿನೊಳಕ್ಕೆ ಅವನು ತಲೆಯಿಕ್ಕಲಿ, ಸೀಳಿಬಿಡುತ್ತೇನೆ, ಎಂದು ಕೆಂಜಗದ ಇರುವೆ ಮೈಗೆ ಹತ್ತಿದವರಂತೆ ಕುಣಿದರು. ಸೀತಾದೇವಿ, 'ಗಂಡನಿಗೊಂದಷ್ಟು ಸಮಾಧಾನ ಕೊಡಪ್ಪ, ಮಗನ ಮೇಲಿನ ಪ್ರೀತಿ ಉಳಿಸಪ್ಪ' ಎಂದು ತುಳಸಿಯನ್ನು ಪ್ರಾರ್ಥಿಸಿ ಶನಿವಾರವೂ ಒಪ್ಪತ್ತು ಮಾಡತೊಡಗಿದಳು. ಉರಿಯುವ ಬೆಂಕಿಗೆ ತುಪ್ಪ ಹಾಕುವೋಪಾದಿಯಲ್ಲಿ, ಮಾಧ್ವದ್ವೇಷಿ ದುರ್ಗಾಭಟ್ಟ, 'ಮಿಲಿಟರಿಯಲ್ಲಿ ಸ್ನಾನ ಸಂಧ್ಯಾವಂದನೆ

ಮಾಡುವಂತಿಲ್ಲ, ಬಲಾತ್ಕಾರವಾಗಿ ಮಾಂಸ ತಿನ್ನಿಸುತ್ತಾರೆಂದು ಹೇಳಿ ಗರುಡಾಚಾರ್ಯನಿಗೆ ತಲೆ ಎತ್ತದಂತೆ ಮಾಡಿದ್ದ.

ಮನೆಗೆ ಬಂದ ಸೀತಾದೇವಿಗೆ ಚಂದ್ರಿಯ ಆಭರಣ ತಮಗೆ ಸೇರಿದ್ದೇ ಆದರೆ ಮಗನನ್ನು ಮಿಲಿಟರಿಯಿಂದ ಬಿಡಿಸಿಕೊಳ್ಳಲು ಒಂದು ಮಾರ್ಗವಾದಂತಾಗುವುದೆಂದು ಹಿಗ್ಗಿದಳು. ತನ್ನ ಯಜಮಾನರು ನಾರಣಪ್ಪನ ಶವ ಸಂಸ್ಕಾರ ಮಾಡೋದು ಸಾಧ್ಯವಿರಲಿಕ್ಕೇಬೇಕು ಧರ್ಮಶಾಸ್ತ್ರದ ಪ್ರಕಾರ. ತನ್ನ ಗಂಡನಿಗಿಂತ ಮುಂಚೆ ಎಲ್ಲಿಯಾದರೂ ಲಕ್ಷ್ಮಣಾಚಾರ್ಯ ಒಪ್ಪಿಬಿಟ್ಟರೆ? ಅಥವಾ ಆ ಮಡಿಮೈಲಿಗೆಯಿಲ್ಲದ ಪಾರಿಜಾತಪುರದವರು ಒಪ್ಪಿಬಿಟ್ಟರೆ? ಚಡಪಡಿಸಿದಳು. ಮಾರುತಿಗೆ ಹಣ್ಣುಕಾಯಿಯ ಹರಕೆ ಹೇಳಿಕೊಂಡಳು—'ದೇವರೇ, ನನ್ನ ಗಂಡನೇ ಸಂಸ್ಕಾರ ಮಾಡುವಂತಾಗಲಪ್ಪ.' ಈಗ ಅವಳ ಕಣ್ಣಿಗೆ ನಾರಣಪ್ಪ ಮಾಂಸಾಹಾರ ಮಾಡಿದ್ದು ಅಂತಹ ಭಯಂಕರ ಪಾಪದ ಹಾಗೆ ಕಾಣಲಿಲ್ಲ. ನಾಳೆ ತನ್ನ ಮಗನೇನಾದರೂ ಮನೆಗೆ ಹಿಂದಕ್ಕೆ ಬಂದರೆ ಅಗ್ರಹಾರದ ಅನ್ಯಾಯದ ನಾಲಿಗೆಗಳು ಅವನ ಮೇಲೆಯೂ ಹೇಳದೆ ಇರುತ್ತವೊ? ತನ್ನ ಮಗನಿಗೇನಾದರೂ ಬಹಿಷ್ಕಾರ ಹಾಕಿದಲ್ಲಿ ಏನು ಗತಿ? ನಾರಣಪ್ಪನ ಮೇಲೆ ಬಹಿಷ್ಕಾರ ಹಾಕಿಸಲು ಮುಂದೆ ಬಾರದಿದ್ದ ಪ್ರಾಣೇಶಾಚಾರ್ಯರನ್ನು ಹಿಂದೆ ದೂರುತ್ತಿದ್ದವಳು ಈಗ ಗೌರವದಿಂದ ಸ್ಮರಿಸಿದಳು: ಅವರು ಕರುಣಾವಂತರು; ನನ್ನ ಮಗನ ಪಾಪವನ್ನೂ ಹೊಟ್ಟೆಯಲ್ಲಿ ಹಾಕಿಕೊಂಡು ಖಂಡಿತಾ ಸಲಹುತ್ತಾರೆ; ಸಂಶಯವಿಲ್ಲ.

ಮನೆಗೆ ಬಂದಮೇಲೆ ನೆಲದ ಮೇಲೆ ಒರಗುತ್ತಿದ್ದಂತೆ, ಕಣ್ಣೀರಿಡುತ್ತ ಕಾಡಿದ ಸೀತಾದೇವಿಗೆ ಗರುಡಾಚಾರ್ಯರು 'ಅವನು ನನ್ನ ಪಾಲಿಗೆ ಸತ್ತಂತೆ, ಆ ದುಷ್ಟನ ಮಾತೆತ್ತಬೇಡ' ಎಂದುಬಿಟ್ಟರು. ಆದರೆ ಹೆಂಡತಿಯ ಸೂಚನೆ ತೊಣಚಿಯಂತೆ ಅವರನ್ನು ಹೊಕ್ಕು ಕಾಡಿತು. ಏನೇ ನಾಶವಾಗಲಿ, ಪುತ್ರನಾಶ ಬೇಕಾದರೂ ಆಗಲಿ, ತನ್ನ ಬ್ರಾಹ್ಮಣ್ಯದ ನಾಶಕ್ಕೆ ತಾನು ತಯಾರಿಲ್ಲ. ಆದರೆ ಪ್ರಾಣೇಶಾಚಾರ್ಯರೇನಾದರೂ ಸೈ ಎಂದರೆ ಎಲ್ಲ ಸುಗಮವಾಗಿಬಿಡುತ್ತದೆ. ತಾನು ಸತ್ತಮೇಲೆ ತನಗೆ ಪಿಂಡ ಹಾಕಬಲ್ಲ ಏಕಮಾತ್ರ ಪುತ್ರನನ್ನು ಆಗ ಮಿಲಿಟರಿಯಿಂದ ಬಿಡಿಸಿಕೊಳ್ಳಬಹುದು.

ಹೆಂಡತಿಗೆ 'ಅದು ಆಗದ ಮಾತು. ಬಾಯಿ ಮುಚ್ಚು' ಎಂದು ಗದರಿಸಿ ಕಳ್ಳನ ಹಾಗೆ ಪ್ರಾಣೇಶಾಚಾರ್ಯರ ಮನೆಗೆ ಗರುಡಾಚಾರ್ಯ ನಡೆದ. ಅಂಗಳದಲ್ಲಿ ಕೂತಿದ್ದ ಚಂದ್ರಿಯ ಮುಖ ನೋಡದೆ ಆಚಾರ್ಯರ ನಡುಮನೆಗೆ ಬಂದ.

ಪ್ರಾಣೇಶಾಚಾರ್ಯರು ತಲೆ ಎತ್ತದೆ ತಾಳೆಗರಿ ಗ್ರಂಥಗಳನ್ನು ಓದುತ್ತ ಕೂತವರು :

"ಕೂತುಕೊ ಗರುಡ. ಪಾರಿಜಾತಪುರದವರು ಧರ್ಮಶಾಸ್ತ್ರದಲ್ಲಿ ಹೇಳಿದಂತೆ ಮಾಡೋಣ ಎಂದರಂತೆ. ಒಂದು ಲೆಖ್ಖಕ್ಕೆ ಅವರು ಅಂದದ್ದು ಸರಿ" ಎಂದು ತಿರುಗಿ ಓದುತ್ತ ಕೂತರು. ಗರುಡ ಗಂಟಲು ಕೆರೆದುಕೊಂಡು,

"ಮನುಸ್ಮೃತಿ ಏನೆನ್ನುತ್ತೆ, ಆಚಾರ್ಯರೇ....?" ಎಂದ.

ಪ್ರಾಣೇಶಾಚಾರ್ಯ ತಲೆಯಾಡಿಸಿದರು.

"ಧರ್ಮಶಾಸ್ತ್ರದಲ್ಲಿ ತಮಗೆ ತಿಳಿಯದೇ ಇರೋದು ಏನಿದೆ? ಅದಕ್ಕಲ್ಲ ನಾನು ಅನ್ನೋದು. ಏನು. ಅವತ್ತು—ಏನು—ಟೀಕಾಚಾರ್ಯರ ಪುಣ್ಯ ದಿನ—ಏನು—ಮಠದಲ್ಲಿ ಶ್ರೀಗುರುಗಳ ಎದುರು ಕಂಬದ ಎಲೆಯಲ್ಲಿ ತಾವು ಕೂತು ವ್ಯಾಸರಾಯ ಮಠದ ಆ ಮಹಾಪಂಡಿತರ ಜೊತೆ—ಏನು—ತಾವು ವಾದಿಸಿದ್ದನ್ನ ನಾನು ಕೇಳಿಲ್ಲವೆ? 'ಬಿಂಬೋಸಿ, ಪ್ರತಿಬಿಂಬೋಸ್ಮಿ' ಎಂಬೋದನ್ನ ಮಧ್ವಮತದ ಪ್ರಕಾರ ಅರ್ಥಮಾಡಿ ಹೇಳಿ ಅಂತ ನೀವು ಹಾಕಿದ ಸವಾಲಿಗೆ ಅವರು ತತ್ತರಿಸಿಹೋದರು. ಏನು. ನಾಲ್ಕು ಗಂಟೆಕಾಲ ನಡೀತು ಅವತ್ತಿನ ಊಟ. ಆದ್ದರಿಂದ ತಮಗೆ ಸೂಚನೆ ಕೊಡಲಿಕ್ಕೆ ಬಂದೇಂತ ತಾವು ಭಾವಿಸಬಾರದು. ತಮ್ಮ ಎದುರು ನಾನು ಸಿಂಗಲೀಕ. ಏನು."

ತಮ್ಮನ್ನು ಮೆಚ್ಚಿಸಿ ತನ್ನ ಕಡೆಗೆ ಎಳೆದುಕೊಳ್ಳಲು ಗರುಡ ಯತ್ನಿಸುತ್ತಿರೋದು ನೋಡಿ ಆಚಾರ್ಯರಿಗೆ ಅಸಹ್ಯವಾಯಿತು. ಧರ್ಮಶಾಸ್ತ್ರದಲ್ಲಿ ಏನಿದೆ, ಏನಿಲ್ಲ ಇವನಿಗೆ ಬೇಡ. ತನ್ನ ಬಾಯಿಂದ ಆಗಲಿ ಎಂದು ಬಂದರೆ ಸಾಕು, ಆಗ ಯಾರೂ ದೋಷ ಹುಡುಕೋದಿಲ್ಲವಲ್ಲ—ಎಂದು ತಿಳಿದು ಹೀಗೆ ತನ್ನನ್ನು ಅಟ್ಟಕ್ಕೇರಿಸುತ್ತಿದ್ದಾನೆ. ಅದಕ್ಕೆ ಕಾರಣ: ಆ ಬಂಗಾರ, ಔದಾರ್ಯದ ಫಲ ಅದರ ತದ್ವಿರುದ್ಧ. ನಾರಣಪ್ಪ ಹೇಳಿದ ಹಾಗೆ ಈಗ ತಾನು ಮರುಕಕ್ಕೆ ಕರಗಿಬಿಡಬಾರದು. ಗಟ್ಟಿಯಾಗಿ ನಿಂತು ಧರ್ಮಶಾಸ್ತ್ರ ಏನೆನ್ನುತ್ತದೋ ಹಾಗೆ ಮಾಡಬೇಕು.

"ತ್ರಿಕಾಲಜ್ಞರಾದ ಋಷಿಗಳು ಇದನ್ನು ಯೋಚಿಸದೆ ಹೋಗಿರೋದು ಸಾಧ್ಯವೇ? ಏನು."

ಗರುಡನ ಮಾತಿಗೆ ಉತ್ತರ ಕೊಡದೆ ಆಚಾರ್ಯರು ಓದುತ್ತಲೇ ಹೋದರು.

"ವೇದಾಂತವೆಂದು ಕರೆಯಲು ಕಾರಣ, ಏನು, ಇದರ ತತ್ವದ ಅಂತ್ಯ

ಅಂತ ತಾವೇ ಅಪ್ಪಣೆ ಕೊಡಿಸಿದ್ದಿರಿ ಅಲ್ಲವೆ, ಆಚಾರ್ಯರೆ? ವೇದಾಂತದಲ್ಲಿ ಉತ್ತರವಿಲ್ಲದೆ ಇರೋಕ್ಕೆ ಸಾಧ್ಯವೊ? ಒಬ್ಬ ಬ್ರಾಹ್ಮಣನ ಶವ ಅಗ್ರಹಾರ ದಲ್ಲಿದ್ದಮೇಲೆ, ಏನು, ಕೇರಿಯ ಬ್ರಾಹ್ಮಣರು ತಮ್ಮ ಬ್ರಾಹ್ಮಣ್ಯದ ವಿಧಿ ನಿಯಮಗಳನ್ನು ಸಾಂಗವಾಗಿ ನಡೆಸಿಕೊಂಡು ಹೋಗೋದಕ್ಕೆ ಅಡ್ಡಿಯಾದ ಮೇಲೆ, ಏನು, ಬರೀ ಊಟಮಾಡುವಂತಿಲ್ಲವೆಂದು ನಾನು ಈ ಪ್ರಶ್ನೇನ ಎತ್ತುತ್ತೇನೆಂದಲ್ಲ....ಏನು."

ಪ್ರಾಣೇಶಾಚಾರ್ಯರು ಇದಕ್ಕೂ ಉತ್ತರ ಕೊಡಲಿಲ್ಲ. ತಾನು ಹೇಳಿ ಕೊಟ್ಟ ವೇದಾಂತ, ಪುರಾಣ, ತತ್ವ ಎಲ್ಲವನ್ನೂ ಈಗ ತನಗೆ ವಾಪಸ್ಸು ಒಪ್ಪಿಸುತ್ತಿದ್ದಾನೆ ಗರುಡ. ಕಾರಣ? ಹೊನ್ನು! ಅಯ್ಯೋ ಮನುಷ್ಯನ ಬಾಳೇ ಎನ್ನಿಸಿತು.

"ಅಲ್ಲದೆ ತಾವು ಹೇಳಿದ್ದು ನಿಜ ಅನ್ನಿಸಿತು ನನಗೆ. ಅವನು ಬ್ರಾಹ್ಮಣ್ಯ ಬಿಟ್ಟರೂ ಬ್ರಾಹ್ಮಣ್ಯ ಅವನನ್ನು ಬಿಟ್ಟಂತಲ್ಲವಲ್ಲ! ಅವನಿಗೆ ನಾವು ಬಹಿ ಷ್ಕಾರ ಹಾಕಿಸಲಿಲ್ಲವಲ್ಲ. ಏನು. ಬಹಿಷ್ಕಾರವನ್ನೇನಾದರೂ ಹಾಕಿಬಿಟ್ಟಿದ್ದರೆ ಅವ ತುರುಕಾ ಆಗಿ ನಾವೆಲ್ಲ ಈ ಅಗ್ರಹಾರಾನ್ನ ಬಿಡಬೇಕಾಗಿ ಬಂದು ಬಿಡ್ತಿತ್ತಲ್ಲ; ಏನು."

"ಧರ್ಮಶಾಸ್ತ್ರ ಏನು ಅನ್ನುತ್ತೋ ಹಾಗೆ ಮಾಡೋದೂಂತ ನನ್ನ ನಿರ್ಧಾರ, ಗರುಡ"

ಎಂದು ಅವನ ಮಾತನ್ನು ನಿಲ್ಲಿಸಲು ಗ್ರಂಥದಿಂದ ತಮ್ಮ ಕಣ್ಣುಗಳನ್ನೆತ್ತಿ ಹೇಳಿ ಮತ್ತೆ ಓದಲು ಪ್ರಾರಂಭಿಸಿದರು.

"ಧರ್ಮಶಾಸ್ತ್ರದಲ್ಲಿ ಪಶ್ಚಾತ್ ಉತ್ತರ ಸಿಗಲಿಲ್ಲ ಎನ್ನಿ. ಸಿಗಲಿಕ್ಕಿಲ್ಲ ಎಂದಲ್ಲ ನನ್ನ ಮಾತು. ಏನು. ಒಂದುವೇಳೆ ಸಿಕ್ಕದೆಹೋದರೆ ಆಪದ್ಧರ್ಮ ಅಂತ ಒಂದು ಇದೇಂತ ತಾವು ಹಿಂದೊಮ್ಮೆ ಅಪ್ಪಣೆ ಕೊಡಿಸಿದ್ದುಂಟಲ್ಲ. ಒಬ್ಬ ಮನುಷ್ಯನ ಪ್ರಾಣಾ ಉಳಿಸಲು ಗೋಮಾಂಸಾನ್ನ ಕೊಡಬೇಕಾಗಿ ಬಂದರೆ ಗೋಮಾಂಸಕ್ಕೂ ದೋಷವಿಲ್ಲಾಂತ–ಏನು–ತಾವೇ ಹೇಳಿದ್ದಿಲ್ಲವೆ? ಏನು—ತಾವು ಹೇಳಿದ ಒಂದು ಕತೆಯ ಪ್ರಕಾರ ವಿಶ್ವಾಮಿತ್ರಋಷಿ ಭೂಮಿ ಯಲ್ಲಿ ಕ್ಷಾಮ ತಲೆದೋರಿದಾಗ ಒಮ್ಮೆ, ಹಸಿವು ತಾಳದಾಗಿ, ಜೀವಾನ ಉಳಿಸಿಕೊಳ್ಳೋದೇ ಪರಮಧರ್ಮ ಅಂತ, ಏನು, ಸತ್ತ ನಾಯಿಯ ಮಾಂಸಾನ್ನೂ ತಿನ್ನಹೋದನೆಂದು, ಏನು...."

"ತಿಳಿಯಿತು ಗರುಡ. ಈಗ ನಿನ್ನ ಮನಸ್ಸಿನಲ್ಲಿರೋದು ಹೇಳಿಬಿಡು"

ಎಂದು ಪ್ರಾಣೇಶಾಚಾರ್ಯರು ತಲೆಬೇಸರ ಬಂದು ತಾಳೆಗರಿ-ಗ್ರಂಥ ಗಳನ್ನು ಮುಚ್ಚಿ ಕೇಳಿದರು.

"ಏನೂ ಇಲ್ಲಪ್ಪ" ಎಂದು ಗರುಡಾಚಾರ್ಯ ನೆಲ ನೋಡಿದ. ಮತ್ತೆ ಆಚಾರ್ಯರಿಗೆ ಉದ್ದಂಡ ನಮಸ್ಕಾರಮಾಡಿ ಎದ್ದು ಕೂತು :

"ಶ್ಯಾಮನನ್ನು ಮಿಲಿಟರಿಯಿಂದ ಬಿಡಿಸಿಕೊಳ್ಳದಿದ್ದರೆ ನನ್ನ ಶವ ಸಂಸ್ಕಾರ ಮಾಡೋರು ಯಾರು ಹೇಳಿ, ಆಚಾರ್ಯರೆ. ತಮ್ಮ ಅನುಮತಿ ದೊರಕಿಬಿಟ್ಟರೆ, ಏನು...." ಎಂದು ಅನ್ನುತ್ತಿರುವಂತೆ ಲಕ್ಷ್ಮಣಾಚಾರ್ಯ ಬಂದು ನಿಂತಿದ್ದ.

* * *

ತನ್ನ ತಂಗಿಯ ಕೊರಳಿನಲ್ಲಿರಬೇಕಾಗಿದ್ದ ಆಭರಣ ಪರವಶವಾಯಿತೆಂದು, ಈ ಸೂಳೆಯಿಂದಾಗಿ ಅವಳು ಸತ್ತಳೆಂದು ಕಣ್ಣೀರಿಡುತ್ತ ಮನೆಗೆ ಬಂದ ಲಕ್ಷ್ಮಣಾಚಾರ್ಯನ ಹೆಂಡತಿ ಅನಸೂಯಳಿಗೆ ಕಣ್ಣೀರು ಕ್ರಮೇಣ ನಾರಣಪ್ಪನ ಬಗ್ಗೆಯೂ ಹರಿಯಹತ್ತಿತ್ತು. ಎಷ್ಟೆಂದರೂ ಅವ ತನ್ನ ಸೋದರ ಮಾವನ ಮಗನಲ್ಲವೆ? ಮಾವ ಬದುಕಿದ್ದರೆ, ತಂಗಿ ಜೀವದಿಂದಿದ್ದರೆ ಆ ಗರುಡ ಮಾಟ ಮಾಡಿಸಿರದಿದ್ದರೆ, ನಮ್ಮ ನಾರಣಪ್ಪ ಹೀಗೆ ಬುದ್ಧಿ ಕೆಟ್ಟು, ಅಷ್ಟೊಂದು ಚಿನ್ನವನ್ನ ಪರಭಾರೆ ಮಾಡಿ, ಹೀಗೆ ಪರದೇಶಿಯಂತೆ, ನಿರ್ಗತಿಕನಂತೆ ಸತ್ತು, ಶವಸಂಸ್ಕಾರವಿಲ್ಲದೆ ಕೊಳೆಯಬೇಕಾಗಿತ್ತೇ ಎಂದು ಗೋಳೋ ಎಂದು ಅಳಹತ್ತಿದಳು. 'ಅವನು ಏನೇ ಮಾಡಲಿ, ಕರುಳಿನ ಬಳ್ಳಿ ಕಡಿಯುತ್ತದ ಪರಮಾತ್ಮ' ಎಂದು ಗೋಡೆಗೊರಗಿ ಕಣ್ಣೀರು ಹಾಕಿ ದಳು. ಆದರೆ ಮರುಕ್ಷಣ ಕಣ್ಣೆದುರು ಮೋಟುಜಡೆಯನ್ನು ಬಿಗಿಯಾಗಿ ಕಟ್ಟಿ, ಬುಗುಡಿ ಮೂಗುಬಟ್ಟು ಧರಿಸಿ, ಉದ್ದ ಕುಂಕುಮವಿಟ್ಟು ಕುಳ್ಳಗೆ ಗುಂಡಗೆ ಇದ್ದ ಮಗಳು ಲೀಲಾವತಿ ಸುಳಿದು ಎದೆ ಕಲ್ಲಾಯಿತು :

"ಶ್ರೀಪತಿ ಯಾವತ್ತು ಬರುತ್ತೇನೆಂದು ಹೇಳಿ ಹೋದನೆ ?"

ಎಂದು ಹತ್ತನೆಯ ಬಾರಿಗೆ ಕೇಳಿದಳು. ಲೀಲಾವತಿ 'ಗೊತ್ತಿಲ್ಲ' ಎಂದು ಬಿಟ್ಟಳು. ಪರದೇಶಿ ಹುಡುಗಾಂತ ಅವನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿದರೆ ತನ್ನ ಒಡಹುಟ್ಟಿದ ನಾರಣಪ್ಪನೇ ಅವನ ತಲೆ ತಿರುಗಿಸಿಬಿಡ ಬೇಕೇ ? ತನ್ನ ಮೊಟ್ಟೆಯನ್ನ ತಾನೇ ತಿನ್ನುವ ಸರ್ಪವಾದ ಅವ ತನ್ನ ಪಾಲಿಗೆ. ಏನೇನು ಹಚ್ಚಿದನೊ ತನ್ನ ಅಳಿಯನ ತಲೆಗೆ ? ಮನೆಯಲ್ಲಿ

ತಿಂಗಳಿಗೆ ಎರಡು ದಿನ ನಿಲ್ಲುವುದಿಲ್ಲ. ಯಕ್ಷಗಾನದ ಮೇಳಗಳ ಬೆನ್ನುಹತ್ತಿ ಊರೂರು ಅಲೆಯುತ್ತಾನೆ. ಪಾರಿಜಾತಪುರದ ಹುಡುಗರ ಸಹವಾಸಮಾಡು ತ್ತಾನೆ. ಅಲ್ಲೊಂದು ಇಲ್ಲೊಂದು ಅವನಿಗೆ ಸೂಳೆಗಳಿವೆಯೆಂದು ಅವಳಿಗೆ ದುರ್ಗಾಭಟ್ಟರ ಹೆಂಡತಿಯಿಂದ ಸುದ್ದಿ ತಲ್ಪಿದೆ. ಕದ್ದು ಮುಚ್ಚಿ ಶ್ರೀಪತಿ ನಾರಣಪ್ಪನ ಮನೆಗೆ ಹೋಗಿ ಬಂದಾಗಲೇ ಗೊತ್ತಾಯ್ತು ಅವಳಿಗೆ—ಕೆಟ್ಟ ಅಂತ. ಕೆಟ್ಟ ದಾರಿ ಹಿಡಿದ ಅಂತ. ಪ್ರಾರಬ್ಧ, ಏನೇನನ್ನು ಅವನು ಅಲ್ಲಿ ಕುಡಿದನೋ, ತಿಂದನೋ! ಆ ಚಂದ್ರಿಯ ವಯ್ಯಾರಕ್ಕೆ ಬಲಿಯಾಗದವರು ಇಲ್ಲ. ಅಳಿಯನಿಗೆ ತಕ್ಕ ಬುದ್ಧಿ ಕಲಿಸಲೆಂದು ಅನಸೂಯ ಮಗಳಿಗೆ ಹಚ್ಚಿಕೊಟ್ಟಳು: "ನಿನ್ನ ಗಂಡನಿಗೆ ಒಪ್ಪಬೇಡ. ಹೀಗೆ ತೊಡೆಯನ್ನ ಗಂಟು ಹಾಕಿಕೊಂಡು ಕೌಂಚಿ ಮಲಗಿಬಿಡು. ಬುದ್ಧಿ ಬರಲಿ." ಲೀಲಾವತಿ ಹಾಗೆಯೇ ಮಾಡಿದಳು. ಗಂಡ ರಾತ್ರೆ ತನ್ನನ್ನು ಬಳಚಲು ಬಂದರೆ 'ಚೂಟಿದರು, ಕಚ್ಚಿದರು' ಎಂದು ಅಳುತ್ತ ತಾಯಿಯ ಮಗ್ಗುಲಿನಲ್ಲಿ ಬಂದು ಮಲಗಲು ಪ್ರಾರಂಭಿಸಿದಳು.

ಶ್ರೀಪತಿಗೆ ಇದರಿಂದ ಬುದ್ಧಿ ಬಂದಂತೆ ಕಾಣಲಿಲ್ಲ. ತಾನು ತನ್ನ ಗಂಡ ನಿಂದ ಮನಸ್ಸಿನ ಇಷ್ಟವನ್ನು ನಡೆಸಿಕೊಂಡ ಹಾಗೆ ಈಗ ನಡೆಯಲಿಲ್ಲ. ಶ್ರೀಪತಿ ಜುಟ್ಟನ್ನು ತೆಗೆಸಿ ನಾರಣಪ್ಪನಂತೆ ಕ್ರಾಪು ಬಿಟ್ಟ. ಕೈಯಲ್ಲಿ ಒಟ್ಟಾದ ದಕ್ಷಿಣೆ ದುಡ್ಡಿನಲ್ಲಿ ಒಂದು ಬ್ಯಾಟರಿಯನ್ನು ಕೊಂಡುಕೊಂಡ. ಸಂಜೆಯ ಹೊತ್ತು ಶಿಳ್ಳೆಹಾಕಿ ಅಗ್ರಹಾರ ಸುತ್ತುವುದಕ್ಕೆ ಶುರುಮಾಡಿದ.

ಮೊದಲೇ ಜ್ವರಗಡ್ಡೆಯಿಂದ ಕೃಶನಾಗಿ, ಕಣ್ಣುಗಳು ಹೂತುಬಿದ್ದು ಇವತ್ತೋ ನಾಳೆಯೋ ಎನ್ನುವಂತೆ ಕಾಣುತ್ತಿದ್ದ ಲಕ್ಷ್ಮಣಾಚಾರ್ಯ ಬಿಸಿಲು ಮತ್ತು ಹಸಿವಿನಿಂದ ಇನ್ನಷ್ಟು ನರಪೇತಲನಾಗಿ ಮನೆಗೆ ಬಂದು ಬಿದ್ದದ್ದೇ ತಡ ಅನಸೂಯ ಅವನನ್ನು ಕಾಡತೊಡಗಿದಳು: ತನ್ನ ಸೋದರಮಾವನ ಮಗ ತಾನೇ ನಾರಣಪ್ಪ? ಅವನು ಏನೇ ಕುಲಗೆಡಲಿ, ಅವನ ಹೆಣಾನ್ನ ಶೂದ್ರರು ಎತ್ತಿ ಸಾಗಿಸಿದ್ದೇ ಆದರೆ ತಾನು ಪ್ರಾಣ ಇಟ್ಟುಕೊಳ್ಳುವವಳಲ್ಲ. ಪ್ರಾಣೇಶಾಚಾರ್ಯರದು ಮೃದುಸ್ವಭಾವ. ಗರುಡ ಊರು ಹಾಳುಮಾಡುವ ಪ್ರಚಂಡ, ಗಟ್ಟಿಗ, ನಿಮ್ಮ ಹಾಗೆ ಭೋಳೇ ಅಲ್ಲ. ಅವನೆಲ್ಲಾದರೂ ಶವ ಸಂಸ್ಕಾರಕ್ಕೆ ಅಪ್ಪಣೆ ಪಡೆದುಬಿಟ್ಟರೆ ಆಭರಣವೆಲ್ಲ ಮೊದಲೇ ಗರ್ವದಿಂದ ತಿರುಗೋ ಸೀತಾದೇವಿಗೆ ಸೇರಿಬಿಡುತ್ತೆ. ಅವರ ಅನಿಷ್ಟಬುದ್ಧಿಗೆ ದೇವರು ತಕ್ಕದು ಮಾಡಿದಾ ಎನ್ನಿ. ಇಲ್ಲದಿದ್ದರೆ ಶ್ಯಾಮ ಮನೆ ಬಿಟ್ಟೋಡಿ ಮಿಲಿಟರಿ

ಸೇರುತ್ತಿದ್ದನೆ? ಈಗ ನನ್ನ ಅಳಿಯನ ಮೇಲೆ, ನನ್ನ ಸೋದರಮಾವನ ಮಗ ನಾರಣಪ್ಪನ ಮೇಲೆ ಅನ್ನುತ್ತಾರಲ್ಲಾ—ಇವರು—ಇವರ ಮಗ ಶ್ಯಾಮ ಆಚಾರಾನ್ನ ನಡೆಸಿಕೊಂಡುಬರುತ್ತಿದ್ದಾನೆಂಬೋದು ಏನು ಖಾತ್ರಿ. ಗರುಡಾ ಹೋಗಿ ಪ್ರಾಣೇಶಾಚಾರ್ಯರ ಮನಸ್ಸನ್ನ ಒಲಿಸಿಕೊಳ್ಳಲಿಕ್ಕೆ ಬಿಡಬೇಡಿ. ನೀವೂ ಹೋಗಿ. ಅವನು ಈಗ ಅಲ್ಲಿ ಹಾಜರು—ನೀವಿಲ್ಲಿ ದಂಡಕ್ಕೆ ಬಿದ್ದು ಕೊಂಡಿರೋವಾಗ—ನನಗೆ ಗೊತ್ತಿಲ್ಲವ? ಎಂದು ಹೊರಕ್ಕೆ ಬಂದು ಗರುಡಾ ಚಾರ್ಯನ ಮನೆಯ ಮುಂಭಾಗ ಹಿಂಭಾಗವನ್ನೆಲ್ಲ ಪರೀಕ್ಷಿಸಿ ಗಂಡನನ್ನು ಬಲಾತ್ಕಾರವಾಗಿ ದೂಡಿದ್ದಳು.

* * *

ಶಿವಪೂಜೆಯ ನಡುವೆ ಕರಡಿ ಬಿಟ್ಟಂತೆ ಬಂದ ಕುಚೇಲಸ್ವರೂಪದ ಲಕ್ಷ್ಮಣಾಚಾರ್ಯನನ್ನು ಕಂಡು ಗರುಡಾಚಾರ್ಯನಿಗೆ ರೋಷಾತಿರೋಷ ವಾಯಿತು. ಉಸ್ ಉಸ್ ಎನ್ನುತ್ತ ಮುಂಭಾಗದ ಹೊಟ್ಟೆಯನ್ನು ಒಂದು ಕೈಯಿಂದ ಹಿಡಿದು, ಇನ್ನೊಂದು ಕೈಯಿಂದ ನೆಲವನ್ನು ಊರಿ ಕೂತವನನ್ನು ನುಂಗಿಬಿಡುವಂತೆ ನೋಡಿದ. ಜುಗ್ಗಾತಿಜುಗ್ಗ, ಜಿಪುಣಾಗ್ರೇಸರ, ತಾಯಿ-ಗ್ಗಂಡ ಎಂದೆಲ್ಲ ಅನ್ನಬೇಕೆಂಬ ಆಸೆಯನ್ನು ಪ್ರಾಣೇಶಾಚಾರ್ಯರು ಎದುರಿದ್ದಾ ರಲ್ಲ ಎಂದು ಅದುಮಿಕೊಂಡ. ಎರೆದುಕೊಳ್ಳಲು ಒಂದು ಚಮಚಾ ಎಳ್ಳೆಣ್ಣೆ ಯನ್ನೂ ಕೊಳ್ಳದಂತಹ ವಜ್ರಮುಷ್ಟಿಯ ಬ್ರಾಹ್ಮಣಾಧಮ ಇವ. ಅಗ್ರಹಾರ ದಲ್ಲಿ ಯಾರಿಗೆ ತಿಳಿದಿಲ್ಲ? ಎರೆದುಕೊಳ್ಳಿ ಎಂದು ಹೆಂಡತಿ ಕಾಡಿದರೆ ಬೆಳಗ್ಗೆ ಎದ್ದು ನಾಲ್ಕು ಮೈಲಿ ನಡೆದು ಕೊಂಕಣಿಯ ಅಂಗಡಿಗೆ ಹೋಗುತ್ತಾನೆ. 'ಏನೋ ಕಾಮತ, ಒಳ್ಳೆಣ್ಣೆ ತರಸಿದ್ದೀಯ ಹೇಗೆ? ಏನು ಬೆಲೆ? ಮಾಲು ಹೇಗಿದೆ? ಮುಗ್ಗಲೋ ಹೇಗೆ, ನೋಡುವ' ಎಂದು ಕೈಯೊಡ್ಡಿ ಎರಡು ಚಮಚಾ ಹಾಕಿಸಿಕೊಂಡು, ಮೂಸಿದಂತೆ ನಟಿಸಿ 'ಚಿಂತೆಯಿಲ್ಲ. ಆದರೂ ಬೆರಕೆ ಕಣಯ್ಯ, ಯಾವತ್ತು ಹೊಸಮಾಲು ಬರೋದು ಹೇಳು, ನಮ್ಮ ಮನೆ ಗೊಂದು ಡಬ್ಬ ಆಗಬೇಕು' ಎಂದು ತಲೆಗೆ ಅದನ್ನು ಸವರಿಕೊಳ್ಳುತ್ತಾನೆ. ಮತ್ತೆ ಮೆಣಸಿನಕಾಯಿ ಚೀಲಕ್ಕೆ ಕೈಹಾಕಿ 'ಒಂದು ಮಣಕ್ಕೇನು ಬೆಲೆ' ಎಂದು ವಿಚಾರಿಸಿ ಒಂದು ಮುಷ್ಟಿ ಮೆಣಸಿನಕಾಯನ್ನು ಲೋಕಾಭಿರಾಮ ವಾಗಿ ಮಾತನಾಡುತ್ತ ತನ್ನ ಚೀಲಕ್ಕೆ ಸಾಗಿಸುತ್ತಾನೆ. ಅಲ್ಲಿಂದ ಸೀದ ಇನ್ನೊಂದು ಮೈಲಿ ನಡೆದು ಶೆಣೈ ಅಂಗಡಿಯಲ್ಲಿ 'ಕಾಮತನಂಗಡಿಯಲ್ಲಿ

ಎಷ್ಟು ದುಬಾರಿಯಪ್ಪ' ಎಂದು ಕಾಮತನನ್ನು ಹಳಿದು, ಇನ್ನೆರಡು ಚಮುಚಾ ಎಳ್ಳೆಣ್ಣೆ, ಮುಷ್ಟಿ ಮೆಣಸಿನಕಾಯಿ. ಮನೆಗೆ ಬಂದು ಸ್ನಾನ, ಅಡಿಗೆ. ಮತ್ತೆ ಅವರಿವರ ತೋಟಕ್ಕೆ ಹೋಗಿ ಬಾಳೆಲೆ ಕೊಯ್ದು ತಂದು, ಅದನ್ನು ಒಣಗಿಸಿ ದೊನ್ನೆ ಮಾಡಿ ಮಾರಿ ಒಂದಿಷ್ಟು ಕಾಸು ಸಂಪಾದನೆ. ಜನಿವಾರ ಮಾರಿ ಇನ್ನಷ್ಟು ಕಾಸು. ಊಟದ ಕರೆಗೆಂದು ಹದ್ದಿನ ಹಾಗೆ ಕಾದಿರುತ್ತಾನೆ. ಈಗ ಬಂಗಾರದ ಮೇಲೆ ಇವನ ಕಣ್ಣು ನೆಟ್ಟಿದೆ. ಏನಾದರೂ ಸೈ—ಇವನಿಗೆ ಅದು ದಕ್ಕದಂತೆ ಮಾಡಬೇಕು.

"ನಾರಾಯಣ ನಾರಾಯಣ" ಎನ್ನುತ್ತ, ಏದುಸಿರು ಬಿಡುತ್ತ, ಬೆವರನ್ನು ಒರೆಸಿಕೊಂಡು ಲಕ್ಷ್ಮಣಾಚಾರ್ಯ:

"ಆಚಾರ್ಯರೆ, ಧರ್ಮಶಾಸ್ತ್ರದ ಪ್ರಕಾರ ಅಡ್ಡಿಯಿಲ್ಲವಾದರೆ ಶವಸಂಸ್ಕಾರ ಮಾಡೋಕ್ಕೆ ನನ್ನದೇನೂ ಅಡ್ಡಿಯಿಲ್ಲ. ಎಷ್ಟೆಂದರೂ ಅವ ನನ್ನ ಷಡ್ಡಕ ಅಲ್ಲವೆ? ತಮ್ಮ ಅಪ್ಪಣೆಯಾದರೆ ಶವಸಂಸ್ಕಾರದ ಹಕ್ಕು ನನಗಲ್ಲದೆ ಬೇರೆ ಯಾರಿಗೂ ಇಲ್ಲ" ಎಂದು ಮುಚ್ಚಿದ್ದ ಕಣ್ಣನ್ನು ಬಿಟ್ಟ.

ಗರುಡಾಚಾರ್ಯ ಪೆಚ್ಚಾದ. ಇದಕ್ಕೆ ಯಾವ ಅಸ್ತ್ರವಿದೆ ತನ್ನಲ್ಲಿ?

"ಶವಸಂಸ್ಕಾರ ಮಾಡೋ ಅರ್ಹತೆಯ ಪ್ರಶ್ನೆ ಬಂದರೆ—ಏನು—ನನ್ನದೇನೂ ಅಡ್ಡಿಯಿಲ್ಲ. ನೀನೇ ಮಾಡಂತೆ. ಬೇರೆಯವರ ಪಾಪಾನ್ನ ಸ್ವೀಕರಿಸಲಿಕ್ಕೆ ಎಂದೇ ಬ್ರಾಹ್ಮಣಜನ್ಮ ಬಂದಿರೋದು ತಾನೆ? ಆದರೆ ಆ ಬಂಗಾರ ಮಾತ್ರ ಕೋರ್ಟಿಗೆ ಹೋಗಬೇಕು. ಅಥವಾ ಧರ್ಮಸ್ಥಳದ ನ್ಯಾಯದ ಪ್ರಕಾರ ನನಗೆ ಸೇರಬೇಕು."

ಪ್ರಾಣೇಶಾಚಾರ್ಯರು ಅತ್ಯಂತ ವ್ಯಥಿತರಾದರು. ಒಂದುವೇಳೆ ಶವ ಸಂಸ್ಕಾರದ ಪ್ರಶ್ನೆ ಇತ್ಯರ್ಥವಾದರೂ ಈ ಬಂಗಾರದ ಪ್ರಶ್ನೆ ಇತ್ಯರ್ಥ ಮಾಡೋದು ಸುಲಭವಲ್ಲ. ಘಳಿಗೆಘಳಿಗೆಗೂ ತನ್ನ ಜವಾಬ್ದಾರಿ ಹೆಚ್ಚುತ್ತಿದೆ. ನಾರಣಪ್ಪನ ಸವಾಲು ತ್ರಿವಿಕ್ರಮಪಾದವಾಗಿ ಬೆಳೆಯುತ್ತಿದೆ....ಅಷ್ಟರಲ್ಲಿ ಬಡವ ದಾಸಾಚಾರ್ಯನ ನಾಯಕತ್ವದಲ್ಲಿ ಉಳಿದ ಬಡಬ್ರಾಹ್ಮಣರು ಬಂದು ಸೇರಿದರು.

"ಆಚಾರ್ಯರೆ...." ದಾಸಾಚಾರ್ಯ ಹೊಟ್ಟೆಯನ್ನು—ಅಳುವ ಮಕ್ಕಳ ಬೆನ್ನನ್ನು ತಾಯಿ ಸವರುವಂತೆ—ಸವರುತ್ತ ಹೇಳಿದ: "ನನಗೆ ಆರೋಗ್ಯ ನೆಟ್ಟಗಿಲ್ಲ—ನಿಮಗೆ ಗೊತ್ತು. ಆಹಾರವಿಲ್ಲದೇ ಇದ್ದರೆ ನನ್ನ ಪ್ರಾಣಕ್ಕೇ ಅಪಾಯ. ನೀವು ಒಂದು ಮಾರ್ಗ ತೋರಿಸಬೇಕು. ಅಥವಾ ಆಪದ್ಧರ್ಮದ

ಪ್ರಕಾರ ಏನು ಮಾಡಬಹುದೆಂದಾದರೂ ಆಜ್ಞೆ ಮಾಡಬೇಕು. ಹೆಣ ವನ್ನು ಅಗ್ರಹಾರದಲ್ಲಿಟ್ಟುಕೊಂಡು ಊಟ ಮಾಡಬಹುದೋ ಹೇಗೋ ಹೇಳಿ. ಅಲ್ಲದೆ ಇದು ನಡುಬೇಸಗೆ. ಇನ್ನೊಂದು ದಿನದೊಳಗೆ ಹೆಣ ವಾಸನೆ ಬಂದು ನಾರೋದು ಖಂಡಿತ. ನನ್ನ ಮನೆಯೋ ಅವನದ್ದಕ್ಕೆ ಹತ್ತಿರ. ಯಾರಿಗೂ ಅದು ಒಳ್ಳೆಯದಲ್ಲ. ಅಗ್ರಹಾರದ ಹಿತದ ದೃಷ್ಟಿಯಿಂದ ಲಕ್ಷ್ಮಣಾಚಾರ್ಯ ಅಥವಾ ಗರುಡಾಚಾರ್ಯ ಒಂದು ತೀರ್ಮಾನಕ್ಕೆ ಬರಬೇಕು"

ಎಂದು ಮಾತು ನಿಲ್ಲಿಸಿ ಸುತ್ತಲೂ ನೋಡಿದ. ನಾರಣಪ್ಪನಿಗೆ ಕಾಮ ವಿದ್ದಂತೆ ದಾಸಾಚಾರ್ಯನಿಗೆ ಹಸಿವು. ಹಸಿವು ಅವನನ್ನ ಈ ಕ್ಷಣ ಕಾಪಾ ಡಿತು. ದೊಡ್ಡ ಬುದ್ಧಿಯನ್ನು ಕೊಟ್ಟು ಮಾತಾಡಿಸಿತು:

"ನೀವು ಅಂದುಬಿಟ್ಟರೆ ಸಾಕು, ಆಚಾರ್ಯರೆ. ನಿಮ್ಮ ವಾಕ್ಯವೇ ವೇದ ವಾಕ್ಯ. ನಮಗೆ ಬಂಗಾರವೂ ಬೇಡ—ಏನೂ ಬೇಡ. ನೀವು ಹೇಳಿ. ನಾವು ನಾಲ್ವರು ಜನ ಈ ಕ್ಷಣ ಆ ಹೆಣವನ್ನು ಎತ್ತಿ ತೆಗೆದುಕೊಂಡು ಹೋಗಿ ಸಂಸ್ಕಾರಮಾಡಿ ಬರುತ್ತೇವೆ. ಆ ಬಂಗಾರಾನ್ನ ನಮ್ಮ ಸೇವಾರ್ಥ ವಾಗಿ ಮಾರುತಿಗೆ ಕಿರೀಟ ಮಾಡಿ ಹಾಕಿಸಿರಿ."

ಪ್ರಾಣೇಶಾಚಾರ್ಯರೊಳಗೆ ಥಟ್ಟನೆ ಸಾತ್ವಿಕಶಕ್ತಿ ಚಲಿಸಿತು. ಗರುಡಾ ಚಾರ್ಯ ಲಕ್ಷ್ಮಣಾಚಾರ್ಯ ಮಾತ್ರ ಹತಾಶರಾದರು. ಗರುಡಾಚಾರ್ಯ ತನ್ನ ಗಟ್ಟಿಗತನವನ್ನೆಲ್ಲ ವೆಚ್ಚಮಾಡಿ ಈ ಸಂದರ್ಭದಲ್ಲಿ ಏನೆನ್ನಬೇಕೆಂಬುದನ್ನು ಚಿಂತಿಸಿದ. ಮಾರುತಿಗೆ ಬಂಗಾರ ಸೇರಲಿ ಎಂದು ದಾಸಾಚಾರ್ಯ ಅಂದ ಮಾತಿಗೆ ಎದುರಾಡುವುದು ಪರಮ ಪಾಪ. ಆದ್ದರಿಂದ ಈಗ ತಾನೇನು ಹೇಳುವುದು ಉಚಿತ?

"ಪಾಪ, ಆಚಾರ್ಯರು ಧರ್ಮಶಾಸ್ತ್ರದಲ್ಲಿ ಹೇಳಿದಂತೆ ಮಾಡಲಿ. ಆಗದವರು ಇದ್ದೇ ಇರುತ್ತಾರಲ್ಲ. ಆಚಾರ್ಯರೇನಾದರೂ ದುಡುಕಿದರೆ— ಏನು—ಗುರುಗಳಿಗೆ ಅದು ತಪ್ಪು ಎನಿಸಿಬಿಟ್ಟರೆ—ಏನು—ನಮ್ಮೆಲ್ಲರ ಗತಿ ಏನು ಹೇಳು. ನಾವು ಪಾಪ, ಆಚಾರ್ಯರ ಖ್ಯಾತಿಗೂ ಚ್ಯುತಿಯಾಗದಂತೆ ನೋಡಿಕೋಬೇಕು. ಏನು. ಪಾರಿಜಾತಪುರದವರನ್ನು ದೂರವಿಟ್ಟಂತೆ ಆಮೇ ಲಿಂದ ಎಲ್ಲಾದರೂ ನಮ್ಮನ್ನ ಮಠದ ಬ್ರಾಹ್ಮಣರು ದೂರಾ ಇಟ್ಟರೆ...."

ಎಂದು ಗರುಡಾಚಾರ್ಯ ಬಹಳ ಮೃದುವಾಗಿ ನಗುತ್ತ ದಾಸಾಚಾರ್ಯನ ಮಾತಿಗೆ ತಾನು ಒಪ್ಪಿದೆ ಎನ್ನುವಂತೆ ನಟಿಸುತ್ತ ಹೇಳಿದ. ಇದರಿಂದ

ಮಾಲೀಸಿನ ಮಾತು ಗೊತ್ತಿಲ್ಲದ ಲಕ್ಷ್ಮಣಾಚಾರ್ಯನಿಗೂ ಸಂತೋಷ ವಾಯಿತು.

"ಈಗ ನೀವೆಲ್ಲ ಮನೆಗೆ ಹೋಗಿರಿ, ಆಚಾರ್ಯರೇ. ನಾನು ಧರ್ಮ ಶಾಸ್ತ್ರನ್ನೆಲ್ಲ ಬುಡಮೇಲು ಮಾಡಿ ಇದಕ್ಕೇನು ಉತ್ತರಾಂತ ಪತ್ತೆ ಮಾಡು ತ್ತೇನೆ—ಇವತ್ತು ರಾತ್ರೆಯಲ್ಲಾ ಕೂತು"

ಎಂದು ಪ್ರಾಣೇಶಾಚಾರ್ಯರು ತುಂಬ ಬಳಲಿ ಅಂದರು.

* * *

ಸಂಜೆಯಾಯಿತು. ಆದರೆ ಸಂಧ್ಯಾವಂದನವಿಲ್ಲ, ಊಟವೂ ಇಲ್ಲ. ಪ್ರಾಣೇಶಾ ಚಾರ್ಯರಿಗೆ ಕೈಗೇನೂ ಕೆಲಸವಿಲ್ಲದೆ ರಗಳೆಯಾದಂತಾಗಿ ಒಳಗಿಂದ ಹೊರಕ್ಕೆ, ಹೊರಗಿಂದ ಒಳಕ್ಕೆ, ಓಡಾಡಿದರು. ಅಂಗಳದಲ್ಲಿ ಕೂತಿದ್ದ ಚಂದ್ರಿಗೆ "ಮೇಲೆ ಬಂದು ಕೂತುಕೊ" ಎಂದರು. ಹೆಂಡತಿಯನ್ನು ಮಗು ವಿನಂತೆ ಎರಡು ಕೈಯಲ್ಲು ಹಿತ್ತಿಲಿಗೆ ಎತ್ತಿಕೊಂಡು ಹೋಗಿ ಮೂತ್ರ ಹೊಯ್ಯಿಸಿ, ತಿರುಗಿ ಎತ್ತಿ ತಂದು ಹಾಸಿಗೆಯ ಮೇಲೆ ಮಲಗಿಸಿದರು. ಸಂಜೆಯ ಔಷಧವನ್ನು ಕುಡಿಸಿ, ತಿರುಗಿ ನಡುಮನೆಗೆ ಬಂದು ಲಾಟೀನಿನ ಬೆಳಕಿನಲ್ಲಿ ಶಾಸ್ತ್ರಗಳನ್ನು ತಿರುವಿಹಾಕುತ್ತ ಕೂತರು.

## ಅಧ್ಯಾಯ: ಐದು

ಶಿರ್ನಾಳಿಗೆ ಹಿಂದಿನ ರಾತ್ರೆ ಕೇಳೂರು ಮೇಳದವರ ಜಾಂಬುವಂತಿ-ಕಲ್ಯಾಣ ನೋಡಹೋಗಿದ್ದ ಶ್ರೀಪತಿಗೆ ನಾರಣಪ್ಪ ಶಿವಮೊಗ್ಗೆಯಿಂದ ಬಂದವನು ಹಾಸಿಗೆ ಹಿಡಿದು ಮಲಗಿದ್ದೂ ತಿಳಿಯದು, ಸತ್ತದ್ದೂ ತಿಳಿಯದು. ತಿಳಿದಿ ದ್ದರೆ ಅಗ್ರಹಾರದಲ್ಲೆಲ್ಲ ಗುಪ್ತವಾಗಿ ತನಗೆ ಆಪ್ತನಾದ ಗೆಳೆಯನೊಬ್ಬನ ಸಾವಿನಿಂದಾಗಿ ಅವನಿಗೆ ವ್ಯಥೆಯಾಗುತ್ತಿತ್ತು. ಆವನು ಮನೆ ಬಿಟ್ಟು ಹೊರಟು ವಾರದ ಮೇಲಾಗಿದೆ. ಕೇಳೂರು ಮೇಳದ ಭಾಗವತನ ಸ್ನೇಹಮಾಡಿ ಅವನು ಬಿಡಾರ ಬಿಟ್ಟಲ್ಲಿ ಆಟದವರ ಜೊತೆ ತಂಗಿ, ಊಟಮಾಡಿ, ರಾತ್ರೆ ಆಟ ನೋಡಿ, ಹಗಲು ನಿದ್ದೆಮಾಡಿ, ಬಿಡುವಿನಲ್ಲಿ ಅಕ್ಕಪಕ್ಕದ ಹಳ್ಳಿಯ ಜನರಲ್ಲಿಗೆ ಹೋಗಿ ಮೇಳದವರಿಗೆ ವೀಳ್ಯಕೊಟ್ಟು ಸ್ವಾಗತಿಸುವಂತೆ ಪ್ರಚಾರಮಾಡಿ,

ಸರಸ-ಕುಶಲ-ಸಂಭಾಷಣೆಯಲ್ಲಿ ಲೋಕವನ್ನು ಒಂದು ವಾರ ಮರೆತಿದ್ದು, ಇವತ್ತು ರಾತ್ರಿ ಕೈಯಲ್ಲಿ ಬ್ಯಾಟರಿ ಹಿಡಿದು ಕಾಡಿನ ಕತ್ತಲಲ್ಲಿ ತನ್ನ ಧೈರ್ಯಕ್ಕಾಗಿ ಗಟ್ಟಿಯಾಗಿ ಒಂದು ಪದ ಹೇಳುತ್ತ ಬರುತ್ತಿದ್ದಾನೆ. ಮೇಲಕ್ಕೆ ಬಾಚಿದ ಅವನ ಕ್ರಾಪಿನ ಕೂದಲು ಕ್ಷೌರವಿಲ್ಲದೆ ಕತ್ತಿನ ತನಕ ಬೆಳೆದಿರಲು ಕಾರಣ ತನಗೊಂದು ಸ್ತ್ರೀವೇಷವನ್ನು ಮುಂದಿನ ವರ್ಷ ಕೊಡುವುದಾಗಿ ಭಾಗವತ ಕೊಟ್ಟ ಆಶ್ವಾಸನೆ. ಎಷ್ಟೆಂದರೂ ಪ್ರಾಣೇಶಾಚಾರ್ಯರು ತಿದ್ದಿದ ನಾಲಿಗೆ ತಾನೇ? ನಿನ್ನ ವಾಕ್ಯಸರಣಿ ಗಂಟಲು ಪರಿಶುದ್ಧವಾಗಿದೆಯೆಂದು ಭಾಗವತ ಮೆಚ್ಚಿದ್ದ. ಅಲ್ಲದೆ ಆಚಾರ್ಯರಿಂದ ಒಂದಿಷ್ಟು ಸಂಸ್ಕೃತ ತರ್ಕ ಪುರಾಣ ಕೇಳಿ ಯಕ್ಷಗಾನದ ಗಹನವಾದ ಸಂಭಾಷಣೆಗೆ ಅವಶ್ಯವಾದ ಸಂಸ್ಕೃತಿಯೂ ಇದೆ ತನ್ನಲ್ಲಿ. ಮೇಳದಲ್ಲೊಂದು ಪಾರ್ಟು ಸಿಕ್ಕಿದಮೇಲೆ ಬೊಜ್ಜದ ಒಡೆ, ಬೊಜ್ಜದ ಪಾಯಸ, ಹಲಸಿನ ಹಣ್ಣಿನ ಮುಳಕಕ್ಕೆಂದು ಬದುಕುವ ಬ್ರಾಹ್ಮಣರ ಕೊಂಪೆಯಿಂದ ಪಾರಾಗಬಹುದು ಎಂದು ಶ್ರೀಪತಿಗೆ ಹರ್ಷ ತುಂಬಿ ಕತ್ತಲೆಯಲ್ಲಿ ಕಾಡಿನಲ್ಲಿ ಭಯವಾಗುತ್ತಿಲ್ಲ. ಅಲ್ಲದೆ ಪೂಜಾರಿ ಶೀನನ ಗುಡಿಸಲಿನಲ್ಲಿ ಕುಡಿದಿದ್ದ ಹೆಂಡ ಹಿತವಾಗಿ ತಲೆಗೆ ಏರಿ ಕಾಡಿನ ಗಾಢವಾದ ಮೌನ ಅವನಲ್ಲಿ ನಡುಕ ಹುಟ್ಟಿಸುತ್ತಿಲ್ಲ. ಎರಡು ಸೀಸೆ ಹೆಂಡ; ಒತ್ತಿದೊಡನೆ ಬೆಳಕು ಚೆಲ್ಲುವ, ಹಳ್ಳಿಯ ಜನರಿಗೆ ಪರಮಾಶ್ಚರ್ಯ ವಸ್ತುವಾದ ಬ್ಯಾಟರಿ—ಹೀಗೆ ಸಶಸ್ತ್ರನಾಗಿ ಹೊರಟಮೇಲೆ ದೆವ್ವವೆಲ್ಲಿ, ಭೂತವೆಲ್ಲಿ? ದೂರ್ವಾಸಪುರ ಹತ್ತಿರವಾದಂತೆ ಅವನ ಮೈ ತನಗೆ ಕಾದಿರುವ ಸುಖದ ಕಲ್ಪನೆಯಿಂದ ಬೆಚ್ಚಗಾಯಿತು. ಅವನ ಹೆಂಡತಿ ತೊಡೆಯನ್ನು ಗಂಟು ಹಾಕಿ ಕೌಂಚಿ ಮಲಗಿದರೇನಂತೆ? ಬೆಳ್ಳಿಯಿದ್ದಾಳಲ್ಲ. ಬೆಳ್ಳಿ ಹೊಲತಿಯಾದರೇನಂತೆ? ನಾರಣಪ್ಪ ಹೇಳುವುದಿಲ್ಲವೆ—ಕಾಳಿಯಾದರೇನು? ಬೋಳಿಯಾದರೇನು? ಬೆಳ್ಳಿ ಕಾಳಿಯೂ ಅಲ್ಲ, ಬೋಳಿಯೂ ಅಲ್ಲ. ಬಚ್ಚ-ಗಲ್ಲದ, ಬತ್ತಿದ ಮೊಲೆಯ, ಬೇಳೆಹುಳಿ ವಾಸನೆ ಬರುವ ಬಾಯಿಯ ಯಾವ ಬ್ರಾಹ್ಮಣ ಹುಡುಗಿ ಅವಳಿಗೆ ಸಮ? ಕೈಗೆ ತೊಡೆಗೆ ಭರ್ತಿಯಾಗಿ ಸಿಗುವ, ಮರಳಿನಲ್ಲಿ ಮಣ್ಣಿನಲ್ಲಿ ಎಣೆಯಾಡುವ ಹಾವಿನಂತೆ ತನ್ನ ಜೊತೆ ಹೊರಳುವ ಬೆಳ್ಳಿಗೇನು ಕೊರತೆ? ಇಷ್ಟು ಹೊತ್ತಿಗೆ ಅವಳು ಗುಡಿಸಲಿನ ಎದುರು ಮಡಕೆಯಲ್ಲಿ ಕಾಯಿಸಿದ ಬಿಸಿನೀರು ಸ್ನಾನಮಾಡಿ, ಅವಳಪ್ಪ ತಂದ ಹುಳಿ ಹೆಂಡವನ್ನಷ್ಟು ಕುಡಿದು ಬೆಚ್ಚಗೆ ಹದವಾಗಿರುತ್ತಾಳೆ: ಶ್ರುತಿ ಮಾಡಿದ ಮೃದಂಗದಂತೆ. ಅಚ್ಚಕಪ್ಪೂ ಅಲ್ಲ, ಬಿಳುಚಿದ ಬಿಳಿಯೂ ಅಲ್ಲ—

ಬೀಜಕ್ಕೆ ಫಲವತ್ತಾದ ಎಳೆಬಿಸಿಲಿನಲ್ಲಿ ಕಾದ ಮಣ್ಣಿನ ಬಣ್ಣ ಅವಳ ಮೈ; ಶ್ರೀಪತಿಯ ನಡೆಯುವ ಹೆಜ್ಜೆ ನಿಲ್ಲುತ್ತದೆ. ಖುಷಿಗೆ ಬ್ಯಾಟರಿಯೊತ್ತಿ ಬೆಳಕು ಮಾಡಿ ಆರಿಸುತ್ತಾನೆ. ಮತ್ತೆ ಹತ್ತಿಸಿ ಅರಣ್ಯದ ಸುತ್ತ ಬೆಳಕನ್ನು ಚೆಲ್ಲಿ ರಾಕ್ಷಸವೇಷ ಹಾಕಿ ಬಂದ ಆಟದವನಂತೆ ಹಿಗ್ಗುತ್ತಾನೆ. ಥೈಥೈತಕಥೈಥೈ —ಥೈಥೈ: ಕುಣಿಯುತ್ತಾನೆ. ಕುಪ್ಪಳಿಸಿ ಹಾಕಿ ತನಗೆ ಮಂಡಿಯ ಮೇಲೆ ಸುತ್ತುವುದಕ್ಕೆ ಬರುತ್ತದೊ ನೋಡುವ ಎಂದು ಪ್ರಯತ್ನಿಸಿ ಮುಂಡಿಗೆ ಪೆಟ್ಟಾಗಿ ಎದ್ದು ನಿಲ್ಲುತ್ತಾನೆ. ಅರಣ್ಯದ ನಿರ್ಜನತೆ, ಬ್ಯಾಟರಿಯ ಬೆಳಕಿಗೆ ಗಾಬರಿಯಾದ ಹಕ್ಕಿಗಳ ರೆಕ್ಕೆಯ ಪಟಪಟದಿಂದ ಅವನಿಗೆ ಇನ್ನಷ್ಟು ಮದವುಕ್ಕುತ್ತದೆ. ಕರೆದ ಕೂಡಲೆ ಹಾಜರಾಗುತ್ತವೆ: ನವರಸಭಾವಗಳು. ಕೋಪವೇ, ಬೀಭತ್ಸವೇ, ರೌದ್ರವೇ, ಭಕ್ತಿಯೇ, ಶೃಂಗಾರವೇ—ಒಂದ ರಿಂದೊಂದಕ್ಕೆ ಸಲೀಸಾಗಿ ಜಾರುತ್ತದೆ ಅವನ ಕಲ್ಪನೆ. ಈಗ ಲಕ್ಷ್ಮೀದೇವಿ ನಸುಕಿನಲ್ಲೆದ್ದು ಯಕ್ಷಗಾನದ ಧಾಟಿಯಲ್ಲಿ ಉದಯರಾಗದ ಕೀರ್ತನೆಯನ್ನು ಶೇಷಶಾಯಿಗೆ ಹಾಡುತ್ತಿದ್ದಾಳೆ....

ಏಳು...ನಾರಾಽಽಯಣನೆ
ಏಳು ಲಕ್ಷ್ಮೀರಮಣಽ
ಏಳಯ್ಯಽ ಬೆಳಽಗಾಯಿತೂ...

ಶ್ರೀಪತಿಯ ಕಣ್ಣಿನಲ್ಲಿ ನೀರೇ ಬಂದುಬಿಡುತ್ತದೆ. ಗರುಡ ಬಂದು ಎಬ್ಬಿಸುತ್ತಾನೆ—'ಏಳು ನಾರಾಯಣನೆ.' ನಾರದ ಬಂದು ತಂಬೂರಿ ಬಾರಿಸುತ್ತ ಎಬ್ಬಿಸುತ್ತಾನೆ—'ಏಳು ಲಕ್ಷ್ಮೀರಮಣ.' ಸಮಸ್ತ ಪಶುಪಕ್ಷಿಗಳು, ವಾನರ, ಕಿನ್ನರ, ಯಕ್ಷ, ಗಂಧರ್ವಾದಿಗಳು ಬೇಡಿಕೊಳ್ಳುತ್ತಾರೆ—'ಏಳಯ್ಯ ಬೆಳಽ ಗಾಯಿತು.' ಶ್ರೀಪತಿ ಮತ್ತೆ ಲಾಸ್ಯದಲ್ಲಿ ಉಟ್ಟ ಪಂಚೆಯನ್ನು ಸೀರೆಯಂತೆ ಹಿಡಿದು ಕೈಯಾಡಿಸಿ, ಕತ್ತು ಕೊಂಕಿಸಿ ಕುಣಿದ. ಶೀನನ ಹೆಂಡ ಏರೇ ಬಿಟ್ಟಿತಲ್ಲ, ನಾರಣಪ್ಪನಲ್ಲಿಗೆ ಹೋಗಿ ಇನ್ನಷ್ಟು ಏರಿಸಿಬಿಡಬೇಕೆಂದುಕೊಂಡ. ಯಕ್ಷಗಾನದ ಸ್ತ್ರೀಪಾತ್ರಗಳೆಲ್ಲ ನೆನಪಾಗುತ್ತವೆ. ಪುರಾಣಗಳಲ್ಲಿ ಹೆಣ್ಣಿನ ಮೋಹಕ್ಕೆ ಬಲಿಯಾಗದ ಋಷಿಯೇ ಇಲ್ಲ. ವಿಶ್ವಾಮಿತ್ರನ ತಪೋಭಂಗ ಮಾಡಿದ ಮೇನಕೆ—ಹೇಗಿದ್ದಿರಬೇಕು ಅವಳು? ಚಂದ್ರಿಗಿಂತ ಸುಂದರಿ ಯಿದ್ದಿರಬೇಕು. ಯಾರ ಕಣ್ಣಿಗೂ ಹರಕು ತುಂಡುಟ್ಟು ಗೊಬ್ಬರ ಎತ್ತಲು ಬರುವ ಬೆಳ್ಳಿಯ ರೂಪು ಬೀಳದಿದ್ದುದು ಪರಮಾಶ್ಚರ್ಯ. ಆದರಲ್ಲಿ

ಆಶ್ಚರ್ಯವೂ ಇಲ್ಲ ಎನ್ನಿ. ಬ್ರಾಹ್ಮಣಾರ್ಥದ ಗೊಡ್ಡುಗಳ ಕಣ್ಣಿಗೆ ಏನು ತಾನೇ ಕಂಡೀತು ? ಸಾರಿ ಸಾರಿ ಮಕ್ಕಳಿಗೆನ್ನುವಂತೆ ಪ್ರಾಣೇಶಾಚಾರ್ಯರು ವಿವರಿಸುತ್ತಾರೆ: ವೇದವ್ಯಾಸರು ಎಷ್ಟು ಪುಳಕಿತರಾಗಿರಬೇಕು ! ಉದಯ ಕಾಲದಲ್ಲಿ ಅವರು ಎದ್ದು ಉಷೆಯನ್ನು ಕಂಡಾಗ ಭಗವಂತ ಈ ಮಾತು ಗಳನ್ನು ಅವರ ಬಾಯಿಂದ ಆಡಿಸಿದಾಗ 'ಸ್ನಾನ ಮಾಡಿ ಶುಭ್ರಳಾದ ಪುಷ್ಪ ವತಿಯ ತೊಡೆಗಳ ಹಾಗೆ' : ಆಹಾ ಎಂತಹ ಧೀರ ಕಲ್ಪನೆ, ಸುಂದರ ಉಪಮೆ. ಆದರೆ ಬ್ರಾಹ್ಮಣರಿಗೆ ಅದು ಬರಿಯ ಮಂತ್ರ, ಉದ್ಯೋಗಕ್ಕೊಂದು ಮಾರ್ಗ. ರಾಜನ ವೇಷ ಹಾಕುವ ಕುಂದಾಪುರದ ನಾಗಪ್ಪ ಎಷ್ಟೊಂದು ಗಮ್ಮತ್ತಿನಲ್ಲಿ ಮಾತನ್ನಾಡುತ್ತಾನೆ: ಈ ದುಂಬಿಗಳೋ, ಈ ಪಾರಿಜಾತ, ಸಂಪಿಗೆ, ಮಲ್ಲಿಗೆ, ಕೇದಗೆ ಬೆಳೆದ ಈ ವನವೋ, ಇಲ್ಲಿ ಏಕಾಂಗಿಯಾಗಿ, ಅವನತವದನೆಯಾಗಿ, ದುಃಖದಿಂದ ಬಾಧಿತಳಾಗಿ ಕಾಣುವ ಎಲೈ ರಮಣಿ, ನೀನು ಯಾರು ? ಶ್ರೀಪತಿ ಮುಗುಳ್ನಗುತ್ತ ನಡೆಯುತ್ತಾನೆ. ಅಗ್ರಹಾರದಲ್ಲೆಲ್ಲ ಸೌಂದರ್ಯ ವನ್ನು ಕಾಣುವ ಕಣ್ಣಿರುವುದೆಂದರೆ ಇಬ್ಬರಿಗೆ ಮಾತ್ರ : ನಾರಣಪ್ಪನಿಗೆ, ಚಂದ್ರಿಗೆ. ಮಹಾರೂಪವತಿಯೆಂದರೆ ಚಂದ್ರಿ. ಈ ನೂರು ಮೈಲಿ ವಿಸ್ತೀರ್ಣ ದಲ್ಲಿ ಅಂಥದೊಂದು ಪುತ್ತಳಿಯನ್ನು ತೋರಿಸಿ. ಸೈ ಎಂದುಬಿಡುತ್ತೇನೆ. ದುರ್ಗಾಭಟ್ಟನಿಗೂ ಅಲ್ಪಸ್ವಲ್ಪ ರಸಿಕತೆ ಇಲ್ಲವೆಂದಲ್ಲ. ಆದರೆ ಅಲ್ಲೊಂದು ಇಲ್ಲೊಂದು ಶೆಟ್ಟರ ಹೆಂಗಸಿನ ಮೊಲೆಯ ಮೇಲೆ ಕೈಯಾಡಿಸೋದಕ್ಕಿಂತ ಹೆಚ್ಚಿನ ತಾಕತ್ತಿಲ್ಲ ಅವನಿಗೆ. ಹಾಗೆ ನೋಡಿದರೆ ನಿಜವಾದ ರಸಿಕರೆಂದರೆ ಪ್ರಾಣೇಶಾಚಾರ್ಯರು. ಸಾವಿರಕ್ಕೊಂದು ಜನ ಅಂಥವರು. ಅವರು ನಿತ್ಯ ಸಂಜೆ ಪುರಾಣವನ್ನೋದುತ್ತ ಆ ಶ್ಲೋಕಗಳಿಗೆ ರಮ್ಯವಾಗಿ ಅರ್ಥ ಹೇಳುವ ಗತ್ತು ಕೇಳಿದರೆ ಎಂತಹ ಮಹಾಮಹಾ ಭಾಗವತನಿಗೂ ನಾಚಿಕೆಯಾಗ ಬೇಕು. ಎಂತಹ ನಯವಾದ ಮಾತು, ಮೃದುವಾದ ನಗು, ಕಣ್ಣಿಗೆಕಟ್ಟುವ ರೂಪು. ಜುಟ್ಟು, ಅಂಗಾರ, ಅಕ್ಷತೆ, ಜರೀ ಶಾಲು ಒಪ್ಪುವುದೆಂದರೆ ಅವರಿ ಗೊಬ್ಬರಿಗೇನೇ. ಅಷ್ಟ ಮಠಗಳಲ್ಲಿ, ದಕ್ಷಿಣದ ಮಹಾಪಂಡಿತರ ಜೊತೆ ವಾದಿಸಿ ಗೆದ್ದು ಬಂದ ಅವರಲ್ಲಿ ಹದಿನೈದು ಜರೀ ಶಾಲುಗಳವೆಯಂತೆ. ಆದರೆ ಅವರು ಕೊಚ್ಚಿಕೊಳ್ಳುವವರಲ್ಲ. ಪಾಪ ಅವರ ಹೆಂಡತಿ ನಿತ್ಯರೋಗಿ— ಮಕ್ಕಳಿಲ್ಲ ಮರಿಯಿಲ್ಲ. ಅಷ್ಟೊಂದು ರಮ್ಯವಾಗಿ ಕಾಳಿದಾಸನ ಸ್ತ್ರೀವರ್ಣನೆ ಗಳನ್ನು ವಿವರಿಸುತ್ತಾರಲ್ಲ ಅವರಿಗೆ ಸ್ವತಃ ಆಸೆಯಾಗುವುದಿಲ್ಲವೆ? ತಾನು ಪ್ರಥಮಬಾರಿಗೆ ಹೊಳೆಗೆ ನೀರಿಗೆಂದು ಬಂದಿದ್ದ ಬೆಳ್ಳಿಯನ್ನು ಸಂಭೋಗಿಸಿದ್ದು

ಆಚಾರ್ಯರು ಓದಿದ ಶಾಕುಂತಲ ಕೇಳಿ. ತಡೆಯಲಾರದೇ ಎದ್ದು ಹೋದೆ. ಮಡಕೆಯಲ್ಲಿ ನೀರು ತುಂಬಿ ತಲೆಯಮೇಲೆ ಹೊತ್ತು, ಉಟ್ಟ ತುಂಡಿನ ಸೆರಗು ಜಾರಿ ಬೆಳದಿಂಗಳಿನಲ್ಲಿ ಮಣ್ಣಿನ ಬಣ್ಣದ ಮೊಲೆಗಳನ್ನು ಕುಣಿಸುತ್ತ ಹೆಜ್ಜೆ ಹಾಕಿದವಳು ಶಕುಂತಲೆಯಂತೆ ಕಂಡಳು. ಆಚಾರ್ಯರ ವರ್ಣನೆಯನ್ನು ಖುದ್ದು ಆಸ್ವಾದಿಸಿದ್ದಾಯಿತು.

ಶ್ರೀಪತಿ ಒಳದಾರಿಯಿಂದ ಸೀದ ಗುಡ್ಡದ ಮೇಲಿದ್ದ ಹೊಲೆಯರ ಗುಡ್ಡಗಳ ಕಡೆ ನಡೆದ. ಅಮಾಸೆ ಎದುರಿನ ಕಡುಕಪ್ಪು ರಾತ್ರಿಯಲ್ಲಿ ಒಂದು ಗುಡಿಗೆ ಬೆಂಕಿ ಹತ್ತಿ ಉರಿಯೋದು ಕಂಡಿತು. ಅದರ ಬೆಳಕಿನ ಆವೃತ್ತದಲ್ಲಿ ಮಸಿ ಮಸಿ ರೂಪಗಳು. ದೂರದಲ್ಲಿ ನಿಂತು ನೋಡಿದ, ಆಲಿಸಿದ. ಯಾರೂ ಗುಡಿಗೆ ಹತ್ತಿದ ಬೆಂಕಿಯನ್ನು ಆರಿಸುವ ಯತ್ನದಲ್ಲಿದ್ದಂತೆ ಕಾಣಿಸಲಿಲ್ಲ. ಆಶ್ಚರ್ಯಪಟ್ಟು ಒಂದು ಮೊಟ್ಟನ ಸಂದಿ ನಿಂತು ಕಾದ. ಬಿದಿರಿನ ಗಳದಿಂದ ಕಟ್ಟಿ ಚಾಪೆ ಹೊದಿಸಿ, ಸೋಗೆ ಹಚ್ಚಿದ ಗುಡಿ ಬೇಸಗೆಯಾದ್ದರಿಂದ ಕ್ಷಣದಲ್ಲಿ ಧಗಧಗ ಉರಿದು ನೆಲಸಮವಾಯಿತು. ಮಸಿರೂಪಗಳು ತಮ್ಮ ಗುಡಿಗಳಿಗೆ ಮರಳಿದವು. ಎದ್ದ ಬೆಂಕಿಯ ಝಳಕ್ಕೆ ಗೂಡುಗಳನ್ನು ಬಿಟ್ಟು ಕಾತರದಿಂದ ಕೂಗಿದ ಹಕ್ಕಿಗಳು ಮರಳಿ ಗೂಡು ಸೇರಿದವು. ಶ್ರೀಪತಿ ಮೆಲ್ಲಗೆ ಹೆಜ್ಜೆಯಿಟ್ಟು ಹೋಗಿ, ಬೆಳ್ಳಿಯ ಗುಡಿಯಿಂದ ಸ್ವಲ್ಪದೂರ ನಿಂತು ಚಪ್ಪಾಳೆ ತಟ್ಟಿದ.

ತಲೆಗೆ ಬಿಸಿನೀರು ಸ್ನಾನ ಮಾಡಿ, ಸೆರಗಿನಲ್ಲಿ ಬರಿಯ ತುಂಡುಟ್ಟು, ಸೊಂಟದ ಮೇಲೆ ಬೆತ್ತಲೆಯಾಗಿ, ಕಪ್ಪು ಕೂದಲಿನ ರಾಶಿಯನ್ನು ಬೆನ್ನಿನ ಮೇಲೆ ಮುಖದ ಮೇಲೆ ಚೆಲ್ಲಿಕೊಂಡಿದ್ದ ಬೆಳ್ಳಿ ಮೆತ್ತಗೆ ಗುಡಿಯಿಂದ ಹೊರ ಬಂದು, ಸದ್ದು ಮಾಡದೆ ದೂರದಿಂದ ಪೊದರಿನ ಸಂದಿ ಮರೆಯಾದಳು. ಅವಳು ಮರೆಯಾಗುವವರೆಗೆ ಮರವೊಂದರ ಹಿಂದೆ ನಿಂತು ಕಾದ ಶ್ರೀಪತಿ ಅತ್ತ ಇತ್ತ ಕಣ್ಣುಹರಿಸಿ ನೋಡಿ, ಯಾರೂ ಸುಳಿದಾಡುತ್ತಿಲ್ಲವೆಂದು ಖಚಿತ ಮಾಡಿಕೊಂಡು, ಬೆಳ್ಳಿ ಅಡಗಿದ ಮೊಟ್ಟಿಗೆ ಹೋಗಿ ಬ್ಯಾಟರಿ ಹಾಕಿ-ಆರಿಸಿ—ಅವಳನ್ನು ತಬ್ಬಿ ಆತುರದಿಂದ ಉಸಿರಾಡಿದ.

"ಅಯ್ಯ, ಇವತ್ತು ಬ್ಯಾಡವಯ್ಯ."

ಬೆಳ್ಳಿ ಹೀಗೆ ನುಡಿದದ್ದೇ ಇಲ್ಲ. ಶ್ರೀಪತಿಗೆ ಆಶ್ಚರ್ಯವಾಯಿತು. ಆದರೆ ಅವಳ ಮಾತನ್ನು ಲೆಕ್ಕಕ್ಕೆ ತರದೆ ಸೊಂಟಕ್ಕೆ ಸುತ್ತಿದ್ದ ಅವಳ ತುಂಡನ್ನು ಬಿಚ್ಚಿದ.

"ಪಿಳ್ಳ ಪುತ್ತು ಆತನ ಹೊಲತಿ ದೆಯ್ಯ ಪೆಟ್ಟಿಯೋ ಏನು ಕತೆಯೋ ಸತ್ತವ್ರು ಅಯ್ಯ ಇವತ್ತು."

ಶ್ರೀಪತಿಗೆ ಈಗ ಮಾತು ಬೇಡ. ದುಂಡಗೆ ನಿಂತಿದ್ದವಳನ್ನು ನೆಲಕ್ಕೆಳೆದ.

"ಎಲ್ಲೂ ಸತ್ತುಬಿಟ್ಟವೆಂದು ಶವಾನ್ನ ಅಲ್ಲೇ ಬಿಟ್ಟು ಗುಡಿಗೇ ಬೆಂಕಿ ಕೊಟ್ಟುಬಿಟ್ಟವು. ಜರಾ ಬಂದು ಸತ್ತವ್ರು. ಮುಚ್ಚಿದ್ದ ಕಣ್ಣು ಬಿಚ್ಚಲಿಲ್ಲ."

ಶ್ರೀಪತಿಗೆ ಅಸಹನೆ. ಏನೋ ಆಡುತ್ತಿದ್ದಾಳೆ. ಎಲ್ಲಿಯೋ ಇದ್ದಾಳೆ. ಅಷ್ಟೊಂದು ಕಾತರಿಸಿ ಬಂದರೆ ಯಾರೋ ಸತ್ತವೆಂದು ಹರಟುತ್ತಿದ್ದಾಳೆ. ಈ ಸಮಯ ಹೀಗೆ ಮಾತನಾಡುವವಳೇ ಅಲ್ಲ ಅವಳು. ಬೀಳುವ ಮಳೆಗೆ ಬಾಗುವ ಪೈರಿನಂತೆ ಇವಳು....

ಬೆಳ್ಳಿ ತುಂಡುಟ್ಟುಕೊಳ್ಳುತ್ತ—

"ಅಯ್ಯ, ಒಂದು ವಿಶ್ಯ. ಅಂಥದೊಂದು ಆಶ್ಚರ್ಯ ನಾ ಕಂಡೇ ಇಲ್ಲ. ನಮ್ಮ ಗುಡೀಗೆ ಏನುಣ್ಣಕ್ಕಿರುತ್ತೇಂತ ಇಲಿ ಹೆಗ್ಗಣ ಬರಬೇಕು? ಬ್ರಾಂಬ್ರ ಮನೇಲಿ ಇದ್ದ ಹಾಗೇನು ನಮ್ಮ ಗುಡಿ? ಈಗ ನೆಂಟರ ಹಾಗೆ ಬಂದು ನೆಲಸಲಿಕ್ಕೆ ಹತ್ತಾವೆ. ಸೂರಿನಿಂದ ತಪತಪ ಉದುರಿ ಗಿರಗಿರ ಸುತ್ತಿ ಸಾಯಕ್ಕೆ ಹತ್ತಾವೆ. ಬೆಂಕಿಬಿದ್ದ ಗುಡೀಂದ ಪ್ರಾಣ ಹಿಡಿದು ಓಡೋ ಠಂಗೆ ಕಾಡು ಬಿದ್ದು ಓಡಲಿಕ್ಕೆ ಹತ್ತಾವೆ. ಇಂಥಾ ಪಾಡು ನಾ ಕಂಡಿಲ್ಲ. ದೆಯ್ಯದವನನ್ನ ಗಣಾ ಬರಿಸಿ ಕ್ಯಾಳಬಾಕು. ಹೊಲೇರ ಗುಡಿಗೆ ಇಲಿ ಬರೋದೇನು, ಹೊಲೆಯ ಕಟ್ಟಿಗೆ ಮುರಿದಂತೆ ಲಕ್ಕ ಸಾಯೋದುಂದ್ರೇನು —ಕ್ಯಾಳಬಾಕು."

ಶ್ರೀಪತಿ ಪಂಚೆಯುಟ್ಟು, ಅಂಗಿ ತೊಟ್ಟು, ಕಿಸೆಯಿಂದ ಬಾಚಣಿಗೆ ತೆಗೆದು ಕ್ರಾಪು ಬಾಚಿ, ಬ್ಯಾಟರಿ ಹತ್ತಿಸಿ ನೋಡುತ್ತ ಅವಸರದಲ್ಲಿ ಓಡಿಬಿಟ್ಟ. ಬೆಳ್ಳಿ ಮಲಗಲಿಕ್ಕೆ ಸರಿಯೇ ಹೊರ್ತು ಮಾತಾಡಲಿಕ್ಕಲ್ಲ. ಬಾಯಿ ಬಿಟ್ಟರೆ ಅವಳದ್ದು ಗಣ, ದೆಯ್ಯ.

ನಾರಣಪ್ಪನನ್ನು ನೋಡುವ ಅವಸರದಿಂದ ಪಂಚೆಯನ್ನು ಮೇಲಕ್ಕೆತ್ತಿ ಕಟ್ಟಿ ಗುಡ್ಡವನ್ನಿಳಿದ. ಸರಾಯಿ ಕುಡಿದು ಇವತ್ತು ರಾತ್ರೆ ಅಲ್ಲೇ ಮಲಗಿ ಬೆಳಗ್ಗೆ ಎದ್ದು ಪಾರಿಜಾತಪುರದ ನಾಗರಾಜನ ಮನೆಗೆ ಹೋದರೆ ಸರಿ. ಮೆತ್ತಗೆ ನಾರಣಪ್ಪನ ಮನೆಯ ಬಾಗಿಲಿನ ಎದುರು ನಿಂತು ಬಾಗಿಲನ್ನು ತಳ್ಳಿದ. ಅಗಳಿ ಹಾಕಿರಲಿಲ್ಲ. ಇನ್ನೂ ಎದ್ದಿರಬೇಕು ಅವ ಎಂದು ಖುಷಿಯಾಗಿ ಒಳಗೆ ಹೋದ. ಬ್ಯಾಟರಿ ಹಾಕಿ, 'ನಾರಣಪ್ಪ, ನಾರಣಪ್ಪ'

ಎಂದು ಕರೆದ. ಉತ್ತರವಿರಲಿಲ್ಲ. ಕೆಟ್ಟನಾತ ಬಂದಹಾಗಾಯಿತು ; ಹೊಟ್ಟೆ ತೊಳೆಸಿಬರುವಂತಹ ಕೊಳೆಯುವ ನಾತ. ಉಪ್ಪರಿಗೆ ಹತ್ತಿ ಬಾಗಿಲು ತಟ್ಟಿ ನೋಡುವುದೆಂದು ಕತ್ತಲಿನಲ್ಲೇ ತನಗೆ ಪರಿಚಿತವಾದ ಮೆಟ್ಟಲುಗಳ ಕಡೆ ನಡೆದ. ಮೂಲೆ ತಿರುಗುವಲ್ಲಿ ಬರಿಗಾಲಿನಲ್ಲಿ ಮೆತ್ತಗೆ ತಣ್ಣಗೆ ಇದ್ದುದೊಂದನ್ನ ಪಿಚಕ್ಕನೆ ತುಳಿದಂತಾಗಿ ಹೌಹಾರಿ ಬ್ಯಾಟರಿ ಹಾಕಿ ನೋಡಿದ. ಇಶ್ಶಿ ! ಇಲಿ. ಕಾಲು ಮೇಲೆ ಮಾಡಿ ಅಂಗಾತನೆ ಸತ್ತುಬಿದ್ದ ಇಲಿ. ಅದರ ಮೇಲೆ ಕೂತ ನೊಣ ಬ್ಯಾಟರಿ ಬೆಳಕಿಗೆ ಗುಯ್ಯೆಂದು ಎದ್ದವು. ದಿಡಿದಿಡಿ ಮೆಟ್ಟಲು ಹತ್ತಿ ಉಪ್ಪರಿಗೆಗೆ ಹೋಗಿ ಬ್ಯಾಟರಿ ಹಾಕಿದ. ನೆಲದ ಮ್ಯಾಲೆ ಯಾಕೆ ಹೀಗೆ ಮುಸುಕೆಳೆದು ನಾರಣಪ್ಪ ಮಲಗಿದ್ದಾನೆ—ಮೂಗಿನ ಮಟ್ಟ ಹಾಕ್ಕೊಂಡಿರ ಬೇಕೆಂದು ನಸುನಗುತ್ತ ಮುಸುಕೆಳೆದು 'ನಾರಾಣಪ್ಪ, ನಾರಾಣಪ್ಪ' ಎಂದು ಅಲುಗಿಸಿದ. ಮತ್ತೆ ಇಲಿಯನ್ನು ತುಳಿದಾಗಿನಂತೆ ತಣ್ಣಗಿನ ಸ್ಪರ್ಶವಾಗಿ ಸಟ್ಟನೆ ಕೈಯೆಳೆದುಕೊಂಡು ಬ್ಯಾಟರಿ ಹತ್ತಿಸಿದ. ಮೇಲಕ್ಕೆ ಸಿಕ್ಕಿದ ದೃಷ್ಟಿಯಿಲ್ಲದ ರೆಪ್ಪೆ ತೆರೆದ ಕಣ್ಣುಗಳು. ಬ್ಯಾಟರಿಯ ಬೆಳಕಿನ ವೃತ್ತದಲ್ಲಿ ನೊಣ, ನುಸಿ, ನಾತ.

## ಅಧ್ಯಾಯ : ಆರು

ಅಗ್ರಹಾರದಲ್ಲೆ ಹಿರಿಯವಳಾದ ಅರವತ್ತು ದಾಟಿ ದಶಕ ಕಳೆದ ಅಜ್ಜಿ ಲಕ್ಷ್ಮೀದೇವಮ್ಮ, ಹೆಬ್ಬಾಗಿಲನ್ನು 'ಘರ್ರ್ರೀ' ಎಂದು ತೆಗೆದು 'ಹೇಯ್' ಎಂದು ತೇಗಿದಳು. ಅಗ್ರಹಾರದ ಬೀದಿಗಿಳಿದು, ಕೋಲೂರಿ ನಿಂತು, ಇನ್ನೊಮ್ಮೆ 'ಹೇಯ್' ಎಂದು ತೇಗಿದಳು. ನಿದ್ದೆ ಬರದಿದ್ದ ಪಕ್ಷದಲ್ಲಿ, ಅಥವಾ ಮನಸ್ಸು ವ್ಯಗ್ರಗೊಂಡಾಗ ಹೀಗೆ ಅವಳು ರಾತ್ರಾನುರಾತ್ರಿ ಅಗ್ರಹಾರದ ಬೀದಿಗೆ ಬಂದು, ಮೂರು ಸರ್ತಿ ಮೇಲಿಂದ ಕೆಳಕ್ಕೆ ಕೆಳಗಿನಿಂದ ಮೇಲಕ್ಕೆ ಅಲೆದು, ಗರುಡಾಚಾರ್ಯನ ಮನೆಯ ಎದುರು ನಿಂತು, ಅವನ ಪುತ್ರ–ಪೌತ್ರ–ಪಿತೃಗಳನ್ನೆಲ್ಲ ಕರೆದು, ದೈವ–ದೇವತೆಗಳನ್ನೆಲ್ಲ ಸಾಕ್ಷಿಗೆಳೆದು, ಹಿಡಿ ಹಿಡಿ ಶಾಪ ಹಾಕಿ, ತಿರುಗಿ ತನ್ನ ಮನೆಗೆ ಬಂದು 'ಘರ್ರ್ರೀ' ಎಂದು ಮುರದ ಹೆಬ್ಬಾಗಿಲನ್ನು ಎಳೆದುಕೊಂಡು ಮಲಗುವುದು ಪದ್ಧತಿ. ಅದರಲ್ಲೂ ಅಮಾಸೆ ಹುಣ್ಣಿಮೆಗಳು ಹತ್ತಿರವಾದಂತೆ ಅವಳ ಶಪಿಸುವ ಚಟ ಉಬ್ಬರಕ್ಕೇರುತ್ತದೆ.

ಅಗ್ರಹಾರದಲ್ಲಿ ಪ್ರಸಿದ್ಧವಾದ ವಿಷಯ: ಅವಳ ಬಾಗಿಲು, ಅವಳ ತೇಗು. ಎರಡೂ ಈ ತುದಿಯಿಂದ ಆ ತುದಿಗೆ ಕೇಳುತ್ತವೆ. ಅವಳ ಕೀರ್ತಿ ನಾಲ್ಕು ದಿಕ್ಕಿನಲ್ಲಿರುವ ಎಲ್ಲ ಬ್ರಾಹ್ಮಣ ಅಗ್ರಹಾರಗಳಲ್ಲೂ ಹಬ್ಬಿತ್ತು. ಬಾಲವಿಧವೆಯಾದ ಅವಳನ್ನು ಕೆಲವರು ಅವಲಕ್ಷಣದ ಲಕ್ಷ್ಮೀದೇವಮ್ಮನೆಂದು ಕರೆಯುತ್ತಾರೆ. ಅವಳು ಎದುರಾದರೆ ನಾಲ್ಕು ಹೆಜ್ಜೆ ಹಿಂದಕ್ಕೆ ನಡೆದು ಮತ್ತೆ ಪ್ರಯಾಣದಲ್ಲಿ ತೊಡಗುವ ತುಂಟ ಹುಡುಗರನ್ನು ಮತ್ತು ಬ್ರಾಹ್ಮಣರನ್ನು ಅವಳು ಕೋಲು ಬೀಸಿ ಅಟ್ಟುತ್ತಾಳೆ. ಶಾಪ ಹಾಕುತ್ತಾಳೆ. ಆದರೆ ಅವಳ ಮಾತನ್ನು ಯಾರೂ ಎಗ್ಗಿಗೆ ತೆಗೆದುಕೊಳ್ಳುವುದಿಲ್ಲ. ಹುಡುಗರು ಇವಳನ್ನು ಹುಳಿತೇಗಿನ ಲಕ್ಷ್ಮೀದೇವಮ್ಮನೆಂದು ಕರೆಯುತ್ತಾರೆ. ಆದರೆ ಪ್ರಸಿದ್ಧವಾದ ಅವಳ ಹೆಸರು ಅರೆಪುರುಳು ಲಕ್ಷ್ಮೀದೇವಮ್ಮನೆಂದು. ಅವಳದ್ದೊಂದು ಪುರಾಣವೆ: ಎಂಟರ ಹುಡುಗಿಗೆ ಮದುವೆ. ಹತ್ತರಲ್ಲಿ ಪತಿವಿಯೋಗ. ಹದಿನೈದರಲ್ಲಿ ಅತ್ತೆ-ಮಾವ ಸತ್ತರು. ಅನಿಷ್ಟದ ನಕ್ಷತ್ರದವಳೆಂದು ಅಗ್ರಹಾರ ಜರಿಯಿತು. ಅವಳಿಗಿಪ್ಪತ್ತು ತುಂಬುವುದರೊಳಗೆ ಅವಳಪ್ಪ ಅಮ್ಮನೂ 'ಗುಟುಕ್' ಎಂದುಬಿಟ್ಟರು. ಆಯಿತ? ಆಮೇಲೆ ಅವಳಿಗಿದ್ದ ಒಂದಿಷ್ಟು ಆಸ್ತಿ, ನಗ, ಗರುಡಾಚಾರ್ಯನ ತಂದೆ ವಹಿಸಿಕೊಂಡ. ತನ್ನ ಮನೆಗೇ ಅಜ್ಜಿಯನ್ನು ಕರೆಸಿಕೊಂಡು ಸಾಕಿದ. ಅವನದ್ದೆಲ್ಲ ಇಂಥದೇ ಕಾರುಭಾರು. ನಾರಣಪ್ಪನ ತಂದೆಗೆ ವಿವೇಕ ಅಷ್ಟಷ್ಟರಲ್ಲೇ ಎಂದು ಅವನ ಆಸ್ತಿಯ ವಹಿವಾಟನ್ನೂ ಹೀಗೆಯೇ ನಡೆಸಿದ್ದ. ಹೀಗೆ ಇಪ್ಪತ್ತೈದು ವರ್ಷ ಲಕ್ಷ್ಮೀದೇವಮ್ಮ ಕಾಲಯಾಪನ ಮಾಡಿದಳು. ಆಮೇಲೆ ತಂದೆ ಸತ್ತಮೇಲೆ ಗರುಡನ ಕಾರುಭಾರು ಪ್ರಾರಂಭವಾಯಿತು. ಅವನ ಹೆಂಡತಿಯೋ: ಅರೆಹೊಟ್ಟೆ ಊಟ ಹಾಕುವ ಜಿಪುಣೆ. ಲಕ್ಷ್ಮೀದೇವಮ್ಮನಿಗೂ ಅವಳಿಗೂ ಕಟಿಪಿಟಿ ಹತ್ತಿ ಕೈ ಕೈಯೂ ಆಯಿತು. ಗಂಡ ಹೆಂಡತಿ ಸೇರಿ ಲಕ್ಷ್ಮೀದೇವಮ್ಮನನ್ನು ಹೊರಗೆ ಹಾಕಿದರು. ಹಾಳುಬಿದ್ದ ಅವಳ ಗಂಡನ ಮನೆಗೆ ತಳ್ಳಿದರು. ಅಂದಿನಿಂದ ಒಂಟಿಯಾಗಿ ಅಲ್ಲಿ ಲಕ್ಷ್ಮೀದೇವಮ್ಮನ ವಾಸ, ವಸತಿ. ಪ್ರಾಣೇಶಾಚಾರ್ಯರ ಹತ್ತಿರ ಲಕ್ಷ್ಮೀದೇವಮ್ಮ ದೂರು ಒಯ್ದಳು. ಅವರು ಗರುಡನನ್ನು ಕರೆಸಿ ಬೋಧಿಸಿದರು. ಆಮೇಲಿಂದ ಅವ ಅವಳಿಗೆ ತಿಂಗಳಿಗೊಂದು ರೂಪಾಯಂತೆ ಕೊಡುತ್ತ ಬಂದ. ಆ ದುಡ್ಡು ಅವಳಿಗೆ ಯಾವ ಮೂಲೆಗೂ ಸಾಲದು. ಹೀಗಾಗಿ ತನ್ನ ನಗನಾಣ್ಯವನ್ನು ನುಂಗಿದವನ ಮೇಲೆ ವಿಷವಾದಳು. ಪ್ರಾಣೇಶಾಚಾರ್ಯರು ಆಗಾಗ್ಗೆ

ಅಗ್ರಹಾರದ ಬ್ರಾಹ್ಮಣರಿಗೆಲ್ಲ ಬುದ್ಧಿ ಹೇಳಿ ಅವಳಿಗಷ್ಟು ಅಕ್ಕಿ ಕೊಡಿಸುತ್ತಾರೆ. ಆದರೂ ಲಕ್ಷ್ಮೀದೇವಮ್ಮನಿಗೆ ವಯಸ್ಸಾಗುತ್ತ ಬಂದಂತೆ ಮಾನವ ದ್ವೇಷ ಸಂಜೆನಂತೆ ಏರುತ್ತಹೋಯಿತು.

ಲಕ್ಷ್ಮೀದೇವಮ್ಮ ತೇಗುತ್ತ ಗರುಡಾಚಾರ್ಯನ ಮನೆಯ ಮುಂದೆ ನಿಂತು ನಿಯತಿಯಂತೆ ತನ್ನ ಬೈಗಳನ್ನು ಪ್ರಾರಂಭಿಸಿದಳು :

"ನಿನ್ನ ಮನೆ ಹಾಳಾಗ ; ನಿನ್ನ ಕಣ್ಣು ಹೊಟ್ಟಿ ಹೋಗ ; ಊರು ಹಾಳುಮಾಡಿದವನೇ, ನಾರಣಪ್ಪನ ತಂದೆಯ ಮೇಲೆ ಮಾಟಮಾಡಿಸಿದ ಮುಂಡೇಗಂಡಾ. ಮರ್ಯಾದೆ ಇದ್ದರೆ ಎದ್ದು ಬಾರೊ. ಬಡಮುಂಡೆಯ ನಗನಾಣ್ಯವನ್ನು ನುಂಗಿದಿಯಲ್ಲ ? ದಕ್ಕುತ್ತೆಂದು ತಿಳಿದ್ಯಾ? ಸತ್ತ ಮೇಲೆ ಭೂತವಾಗಿ ನಿನ್ನ ಮನೆಮಕ್ಕಳನ್ನ ಕಾಡುವವಳು ನಾನು—ತಿಳೀತ ?"

ಉಸಿರೆಳೆದು ತೇಗಿ ಮತ್ತೆ ಪ್ರಾರಂಭಿಸಿದಳು :

"ನಿನ್ನ ಕೃತ್ರಿಮದಿಂದ ಬಂಗಾರದಂಥ ನಾರಣಪ್ಪ ಚಾಂಡಾಲನಾದ. ಸೂಳೇನ ಕಟ್ಟಿಕೊಂಡ. ನಾವು ಬ್ರಾಹ್ಮಣರು ನಾವು ಬ್ರಾಹ್ಮಣರು ಅಂತ ಹೇಳತಿರೋರೆಲ್ಲ ಈಗ ಅವನ ಹೆಣಾನ್ನ ತೆಗೀದೇ ಕೂತಿದೀರಲ್ಲೋ. ಎಲ್ಲಿಗೆ ಹೋಯಿತೋ ನಿಮ್ಮ ಬ್ರಾಹ್ಮಣ್ಯ ? ಚಾಂಡಾಲರ—ರೌರವ ನರಕಕ್ಕೆ ನೀವು ಬಿದ್ದು ಸಾಯ್ತೀರಿ, ತಿಳೀತ ? ಈ ಅಗ್ರಹಾರದಲ್ಲಿ ನಾನು ಕಂಡ ಹಾಗೆ ಒಂದು ಹೆಣವನ್ನು ರಾತ್ರಿಯೆಲ್ಲ ಸಂಸ್ಕಾರಮಾಡದೆ ಇಟ್ಟುಕೊಂಡದ್ದು ಉಂಟ ? ರಾಮ ರಾಮಾ ! ಕಾಲ ಕೆಟ್ಟಿತಪ್ಪ ಕೆಟ್ಟಿತು. ಬ್ರಾಹ್ಮಣ್ಯ ನಾಶವಾಯಿತು. ತಲೆ ಬೋಳಿಸಿಕೊಂಡು ಮುಸಲ್ಮಾನರಾಗಿರಿ. ನಿಮಗ್ಯಾಕೆ ಬ್ರಾಹ್ಮಣ್ಯ ?"

ಎಂದು ಕೋಲನ್ನು ನೆಲಕ್ಕೆ ಕುಟ್ಟಿ ಮತ್ತೆ ಉಸಿರೆಳೆದು 'ಹೇಯ್' ಎಂದು ತೇಗಿದಳು.

* * *

ಅಯ್ಯಯ್ಯೋ ಎಂದು ಶ್ರೀಪತಿ ನಾರಣಪ್ಪನ ಮನೆ ಜಗುಲಿಯಿಂದ ಬಾಗಿಲನ್ನು ಹಾಕಿಕೊಳ್ಳಲೂ ಮರೆತು, ಜಿಗಿದು ಬೀದಿಯಲ್ಲಿ ಓಡಿದ.

ನೋಡಿರೋ ನೋಡಿರೋ ನೋಡಿರೋ ನಾರಣಪ್ಪನ ಪ್ರೇತ, ಪ್ರೇತ ಎಂದು ಅರೆಮರುಳು ಲಕ್ಷ್ಮೀದೇವಮ್ಮ ಪ್ರತಿಮನೆಯ ಕದ ತಟ್ಟಿ ಸಾರುತ್ತ ಕೋಲೂರಿಕೊಂಡು ಓಡಿದಳು. ಜೀವವನ್ನು ಕೈಯಲ್ಲಿ ಹಿಡಿದು ಹೊಳೆ ಹಾಯ್ದು ಶ್ರೀಪತಿ ಪಾರಿಜಾತಪುರದ ನಾಗರಾಜನ ಮನೆಗೆ ಓಡಿದ.

* * *

ಓಡಿಹೋದವ ಶ್ರೀಪತಿಯೆಂದು ತಿಳಿದವಳೆಂದರೆ ಪ್ರಾಣೇಶಾಚಾರ್ಯರ ಜಗುಲಿಯ ಮೇಲೆ ಮಲಗಿದ್ದ ಚಂದ್ರಿ. ಹಸಿವಿನಿಂದ ಅವಳಿಗೆ ನಿದ್ದೆ ಹತ್ತಿರಲಿಲ್ಲ. ಅವಳು ಜನ್ಮೇಪಿ ಉಪವಾಸ ಮಾಡಿದವಳಲ್ಲ; ಒಂಟಿಯಾಗಿ ಜಗುಲಿ ಮೇಲೆ ಮಲಗಿದವಳಲ್ಲ; ಕುಂದಾಪುರದ ಮನೆ ಬಿಟ್ಟು ನಾರಣಪ್ಪನನ್ನು ಕೂಡಿದಮೇಲೆ, ಸದಾ ಊದುಬತ್ತಿಯಿಂದ ಗಮಗಮಿಸುವ ಕೋಣೆಯಲ್ಲಿ ಸುಪ್ಪತ್ತಿಗೆ ಮೇಲೆ ಸುಖಿಸಿದವಳು. ಈಗ ಹಸಿವು ತಾಳಲಾರದೆ ಎದ್ದು ಹಿತ್ತಲಿನ ದಾರಿಯಿಂದ ತನ್ನ ತೋಟಕ್ಕೆ ಹೋದಳು. ಹಣ್ಣಾಗಲೆಂದು ಅವಿತಿಟ್ಟಿದ್ದ ರಸಬಾಳೆಗೊನೆಯನ್ನು ತೆಗೆದು ಹೊಟ್ಟೆ ತುಂಬುವಷ್ಟು ತಿಂದಳು. ನದಿಗೆ ಹೋಗಿ ನೀರು ಕುಡಿದಳು. ತನ್ನ ಮನೆಗೆ ಹೋಗಲು ಭಯವಾಯಿತು—ಅವಳು ಹುಟ್ಟಿದಮೇಲೆ ಶವದ ಮುಖ ನೋಡಿದವಳಲ್ಲ. ಒಂದು ವೇಳೆ ನಾರಣಪ್ಪನ ಶವದ ಸಂಸ್ಕಾರವಾಗಿಬಿಟ್ಟಿದ್ದರೆ ಅವನ ಮೇಲಿದ್ದ ಎಲ್ಲ ಪ್ರೀತಿಯೂ ಉಕ್ಕೇರಿಬಂದು ಮನಸಾರೆ ಅತ್ತುಬಿಡುತ್ತಿದ್ದಳು. ಈಗ ಭೀತಿಯೊಂದೇ ಅವಳ ಹೃದಯದಲ್ಲಿ. ಭೀತಿ ಮತ್ತು ಕಳವಳ. ನಾರಣಪ್ಪನಿಗೆ ಉಚಿತರೀತಿಯಲ್ಲಿ ಶವಸಂಸ್ಕಾರವಾಗದಿದ್ದರೆ ಅವನು ಪ್ರೇತವಾಗಿಬಿಡಬಹುದು. ಅಲ್ಲದೆ ಅವನ ಕೂಡ ಹತ್ತು ವರ್ಷದ ಸುಖವುಂಡು ಈಗ ಅವನ ಶವಕ್ಕೆ ತಕ್ಕ ಸಂಸ್ಕಾರ ಮಾಡಿಸದಿದ್ದರೆ....ಮನಸ್ಸು ಒಪ್ಪುವುದಿಲ್ಲ. ನಾರಣಪ್ಪ ಬ್ರಾಹ್ಮಣ್ಯ ಬಿಟ್ಟ–ನಿಜ. ಮುಸಲ್ಮಾನರ ಜೊತೆ ಊಟಮಾಡಿದ. ತಾನೂ ಮಾಡಿದೆ. ಆದರೆ ತನಗೆ ಅಡ್ಡಿಯಿಲ್ಲ, ದೋಷ ತಟ್ಟುವುದಿಲ್ಲ. ಸೂಳೆಯಾಗಿ ಹುಟ್ಟಿದ ತಾನು ಈ ನಿಯಮಕ್ಕೆಲ್ಲ ವಿನಾಯಿತಿ; ವೈಧವ್ಯವಿಲ್ಲದ ನಿತ್ಯಮುತ್ತೈದೆ. ಹರಿಯುವ ಹೊಳೆಗೆ ದೋಷವುಂಟೆ? ಬಾಯಾರಿಕೆಗೂ ಸೈ, ಮೈಯ ಮಲ ತೊಳೆಯುಲಿಕ್ಕೂ ಸೈ, ದೇವರ ತಲೆಯ ಅಭಿಷೇಕಕ್ಕೂ ಸೈ, ಎಲ್ಲದಕ್ಕೂ 'ಹೂ'; 'ಊಹೂ' ಎಂಬೋದೇ ಇಲ್ಲ, ನನ್ನ ಹಾಗೆ. ಬತ್ತುವುದಿಲ್ಲ; ಬಾಡುವುದಿಲ್ಲ. ಎರಡು ಹೆತ್ತರೆ ಸಾಕು; ಬಚ್ಚುಗಲ್ಲದ ಗುಳಿಕಣ್ಣಿನ ಬ್ರಾಹ್ಮಣ ಹೆಂಗಸರಂತೆ ತನ್ನ ಮೊಲೆ ಜೋತುಬಿದ್ದಿಲ್ಲ. ತಾನು ಬತ್ತದ, ಬಾಡದ, ಬಳಲದ, ಜಳಜಳ ತುಂಗೆ. ಹತ್ತು ವರ್ಷ ಮಗುವಿನಂತೆ ಉಂಡ. ಜೇನಿನ ಗೂಡಿಗೆಂದು ಬರುವ ಆಸೆಬುರುಕ ಕರಡಿಯಂತೆ ಹರಿದು ಉಂಡ. ಕೆಲವೊಮ್ಮೆ ರೋಷದ ಪಟ್ಟೆಹುಲಿಯ ಹಾಗೆ ಕುಣಿದ. ಈಗ ಅವನಿಗೊಂದು ಸಂಸ್ಕಾರವಾಗಿಬಿಡಲಿ ಸಾಕು, ಕುಂದಾಪುರಕ್ಕೆ ಹೊರಟುಹೋಗುತ್ತೇನೆ. ಅಲ್ಲಿ ಕೂತು ಮನಸಾರೆ ಅತ್ತುಬಿಡುತ್ತೇನೆ. ಈ ಬ್ರಾಹ್ಮಣರ ಕೈಯಿಂದಲೇ ಮಾಡಿಸಬೇಕು.

ನಾರಣಪ್ಪ ಬ್ರಾಹ್ಮಣ್ಯ ಬಿಟ್ಟರೂ ಬ್ರಾಹ್ಮಣ್ಯ ಅವನನ್ನು ಬಿಟ್ಟಿತೆ? ಕಡು ಕೋಪಿ, ಹಟವಾದಿ, ಹುಚ್ಚ—ಬಹಿಷ್ಕಾರ ಹಾಕಿಸಿದರೆ ಮುಸಲ್ಮಾನನಾಗಿ ಬಿಡುತ್ತೇನೆಂದು ಲಾಗಹಾಕಿ ಕುಣಿದವ. ಅಂತರ್ಯದಲ್ಲಿ ಏನಿತ್ತೋ—ನಾನು ತಿಳಿಯೆ. ಎಷ್ಟೇ ಕುಣಿಯಲಿ, ತನ್ನ ಜೊತೆ ಪ್ರಾಣೇಶಾಚಾರ್ಯರೊಬ್ಬರನ್ನು ಅವನು ನೀಚ ಮಾತಲ್ಲಿ ಹಳಿದಿದ್ದಿಲ್ಲ. ದುಡುಕಿ ಅವತ್ತು ಮಾತಾಡಿದ್ದು ನಿಜ. ಆದರೆ ಒಳಗೊಳಗೇ ನಡುಗಿದ್ದ. ಈಗ ಜಗಳವಾಡಿ ಆಮೇಲೆ ಮರೆತುಬಿಡುವ, ಅಸೂಯೆಯೊಂದೇ ಗಟ್ಟಿಯಾದ ಭಾವವಾದ ತನ್ನಂತಹ ಹೆಂಗಸಿಗೆ ಈ ದ್ವೇಷದ ಆಳ ಯಾವ ಗರುಡಪಾತಾಳಿಗೂ ಸಿಗುವಂಥದಲ್ಲ. ಅವನನ್ನ ಬಂದು ಕೂಡಿದ ಮೊದಮೊದಲು ಬೇಡಿಕೊಂಡೆ: ನನ್ನ ಕೈಯಡಿಗೆ ಊಟ ಮಾಡಬೇಡಿ, ಮಾಂಸ ತಿನ್ನಬೇಡಿ—ನಾ ಬೇಕಾದರೂ ಬಿಟ್ಟುಬಿಡುವೆ; ಹಾಗೆ ಮನಸ್ಸಾದರೆ ಶೆಟ್ಟರ ಮನೆಗೆ ಹೋಗಿ ಮೀನು ತಿಂದು ಬರುವೆ; ಅಗ್ರಹಾರದಲ್ಲಿ ಬೇಡ. ಕೇಳುವ ಮನುಷ್ಯನೋ ಅವ? ಹಟಾಂದರೆ ಹಟ. ಭ್ರಾಂತಿ ಹಿಡಿದ ಅವನ ಹೆಂಡತಿ ಎಂದೂ ಅವನ ಹಟವನ್ನು ತಾಳಿ ತನ್ನ ಹಾಗೆ ಬಾಳುವ ಸಾಹಸವಿದ್ದವಳಲ್ಲ. ತೌರಿಗೆ ಹೋಗಿ, ತನಗೆ ಶಾಪ ಹಾಕಿ ಸತ್ತಳು. ಇನ್ನು ಯಾರಿಗೆ ಬೇಕು ಈ ಗೊಂದಲ? ಸಂಸ್ಕಾರವಾದರೆ ಸಾಕು, ನಮಸ್ಕಾರ ಹಾಕಿ ಹೋಗಿಬಿಡುವೆ.

ವಿಚಿತ್ರವೆಂದರೆ, ತನ್ನನ್ನೀಗ ಕೊರೆಯುತ್ತಿರೋ ವಿಷಯವೆಂದರೆ, ಒಂದು ದಿನ ಸಹಿತ ಒಂದು ದೇವರಿಗೂ ಕೈಮುಗಿಯದ ನಾರಣಪ್ಪ ಜ್ವರ ನೆತ್ತಿಗೆ ಏರಿದ್ದೇ ಹೇಗೆ ಹಲುಬಲು ಪ್ರಾರಂಭಿಸಿದ! ಜ್ಞಾನ ತಪ್ಪುವತನಕ 'ಅಮ್ಮ ಭಗವಂತ ರಾಮಚಂದ್ರ ನಾರಾಯಣ' ಎನ್ನುತ್ತಿದ್ದ. 'ರಾಮಾ ರಾಮಾ' ಎಂದು ಕಿರುಚಿದ. ಪಾಪಿಯ ಬಾಯಲ್ಲಿ, ಚಾಂಡಾಲನ ಬಾಯಲ್ಲಿ ಬರುವ ಮಾತಲ್ಲ ಅದು. ಅವನ ಒಳಗೆ ಗುಪ್ತವಾಗಿ ಏನು ಇತ್ತೋ ಏನು ಕತೆಯೋ ನನ್ನ ಆಳಕ್ಕೆ ತಿಳಿಯಲಿಲ್ಲ. ಈಗ ಶಾಸ್ತ್ರೋಕ್ತ ವಿಧಿಯಾಗದಿದ್ದಲ್ಲಿ ಖಂಡಿತ ಪ್ರೇತವಾಗುತ್ತಾನೆ. ಅವನ ಉಪ್ಪುಂಡ ನಾನು....

ಎಲ್ಲ ಪ್ರಾಣೇಶಾಚಾರ್ಯರ ಮೇಲೆ ನಿಂತಿದೆ. ಎಂತಹ ಸೌಮ್ಯ, ಕರುಣೆ. ಮೇಳದವರ ಆಟದಲ್ಲಿ ದ್ರೌಪದಿ ಕರೆದಾಗ ನಗುನಗುತ್ತ ಬರುವ ಶ್ರೀಕೃಷ್ಣನಂತೆ ಏನು ರೂಪ, ಏನು ನಿಲುವು, ಏನು ತೇಜ. ಪಾಪ ಅವರಿಗೆ ಸ್ತ್ರೀಸುಖವೇನೆಂದು ಗೊತ್ತೇ ಇರಲಿಕ್ಕಿಲ್ಲ. ಒಣಗಿದ ಕಟ್ಟಿಗೆ ಹಾಗೆ ಬಿದ್ದಿರುತ್ತಾರೆ ಅವರ ಹೆಂಡತಿ—ಪುಣ್ಯಾತಗಿತ್ತಿ. ಆದರೂ ಏನು ತಾಳ್ಮೆ, ಏನು ವರ್ಚಸ್ಸು,

—ಒಂದು ದಿನ ತನ್ನನ್ನ ಕಣ್ಣೆತ್ತಿ ನೋಡಿದವರಲ್ಲ. ಅಮ್ಮ ಹೇಳುತ್ತಿದ್ದಳಲ್ಲ —ಗರ್ಭದಾನಾನ ಸೂಳೆಯರು ಎಂಥವರಿಂದ ಮಾಡಿಸಿಕೋಬೇಕು ಅಂತ —ಅಂತಹ ರೂಪ ಗುಣ ವರ್ಚಸ್ಸು ಆಚಾರ್ಯರದ್ದು. ಪಡೆದು ಬಂದಿರ ಬೇಕು ಅಷ್ಟೆ, ಅಂಥಾದ್ದು ಒದಗಿಬರೋಕ್ಕೆ....

ರಸಬಾಳೆಯ ಹಣ್ಣನ್ನು ಹೊಟ್ಟೆತುಂಬ ತಿಂದಿದ್ದರಿಂದ ಚಂದ್ರಿಗೆ ಕಣ್ಣು ಬಾಡಿ, ನಿದ್ದೆ ಹತ್ತಿರ ಹತ್ತಿರ ಸುಳಿದು, ಹಾರಿ, ಸುಳಿದು, ಹಾರಿ, ಆಟವಾಡ ತೊಡಗಿತು. ಪ್ರಾಣೇಶಾಚಾರ್ಯರು ಇನ್ನೂ ಎಚ್ಚರವಾಗಿದ್ದು ನಡುಮನೆಯಲ್ಲಿ ಓಡಾಡುವುದು, ಮಂತ್ರಗಳನ್ನು ಗಟ್ಟಿಯಾಗಿ ಓದುವುದು ನಡುನಡುವೆ ಕಿವಿಗೆ ಬಿದ್ದು—ಅವರು ಎಚ್ಚರವಾಗಿದ್ದಾಗ ತಾನೇನು ನಿದ್ದೆಮಾಡುವು ದೆಂದು—ಸೆಳೆಯುವ ನಿದ್ದೆಯನ್ನು ದೂಡುತ್ತ, ಚಿಂತಿಸುತ್ತ, ಚಾವಡಿಯ ಮೇಲೆ ತಲೆಗೆ ಕೈದಿಂಬುಮಾಡಿ, ನಾಚಿಕೆಯಲ್ಲಿ ತೊಡೆಗಳನ್ನು ಹೊಟ್ಟೆಗೆ ಮಡಿಸಿ ಮುದುರಿ ಸೆರಗೆಳೆದು ಮಲಗಿದಳು.

* * *

ಎಲ್ಲ ತಾಳೆಗರಿ-ಗ್ರಂಥಗಳನ್ನೂ ಆಮೂಲಾಗ್ರ ಶೋಧಿಸಿದ್ದಾಯಿತು : ತನ್ನ ಅಂತರಂಗಕ್ಕೆ ಒಪ್ಪಿಗೆಯಾಗುವಂತಹ ಉತ್ತರ ಮಾತ್ರ ಇಲ್ಲ. ಧರ್ಮ ಶಾಸ್ತ್ರದಲ್ಲಿ ಈ ಸಂದಿಗ್ಧಕ್ಕೆ ತನಗೆ ಸಂಪೂರ್ಣ ಸಮರ್ಪಕವೆನ್ನಿಸುವಂತಹ ಉತ್ತರವಿಲ್ಲವೆಂದು ಒಪ್ಪಿಕೊಳ್ಳಲು ಪ್ರಾಣೇಶಾಚಾರ್ಯರಿಗೆ ಭಯ. ಮಠದ ಉಳಿದ ಪಂಡಿತರು ನಿಮಗೆ ತಿಳಿದಿರೋದು ಇಷ್ಟೇಯೊ ಎಂದು ಮೂದಲಿಸಿದರೆ ಎನ್ನುವ ಅಂಜಿಕೆಯೂ ಅವರನ್ನು ಸುಳಿಯದೇ ಇರಲಿಲ್ಲ. ಸುಧಾ ಪಾಠವಾದ ನಿನ್ನ ಜ್ಞಾನ ಇಷ್ಟೆಯೋ ಎಂದರೆ ಏನು ಹೇಳಬೇಕು. ಏನು ಹೋದರೂ ಮಾನ ಹೋಗಬಾರದು, ಹೋದ ಮಾನ ಹಿಂದಕ್ಕೆ ಬರದು—ಎಂದು ಯೋಚಿ ಸುತ್ತ ಕೂತು ಮತ್ತೆ ತನ್ನ ಯೋಚನೆಗೆ ನಾಚಿದರು. ಇಂತಹ ಪರಿಸ್ಥಿತಿ ಯಲ್ಲೂ ನನ್ನ ಖ್ಯಾತಿಯ ಬಗ್ಗೆಯೇ ನಾನು ಯೋಚಿಸುತ್ತಿದ್ದೇನಲ್ಲ, ನನ್ನ ಅಹಂಕಾರಕ್ಕೆಷ್ಟು ಬೆಂಕಿಯಿಟ್ಟಿತು ಎಂದು ಭಕ್ತಿಯಲ್ಲಿ ಮತ್ತೆ ತಾಳೆಗರಿ-ಗ್ರಂಥಗಳನ್ನು ಬಿಚ್ಚಿ, ಕಣ್ಣು ಮುಚ್ಚಿ ಧ್ಯಾನಿಸಿ ಒಂದು ಓಲೆಯನ್ನು ಭಕ್ತಿಯಿಂದ ಎತ್ತಿ ಓದಿದರು. ಇಲ್ಲ. ಇನ್ನೊಮ್ಮೆ ಕಣ್ಣು ಮುಚ್ಚಿ ಇನ್ನೊಂದು ಓಲೆಯನ್ನು ಹಾಗೆ ಎತ್ತಿದರು. ಇಲ್ಲ. ಅಡಿಗೆಮನೆಯಲ್ಲಿ ಮಲಗಿದ್ದ

ಹೆಂಡತಿ ನರಳಿದಳು. ಎದ್ದು ಹೋಗಿ ಆಕೆಯನ್ನು ಎಬ್ಬಿಸಿ ವೈಗಾನಿಸಿಕೊಂಡು ನಿಂಬೆಹಣ್ಣಿನ ರಸದ ಎರಡು ಗುಟುಕನ್ನು ಕುಡಿಸಿದರು. "ನಾರಣಪ್ಪನ ಬದಲು ನಾನೇ ಯಾಕೆ ಕಣ್ಣು ಮುಚ್ಚಬಾರದಿತ್ತೊ! ನನಗೇ ಯಾಕೆ ಸಾವು ಬರಬಾರದೊ! ಮುತ್ತೈದೆಯಾಗಿ...." ಎಂದು ಕೊರಗಿದ ಹೆಂಡತಿಗೆ 'ಒಳಿತು' ಎನ್ನು ಎಂದು ಸಮಾಧಾನಿಸಿ ಮತ್ತೆ ನಡುಮನೆಗೆ ಬಂದು ಲಾಟೀನಿನ ಬೆಳಕಿನಲ್ಲಿ ಆರ್ತರಾಗಿ ಕುಳಿತರು. ಸನಾತನ ಧರ್ಮದಲ್ಲಿ ಉತ್ತರವಿಲ್ಲವೆಂದರೆ ನಾರಣಪ್ಪನೇ ಗೆದ್ದಂತೆ, ತಾವು ಸೋತಹಾಗೆ. ಮೂಲದಲ್ಲಿರುವ ಪ್ರಶ್ನೆ ನಾರಣಪ್ಪ ಬದುಕಿದ್ದಾಗ ಅವನಿಗೆ ತಾವು ಬಹಿಷ್ಕಾರ ಹಾಕಿಸಲಿಲ್ಲ ಎಂಬುವುದು. ಅದಕ್ಕೆ ಕಾರಣ ಅವನು ಹಾಕಿದ ಬೆದರಿಕೆ. ಆ ಬೆದರಿಕೆಗೆ ಜಗ್ಗಿದಾಗಲೆ ಧರ್ಮಶಾಸ್ತ್ರವನ್ನು ಧಿಕ್ಕರಿಸಿದಂತಾಗಿಬಿಟ್ಟಿತು. ಬ್ರಾಹ್ಮಣರ ತಪಃಶಕ್ತಿ ಜಗತ್ತನ್ನು ಆಳುತ್ತಿದ್ದ ಕಾಲದಲ್ಲಿ ಅಂತಹ ಬೆದರಿಕೆಗೆ ಜಗ್ಗಬೇಕಾಗಿರಲಿಲ್ಲ. ಕಾಲ ಕೆಡುತ್ತ ಬಂದಿದ್ದರಿಂದ ತಾನೇ ಇಂತಹ ಸಂದಿಗ್ಧಗಳು ಪ್ರಾಪ್ತವಾಗಿರೋದು....

ಹಾಗೆ ನೋಡಿದರೆ ತಾನು ಮುಸಲ್ಮಾನನಾಗುತ್ತೇನೆಂದು, ಮುಸಲ್ಮಾನನಾಗಿ ಅಗ್ರಹಾರದಲ್ಲಿ ಉಳಿಯುತ್ತೇನೆಂದು ಅವನು ಹಾಕಿದ ಬೆದರಿಕೆಯೊಂದೇ ಕಾರಣವೇ ಬಹಿಷ್ಕಾರ ಹಾಕಿಸದೇ ಇದ್ದುದಕ್ಕೆ? ಇಲ್ಲ. ಮರುಕವೂ ಅದರಲ್ಲಿತ್ತು. ತನ್ನ ಹೃದಯದಲ್ಲಿರುವ ಅಪಾರವಾದ ಕರುಣ....ಎಂಬ ಯೋಚನೆ ಹೊಳೆಯುತ್ತಿದ್ದಂತೆ ಪ್ರಾಣೇಶಾಚಾರ್ಯರು 'ಛೆ, ಛೆ' ಇದು ಆತ್ಮವಂಚನೆಯೆಂದು ತನ್ನನ್ನು ಜರಿದುಕೊಂಡರು. ಅದು ನಿಷ್ಕಲ್ಮಷ ಮರುಕವಲ್ಲ. ಅದರ ಹಿಂದೆ ಭಯಂಕರವಾದ ಹಟವೂ ಇತ್ತು. ನಾರಣಪ್ಪನ ಹಟಕ್ಕೇನೂ ಬಿಟ್ಟುಕೊಡುವಂತಹ ಹಟವಲ್ಲ ತನ್ನದು : ಅವನನ್ನು ದಾರಿಗೆ ತಂದೇ ತರುತ್ತೇನೆ—ನನ್ನ ಪುಣ್ಯಶಕ್ತಿಯಿಂದ, ತಪಃಶಕ್ತಿಯಿಂದ, ವಾರದಲ್ಲಿ ಮಾಡುವ ಎರಡು ದಿನಗಳ ಒಪ್ಪತ್ತುಗಳಿಂದ, ಅವನನ್ನು ವಿವೇಕಕ್ಕೆಳೆದೇ ಎಳೆಯುತ್ತೇನೆ ಎನ್ನುವ ನನ್ನ ಅದಮ್ಯ ಹಟ.

ಈ ಹಟ ತಾಳಿದ ರೂಪ: ನನ್ನ ಪ್ರೇಮದಿಂದ, ಮರುಕದಿಂದ, ತಪಃಶಕ್ತಿಯಿಂದ ನಿನ್ನನ್ನು ದಾರಿಗೆ ಹಚ್ಚುತ್ತೇನೆ ಎನ್ನುವ ಸಂಕಲ್ಪ. ಹಟವೆಷ್ಟು ಪಾಲು, ಕರುಳಿನ ಮರುಕವೆಷ್ಟು ಪಾಲು ಈ ಸಂಕಲ್ಪದಲ್ಲಿ? ತನ್ನ ಸ್ವಭಾವದ ಮೂಲಧರ್ಮ ಮರುಕವೆಂದು ಅನ್ನಿಸುತ್ತದೆ. ಈ ದೇಹ ಜರಾಜೀರ್ಣವಾದ ಬಳಿಕ ಕಾಮ ಇದನ್ನು ಬಿಟ್ಟುಹೋಗುತ್ತದೆ. ಆದರೆ ಮರುಕ ಬಿಡುವುದಿಲ್ಲ.

ಆದುದರಿಂದ ಮರುಕ ಮಾನವನಿಗೆ ಕಾಮಕ್ಕಿಂತಲೂ ಪ್ರಜ್ವಲವಾದ ಬೇರು ಬಿಟ್ಟ ಪ್ರವೃತ್ತಿ. ಮರುಕ ಹೀಗೆ ಆಳವಾಗಿ ನನ್ನಲ್ಲಿಲ್ಲದಿದ್ದರೆ ಮದುವೆ ಯಾದಾಗ್ಗಿನಿಂದ ಹಾಸಿಗೆಹಿಡಿದ ಹೆಂಡತಿಯ ಬಗ್ಗೆ ಪಿರಿಪಿರಿ ಎನ್ನಿಸಿ ಪರನಾರೀ ಮೋಹಕ್ಕೆ ಬಲಿಯಾಗದೇ ಇರುತ್ತಿದ್ದೆನೆ? ಇಲ್ಲ. ಮರುಕವೇ ನನ್ನ ಮಾನವ್ಯದ ಬ್ರಾಹ್ಮಣ್ಯದ ರಕ್ಷಣೆ ಮಾಡಿದೆ.

ಮರುಕ–ಧರ್ಮ–ಮಾನವ್ಯ–ಬ್ರಾಹ್ಮಣ್ಯ ಎಲ್ಲ ಕಗ್ಗಂಟಾಗಿ ಕಾಡುತ್ತದೆ. ಮೂಲದಲ್ಲಿರುವ ಪ್ರಶ್ನೆ ನಾರಣಪ್ಪ ಯಾಕೆ ಹುಳಿಯಾದ, ವಿಷವಾದ? ಪೂರ್ವಜನ್ಮದ ಪುಣ್ಯವಿಲ್ಲದೆ ಬ್ರಾಹ್ಮಣ್ಯ ಪ್ರಾಪ್ತವಾಗುವುದಿಲ್ಲವೆನ್ನುತ್ತದೆ ಶಾಸ್ತ್ರ. ಹಾಗಿದ್ದರೆ ಯಾಕೆ ನಾರಣಪ್ಪ ಕೈಯಾರೆ ತನ್ನ ಬ್ರಾಹ್ಮಣ್ಯವನ್ನ ಚರಂಡಿಗೆ ಎಸೆದ? ಇದು ಆಶ್ಚರ್ಯ. ಕೊನೆಗೂ ನಮ್ಮ ಸ್ವಭಾವಕ್ಕೆ ನಾವು ಶರಣು. ಋಗ್ವೇದದ ಕತೆಯೊಂದು ಪ್ರಾಣೇಶಾಚಾರ್ಯರಿಗೆ ನೆನಪಾಗು ತ್ತದೆ :

ಆ ಬ್ರಾಹ್ಮಣನಿಗೆ ಜೂಜಿನ ಮೋಹ. ತನ್ನ ಸ್ವಭಾವವನ್ನವನು ಏನಕೇನ ಮೀರಲಾರ. ಒಮ್ಮೆ ಒಂದು ಯಜ್ಞಶಾಲೆಯೊಳಕ್ಕೆ ಕುಲೀನ ಬ್ರಾಹ್ಮಣರು ಯಾರೂ ಆವನನ್ನು ಬಿಡಲಿಲ್ಲ. ಛೀ ಛೀ ಎಂದು ಅಟ್ಟಿಬಿಟ್ಟರು—ನಾಯಿ ಯನ್ನು ಹೊರಕ್ಕೆ ಅಟ್ಟುವ ಹಾಗೆ. ಅವನು ದೇವದೇವತೆಗಳನ್ನು ಕರೆದು ಅತ್ತ : ದೇವರೇ, ಯಾಕೆ ನನ್ನನ್ನು ನೀನು ಜೂಜುಗಾರನನ್ನಾಗಿ ಮಾಡಿದಿ? ಯಾಕೆ ಇಂತಹ ಮೋಹವನ್ನು ನನಗೆ ಕೊಟ್ಟೆ? ಅಷ್ಟದಿಕ್ಪಾಲಕರೇ ಉತ್ತರ ಹೇಳಿ. ಇಂದ್ರ ಯಮ ವರುಣಾದಿಗಳೇ ಬನ್ನಿ, ಉತ್ತರ ಹೇಳಿ.

ಇತ್ತ ಯಜ್ಞಶಾಲೆಯಲ್ಲಿ ಹವಿಸ್ಸನ್ನು ಹಿಡಿದು ದ್ವಿಜರು ಅಗ್ನಿ, ಇಂದ್ರ, ಯಮ, ವರುಣಾದಿಗಳನ್ನು ಕರೆದರು : ಬನ್ನಿ, ನಮ್ಮ ಹವಿಸ್ಸನ್ನು ಸ್ವೀಕರಿಸಿ.

ಆದರೆ ದೇವತೆಗಳು ಹೋದದ್ದು ಆ ಜೂಜುಗಾರ ಕರೆದಲ್ಲಿಗೆ. ಆಗ ತಮ್ಮ ಬ್ರಾಹ್ಮಣ್ಯದ ಹಮ್ಮು ತೊರೆದು ದ್ವಿಜರೆಲ್ಲರೂ ಅಲ್ಲಿಗೇ ಧಾವಿಸ ಬೇಕಾಯಿತು—ಅಧಮನ ಬಳಿಗೆ. ಧರ್ಮದ ಅಂತರ್ಯ ತಿಳಿಯೋದು ಕಠಿಣ. ಮತ್ತೆ ಆ ಮಹಾಪಾಪಿ ಚಾಂಡಾಲ, ಸಾಯುವಾಗ 'ನಾರಾಯಣಾ' ಎಂದು ಪರಮಪದ ಮುಕ್ತಿಯನ್ನು ಗಿಟ್ಟಿಸಿಕೊಂಡ. ಏಳು ಜನ್ಮ ಭಕ್ತರಾಗಿ ಹುಟ್ಟುತ್ತೀರೋ, ಮೂರು ಜನ್ಮ ವೈರಿಗಳಾಗಿ ನನ್ನನ್ನು ಬಂದು ಸೇರುತ್ತೀರೋ ಎಂದರೆ ಜಯ–ವಿಜಯರು ವೈರಿಗಳಾಗಿ ಬೇಗ ಪರಮಪದ ಸೇರಲು ಆಶಿಸಿದರಂತೆ. ಪೂಜೆ ಪುನಸ್ಕಾರಾದಿ ಕರ್ಮಗಳಲ್ಲಿ ಗಂಧದ ಹಾಗೆ ತೇಯುವ

ನಮ್ಮಂತಹವರ ಬಾಳಿಗೆ ಮುಕ್ತಿ ದೊರೆಯಲು ಜನ್ಮದ ಮೇಲೆ ಜನ್ಮ. ಧರ್ಮದ ಅಂತರಾರ್ಥ ತಿಳಿಯುವುದಿಲ್ಲ. ನಾರಣಪ್ಪನ ಅಂತಃಪ್ರಾಣ ಯಾವ ಸಾಧನೆಯಲ್ಲಿ ತೊಡಗಿತ್ತೋ! ಕುಣಿದು ಕುಪ್ಪಳಿಸಿ 'ಲಕ್' ಎಂದು ಪ್ರಾಣ ಬಿಟ್ಟ.

ಈ ಸಂದಿಗ್ಧದಲ್ಲಿ ಆಪದ್ಧರ್ಮವೇನೆಂದು ತಿಳಿಯುವ ಶಕ್ತಿಯನ್ನು ದೇವರು ನನಗೆ ಕೊಟ್ಟರೆ....ಪ್ರಾಣೇಶಾಚಾರ್ಯರಿಗೆ ಥಟ್ಟನೆ ಅವ್ಯಕ್ತದಿಂದ ಒಂದು ಸನ್ನೆ ಕಾಣಿಸಿಕೊಂಡ ಹಾಗೆ ಒಂದು ಯೋಚನೆ ಹೊಳೆದು ರೋಮಾಂಚಿತ ರಾದರು. ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ಮಾಡಿ ಹೋಗಿ ಮಾರುತಿಯನ್ನು ಕೇಳುವುದು : ವಾಯುಪುತ್ರ, ಏನು ಸರಿ ಇಂತಹ ಸಂದಿಗ್ಧದಲ್ಲಿ ? ಗೆಲುವಾಗಿ ಒಳಮನೆಯಲ್ಲಿ ಅತ್ತಿಂದಿತ್ತ ತಿರುಗಿದರು. ಥೆ, ಪ್ರಾಯದ ಹೆಣ್ಣುಮಗಳೊಬ್ಬಳು ಚಾಪೆ ಇಲ್ಲದೆ ಚಾವಡಿಯಲ್ಲಿ ಮಲಗಿದಾಳಲ್ಲ ಎಂದು ಮರುಕವಾಗಿ ಒಂದು ಹೊದಿಕೆ, ಚಾಪೆ, ದಿಂಬನ್ನು ತಂದು ಹೊರಗೆ ಬಂದು 'ಚಂದ್ರೀ' ಎಂದರು. ತನ್ನ ತಾಯಿ ಹೇಳಿದ್ದ ಮಾತನ್ನು ನೆನೆಯುತ್ತಿದ್ದ ಚಂದ್ರಿ ಧಿಗ್ಗನೆ ಎದ್ದು ಕೂತು, ನಾಚಿಕೆಯಿಂದ ತಲೆಯ ಮೇಲೆ ಸೆರಗೆಳೆದುಕೊಂಡಳು. ಕತ್ತಲೆಯಲ್ಲಿ ಹೀಗೆ ಹೆಣ್ಣೊಬ್ಬಳ ಎದುರು ನಿಂತಿರುವುದು ಅಸಮಂಜಸವೆನ್ನಿಸಿ ಪ್ರಾಣೇಶಾಚಾರ್ಯರು 'ಈ ಚಾಪೆ ದಿಂಬುಗಳನ್ನು ತಗೊ' ಎಂದು ತಿರುಗಿದರು. ಚಂದ್ರಿಗೆ ಮಾತೇ ಬರಲಿಲ್ಲ. ಹೊಸ್ತಿಲು ದಾಟುತ್ತಿದ್ದ ಪ್ರಾಣೇಶಾಚಾರ್ಯರು ನಿಂತು, ಕೈಯಲ್ಲಿ ಹಿಡಿದಿದ್ದ ಲಾಟೀನಿನ ಬೆಳಕಿನಲ್ಲಿ ಮೊಗ್ಗಿನ ಹಾಗೆ ಸಂಕೋಚದಿಂದ ಕೂತ ಹೆಣ್ಣನ್ನು ಕಂಡು, ಮಾರುತಿಯ ಅಪ್ಪಣೆ ಪಡೆಯುವ ತಮ್ಮ ನಿರ್ಧಾರವನ್ನು ಗೆಲುವಿನಿಂದ ತಿಳಿಸಿ ನಡುಮನೆಗೆ ಹೋದರು. ಒಳಗೆ ಬಂದಾಕ್ಷಣ ಥಟ್ಟನೆ ಇನ್ನೊಂದು ಯೋಚನೆ ಅವರಿಗೆ ಹೊಳೆಯಿತು. ಚಂದ್ರಿ ಬಿಚ್ಚಿಕೊಟ್ಟಿದ್ದ ಆಭರಣಗಳ ಗಂಟನ್ನು ಮತ್ತೆ ಹೊರಗೆ ತಂದು 'ಚಂದ್ರೀ' ಎಂದರು. ಚಂದ್ರಿ ಮತ್ತೆ ಚಂಗನೆ ತವಕದಿಂದ ಎದ್ದು ಕೂತಳು.

"ಇಕೊ ಚಂದ್ರಿ. ನಿನ್ನ ಔದಾರ್ಯದಿಂದ ಶವಸಂಸ್ಕಾರದ ಪ್ರಶ್ನೆ ಇನ್ನಷ್ಟು ಕಠಿಣವಾಗಿಬಿಟ್ಟಿತು. ಆಪದ್ಧರ್ಮದ ಪ್ರಕಾರ ನಡೆದುಕೊಳ್ಳೋದು ಬ್ರಾಹ್ಮಣರ ಕರ್ತವ್ಯ. ಈ ಬಂಗಾರ ನಿನ್ನಲ್ಲೇ ಇರಲಿ. ಅವನು ತೀರಿಹೋದ ಮೇಲೆ ಪಾಪ ನಿನ್ನ ಜೀವನವೂ ಸಾಗಬೇಕಲ್ಲ"

ಎಂದು ಅವಳ ಸನಿಯ ಲಾಟೀನು ಹಿಡಿದು ನಿಂತು, ಬೆಳಕಿನಲ್ಲಿ ಬಾಗಿ, ತಮ್ಮ ಮುಖದ ಕಡೆ ಆರ್ತತೆಯಿಂದ ಎತ್ತಿದ ವಿಶಾಲವಾದ ಕಪ್ಪಾದ ಅವಳ

ಕಣ್ಣುಗಳನ್ನು ಕರುಣೆಯಿಂದ ನೋಡಿ, ಬಂಗಾರವನ್ನು ಅವಳ ಕೈಮೇಲೆ ಇಟ್ಟು, ಒಳಗೆ ಹೋದರು.

## ಅಧ್ಯಾಯ : ಏಳು

ದಾಸಾಚಾರ್ಯ ಹಸಿವೆ ತಾಳಲಾರದೆ ಸಂಕಟದಿಂದ ನಾರಾಯಣ ನಾರಾಯಣ ಎನ್ನುತ್ತ, ಉಶ್ ಉಶ್ ಎಂದು ಹೊಟ್ಟೆಯುಜ್ಜಿಕೊಳ್ಳುತ್ತ, ಹಾಸಿಗೆಯಲ್ಲಿ ಹೊರಳಿದ. ಅವನ ಮಗ ನಿದ್ದೆ ಬರದೆ ತಾಯನ್ನ ಎಬ್ಬಿಸಿದ. 'ಅಮ್ಮ, ದುರ್ನಾತ, ದುರ್ನಾತ' ಎಂದ. ಹಸಿವಿನ ಸಂಕಟದಲ್ಲಿದ್ದ ದಾಸಾ ಚಾರ್ಯನಿಗೆ ಯಾವ ನಾತವೂ ಬರಲಿಲ್ಲ. ಆದರೆ ಅವನ ಹೆಂಡತಿ 'ಹೌದಲ್ಲ' ಎಂದಳು. 'ಇವರೇ, ದುರ್ನಾತ' ಎಂದು ಗಂಡನನ್ನು ತಟ್ಟಿ ತಟ್ಟಿ ಹೇಳಿದಳು. 'ಬೇಸಗೆ—ಹೆಣ ಕೊಳೆತು, ನಾತ ಇಡೀ ಅಗ್ರಹಾರಕ್ಕಡರುತ್ತಿದೆ' ಎಂದಳು. ಅರೆಮರಳು ಲಕ್ಷ್ಮೀದೇವಮ್ಮ 'ನಾರಣಪ್ಪನ ಪ್ರೇತ ಪ್ರೇತ'ವೆಂದು ಕೂಗಿದ್ದು ಕೇಳಿ ಕಿಟಾರನೆ ಕಿರುಚಿಕೊಂಡಳು. ಶವದ ಪ್ರೇತವೇನಾದರೂ ಅಡ್ಡಾಡುತ್ತ ದುರ್ನಾತ ಹರಡುತ್ತಿದೆಯೋ ಎಂದು ಕಂಪಿಸಿದಳು.

* * *

ಗುಡಿಯಲ್ಲಿ ದುರ್ನಾತವಾಗಿ ಬೆಳ್ಳಿಗೆ ನಿದ್ದೆ ಬರದೆ ಎದ್ದು ಕೂತಳು. ಕಪ್ಪು ಕತ್ತಲಲ್ಲಿ ಏನೂ ಕಾಣದು. ಹೊರಗೆ ಬಂದಳು. ಹೊಲೆಯ ಹೊಲತಿ ಯರನ್ನು ಬೆಂಕಿ ಕೊಟ್ಟು ಗುಡಿ ಸುಟ್ಟು ಬೂದಿಯಾಗಿ ಬೂದಿಯಲ್ಲಿ ಬೆಂಕಿಯ ಕಿಡಿ ಗಾಳಿಗೆ ಮಿನುಗುತ್ತಿತ್ತು. ದೂರದ ಪೊದೆಯಲ್ಲೊಂದು ರಾಶಿ ಮಿಣುಕು ಹುಳುಗಳು ಮಿನುಗುತ್ತಿದ್ದುದನ್ನು ಕಂಡು ಮೆತ್ತಗೆ ಅವುಗಳ ಬಳಿ ಹೋಗಿ, ಉಟ್ಟ ತುಂಡನ್ನು ಬಿಚ್ಚಿ, ತಣ್ಣಗಿನ ಗಾಳಿಯಲ್ಲಿ ಹಿತವಾಗಿ ಬೆತ್ತಲೆ ನಿಂತು, ತುಂಡನ್ನು ಜೋಕೆಯಾಗಿ ಬೀಸಿ, ಮಿಣಕ್ ಮಿಣಕ್ಕೆಂದು ಬೆಳಕನ್ನು ಚಿಮ್ಮುವ ಮಿಂಚುಹುಳುಗಳನ್ನು ತುಂಡಿನಲ್ಲಿ ಹಿಡಿದು, ದಿಡ ದಿಡ ಓಡಿ ತನ್ನ ಗುಡಿಗೆ ಬಂದು, ಗುಡಿಯಲ್ಲಿ ಅವನ್ನು ಕೊಡವಿದಳು. ಮಿಣಕ್ ಮಿಣಕ್ ಎಂದು ಅವು ಗುಡಿಯಲ್ಲಿ ಅಸ್ಪಷ್ಟವಾದ ಬೆಳಕನ್ನು ಮಾಡುತ್ತ ಹಾರಾಡಿದುವು. ಬೆಳ್ಳಿ ಕೈಯಲ್ಲಿ ನೆಲವನ್ನು ಪರದಾಡುತ್ತ ಹುಡುಕಿದಳು. ನರಳುತ್ತಿದ್ದ ಅವಳ

ಅಪ್ಪ ಅಮ್ಮ ಬೆಳ್ಳಿಯ ಬಳಚುವ ಕೈ ತಗಲಿ 'ಇಶ್ಶಿ ! ಈ ಹೊತ್ತಲ್ಲಿ ಈ ಕುರ್ದೆಯೇನು ಮಾಡ್ತಿದೆ' ಎಂದು ಗೊಣಗಿದರು. 'ಇಲಿ ಸತ್ತು ದುರ್ನಾತ —ಇಶ್ಶಿ' ಎಂದು ಬೆಳ್ಳಿ ತಡಕಾಡಿ, ಮೂಲೆಯಲ್ಲಿ ತಣ್ಣನೆ ಕೊರೆಯುತ್ತಿದ್ದ ಇಲಿಯನ್ನು ಮಿಣುಕುಹುಳುಗಳ ಬೆಳಕಲ್ಲಿ ಕಂಡು—'ಅಯಯ್ಯಪಾ' ಎಂದು ಒದರಿ, ಬಾಲದಿಂದ ಅದನ್ನೆತ್ತಿ ಹೊರಗೆಸೆದು ಬಂದು : "ಈ ಪಾಡು ಓಡಲಿಕ್ಕೆ ಸಾಯಲಿಕ್ಕೆ ಏನಾಗಿವೆಯೋ ಈ ಇಲಿಗಳಿಗೆ ರಂಡೆ ಕುರ್ದೆಗಳು"—ಎಂದು ಶಪಿಸಿ, ತುಂಡುಟ್ಟು, ನೆಲಕ್ಕೊರಗಿ ಮಲಗಿ, ನಿದ್ದೆಹೋದಳು.

* * *

ಹೊಟ್ಟೆಯಲ್ಲಿ ತಪತಪವೆನ್ನುವ ಹಸಿವಿನಿಂದ ನಿದ್ದೆ ಬರದೆ ಕೆಂಗಣ್ಣಾದ ದಾಸಾಚಾರ್ಯ, ವೆಂಕಟರಮಣಾಚಾರ್ಯ, ಶ್ರೀನಿವಾಸಾಚಾರ್ಯ, ಗುಂಡಾಚಾರ್ಯ, ಹನುಮಂತಾಚಾರ್ಯ, ಲಕ್ಷ್ಮಣಾಚಾರ್ಯ, ಗರುಡಾಚಾರ್ಯ, ದುರ್ಗಾಭಟ್ಟ ಬೆಳಿಗ್ಗೆ ಎದ್ದು ಮುಖ ತೊಳೆದು ಅಗ್ರಹಾರಕ್ಕೆಂತಹ ಅನಿಷ್ಟ ಬಂತಪ್ಪ ಎಂದು ನಾರಣಪ್ಪನನ್ನು ಶಪಿಸುತ್ತ ಚಾವಡಿಗೆ ಬಂದರು. ಮನೆಯೊಳಗೆ ದುರ್ನಾತವೆಂದು ಮಕ್ಕಳು ಅಂಗಳದಲ್ಲಿ, ಹಿತ್ತಲಿನಲ್ಲಿ, ಕುಣಿಯುತ್ತಿದ್ದರು. ಹೆಂಗಸರಿಗೆ ಭೀತಿ: ಬೀದಿಯಲ್ಲಿ ಅಲೆಯುವ ನಾರಣಪ್ಪನ ಪ್ರೇತ ಮಕ್ಕಳನ್ನೆಲ್ಲಾದರೂ ಮೆಟ್ಟಿದರೆ ಏನು ಗತಿ ? ಒಳಗೆ ಬರಲೊಪ್ಪದ ಮಕ್ಕಳಿಗೆ ಎರಡೆರಡು ಬಾರಿಸಿ ಒಳಕ್ಕೆ ನೂಕಿ ಬಾಗಿಲು ಹಾಕಿದ್ದಾಯಿತು. ಹೀಗೆ ಹಾಡುಹಗಲಿನಲ್ಲಿ ಮನೆಯ ಬಾಗಿಲನ್ನು ಎಂದೂ ಮುಚ್ಚಿದ್ದಿಲ್ಲ. ಹೊಸಲಿಗೆ ರಂಗವಲ್ಲಿಯಿಲ್ಲದೆ, ಅಂಗಳಕ್ಕೆ ಸಗಣಿನೀರಿಲ್ಲದೆ, ಬೆಳಗಾದರೂ ಅಗ್ರಹಾರ ಬೆಳಗಾದಂತೆ ಕಾಣುತ್ತಿರಲಿಲ್ಲ. ಬಿಕೋ ಎನ್ನುತ್ತಿತ್ತು. ಪ್ರತಿ ಮನೆಯ ಕತ್ತಲೆ ಕೋಣೆಯಲ್ಲಲ್ಲೊ ಒಂದು ಶವವಿದ್ದಂತೆ ಭಾವ. ಚಾವಡಿಯ ಮೇಲೆ ತಲೆಮೇಲೆ ಕೈ ಹೊತ್ತು ಕೂತ ಬ್ರಾಹ್ಮಣರಿಗೆ ಏನು ಮಾಡಲೂ ಕಾಲೇ ಬಾರದು.

ವೆಂಕಟರಮಣಾಚಾರ್ಯನ ತುಂಟ ಮಕ್ಕಳು ಮಾತ್ರ, ತಾಯಿಯ ಆಜ್ಞೆಯನ್ನು ಧಿಕ್ಕರಿಸಿ ಹಿತ್ತಲಿನಲ್ಲಿ ನಿಂತು, ಗುಡುಗುಡು ಎಂದು ಉಗ್ರಾಣದಿಂದ ಹಿತ್ತಲಿಗೆ ಜಿಗಿಯುತ್ತಿದ್ದ ಇಲಿಗಳನ್ನು ಎಣಿಸುತ್ತ ಚಪ್ಪಾಳೆಯಿಡುತ್ತ ಕುಣಿದರು. ಕೊಳಗದಲ್ಲಿ ಅಪ್ಪಯ್ಯ ಭತ್ತವನ್ನು ಅಳೆಯುವಾಗ ಎಣಿಸುವ ಮರ್ಜಿಯಲ್ಲಿ ಅವರ ಲೆಕ್ಕ ನಡೆದಿತ್ತು !

ಲಾಭ ಲಾಭ
ಎರಡೋ ಎರಡು....
ಮೂರೋ ಮೂರು....
ನಾಲ್ಕೋ ನಾಲ್ಕು....
ಐದೋ ಐದು....
ಆರೋ ಆರು....
ಮತ್ತೊಂದೋ ಮತ್ತೊಂದು....

ಬರಲು ತೆಗೆದುಕೊಂಡು ಬಾರಿಸಲು ಬಂದ ತಾಯಿಗೆ "ನೋಡಮ್ಮ ನೋಡು, ಎಂಟೋ ಎಂಟು, ಒಂಬತ್ತೋ ಒಂಬತ್ತು, ಹತ್ತೋ ಹತ್ತು, ಹತ್ತು" ಎಂದು ಚಪ್ಪಾಳೆ ತಟ್ಟಿ ಕುಣಿಯುತ್ತ, "ನೋಡಮ್ಮ ನೋಡು, ಹತ್ತು ಇಲಿ" ಎಂದು ಕೇಕೆಹಾಕಿದರು.

ತಾಯಿ ಅದಕ್ಕೆ ಕುಪಿತಳಾಗಿ :

"ತಿಂದ ಅನ್ನ ನಿಮಗೆ ನೆತ್ತಿಗೇರಿದೆ ಅಲ್ಲವ? ಪ್ರಾರಬ್ಧ ಇಲಿಗಳನ್ನೇನು ಎಣಿಸೋದು? ಒಳಗೆ ನಡೀರಿ—ಇಲ್ಲವೆ ಬಾಸುಂಡೆ ಬರುವಂತೆ ಥಳಿಸಿಬಿಡುತ್ತೇನೆ. ಉಗ್ರಾಣದ ತುಂಬ ಇವೆ ಅನಿಷ್ಟದವು. ಅಕ್ಕಿ ಬೇಳೆಯಲ್ಲೆಲ್ಲ ಅವುಗಳ ಹಿಕ್ಕೆ ತುಂಬಿರುತ್ತದೆ"

ಎಂದು ಗೊಣಗುತ್ತ ಮಕ್ಕಳನ್ನು ಅಟ್ಟಿ ಒಳಗೆ ತಳ್ಳಿ ಕೂಡಿದಳು. ಒಳಗೊಂದು ಇಲಿ ತಟ್ಟನೆ ಪ್ರತ್ಯಕ್ಷವಾಗಿ, ಮಕ್ಕಳು ಆಟದಲ್ಲಿ ಮಾಡುವ ಹಾಗೆ ಸುತ್ತ ಸುತ್ತ ಸುತ್ತಿ, ಅಂಗಾತ್ತನೆ ಒರಗಿದ್ದನ್ನು ಕಂಡು ಹುಡುಗರು ಹಿರಿಹಿರಿ ಹಿಗ್ಗಿದರು.

* * *

ಮೆಲ್ಲನೆ ಬ್ರಾಹ್ಮಣರು ತಮ್ಮ ತಮ್ಮ ಚಿಟ್ಟೆಯಿಂದಿಳಿದು, ಮೂಗು ಮುಚ್ಚಿಕೊಂಡು ಪ್ರಾಣೇಶಾಚಾರ್ಯರ ಮನೆಯತ್ತ ನಡೆದರು. ದುರ್ಗಾಭಟ್ಟ ಎಲ್ಲರನ್ನೂ ನಿಲ್ಲಿಸಿ, "ಅರೆಮರುಳು ಅಜ್ಜಿ ಕೂಗಿದ್ದು ನಿಜವಿರಲಿಕ್ಕೂ ಸಾಕಲ್ಲವೇ, ಆಚಾರ್ಯರೇ" ಎಂದ. ಬ್ರಾಹ್ಮಣರೆಲ್ಲ ಅದಕ್ಕೆ ಪುಕ್ಕಾಗಿ 'ಏನೋ ನೋಡುವ' ಎಂದು ಮೆಲ್ಲಗೆ ನಾರಣಪ್ಪನ ಮನೆಯೆದುರು ಬಂದು ನಿಂತು ತೆರೆದ ಹೆಬ್ಬಾಗಿಲನ್ನು ನೋಡಿ ಭಯಗ್ರಸ್ತರಾದರು. ಅವನ ಹೆಣ ಪ್ರೇತದಂತೆ ಅಲೆಯುತ್ತಿರೋದು ಖಡಾಖಂಡಿತ. ಅವನಿಗೆ ಸಂಸ್ಕಾರವಾಗದಿದ್ದಲ್ಲಿ

ಅವ ಬ್ರಹ್ಮರಾಕ್ಷಸನಾಗಿ ಅಗ್ರಹಾರವನ್ನು ಕಾಡೋದು ನಿಶ್ಚಯ. ದಾಸಾಚಾರ್ಯ ನೀರ್ದುಂಬಿದ ಕಣ್ಣುಗಳಿಂದ ಬ್ರಾಹ್ಮಣರನ್ನು ದೂರುತ್ತ ಅಂದ:

"ಬಂಗಾರದ ಆಸೇಲಿ ನಾವು ಕೆಟ್ಟೆವಪ್ಪ. ಹೇಳಲಿಲ್ಲವ ನಾನು? ಅದು ಬ್ರಾಹ್ಮಣ ಶವ, ವಿಧಿಯುಕ್ತ ಶ್ರಾದ್ಧವಾಗದ ಹೊರತು ಪ್ರೇತವಾಗುತ್ತೆ ಅಂತ. ಬಡವನ ಮಾತು ಯಾರ ಎಗ್ಗಿಗೆ ಬರಬೇಕು ಹೇಳಿ. ಈ ಬೇಸಗೇಲಿ ಅದು ಕೊಳೆತು ನಾರದೇ ಇರುತ್ತದ? ಎಷ್ಟು ದಿನಾಂತ ಉಪವಾಸ ಮಾಡಿ ನಮಗೆ ಸಾಯಲಿಕ್ಕೆ ಸಾಧ್ಯ—ಹೆಣವನ್ನಿಟ್ಟುಕೊಂಡು...."

ಹಸಿವಿನಿಂದ ಕುಪಿತರಾದ ದುರ್ಗಾಭಟ್ಟರು ಅಂದರು:

"ಏನು ಮಾಧ್ವರೋ ನೀವು? ಏನು ಆಚಾರವೋ ನಿಮ್ಮದು? ಇಂತಹ ಸಂದರ್ಭದಲ್ಲೊಂದು ನಿಮ್ಮ ತಲೆಗೆ ಉಪಾಯ ಹೊಳೆಯದೇ ಹೋಯಿತಲ್ಲ."

ಮೆತ್ತಗಾದ ಗರುಡ:

"ನನ್ನದೇನೂ ಅಡ್ಡಿಯಿಲ್ಲಪ್ಪ, ಪ್ರಾಣೇಶಾಚಾರ್ಯರು ಸೈ ಎಂದರಾಯಿತು, ಏನು. ಬಂಗಾರದ ಪ್ರಶ್ನೆ ಒತ್ತಟ್ಟಗಿಟ್ಟುಬಿಡುವ. ಏನು. ಮೊದಲು ಹೆಣವನ್ನ ಸ್ಮಶಾನಕ್ಕೆ ಸಾಗಿಸಿಬಿಡುವ....ಏನು....ನಮ್ಮ ಬ್ರಾಹ್ಮಣ್ಯಾನ ಪ್ರಾಣೇಶಾಚಾರ್ಯರು ರಕ್ಷಿಸಿಬಿಟ್ಟರೆ ಸರಿ...." ಎಂದ.

ಎಲ್ಲರೂ ಕೂಡಿ ಪ್ರಾಣೇಶಾಚಾರ್ಯರಲ್ಲಿಗೆ ಹೋಗಿ ನಡುಮನೆಯಲ್ಲಿ ದೈನ್ಯದಿಂದ ನಿಂತರು. ಆಚಾರ್ಯರು ಹೆಂಡತಿಯನ್ನು ಎತ್ತಿ ಹಿತ್ತಲಿಗೆ ಒಯ್ದು ಮೂತ್ರ ಹೊಯ್ಯಿಸಿ, ಮುಖ ತೊಳೆಸಿ, ಔಷಧಿ ಕುಡಿಸಿ ಹೊರ ಬಂದರು. ನೆರೆದಿದ್ದ ಬ್ರಾಹ್ಮಣರನ್ನು ಕಂಡು ತಾವು ರಾತ್ರೆ ಮಾಡಿದ ನಿರ್ಧಾರವನ್ನು ವಿವರಿಸಿದರು. ಗರುಡ ಆರ್ತಸ್ವರದಿಂದ—"ನಮ್ಮ ಬ್ರಾಹ್ಮಣ್ಯ ತಮ್ಮ ಕೈಯಲ್ಲಿದೆಯಪ್ಪ. ಹೆಣವನ್ನು ತೆಗೆಯಲಿಲ್ಲ ಎಂದೋ, ಏನು, ಅಥವಾ ತೆಗೆದುಬಿಟ್ಟರು ಎಂದೋ, ಏನು, ಒಟ್ಟಿನಲ್ಲಿ ನಮ್ಮ ಮೇಲೆ ಅಪವಾದ ಬರದಂತೆ ರಕ್ಷಿಸಬೇಕು. ಮಾರುತಿಯ ಅಪ್ಪಣೆ ತಾವು ತರ್ೋವರೆಗೆ ನಾವಿಲ್ಲಿ ಕಾದಿರುತ್ತೇವೆ" ಎಂದು ಬ್ರಾಹ್ಮಣರೆಲ್ಲರ ಅಭಿಪ್ರಾಯವನ್ನು ನಿವೇದಿಸಿದ. ಆಚಾರ್ಯರು ಹೊರಟು—"ಮಕ್ಕಳಿಗೆ ಅಡ್ಡಿಯಿಲ್ಲ, ಊಟ ಮಾಡಬಹುದು. ಗೊತ್ತು ತಾನೆ?" ಎಂದರು.

ಕೈಯಲ್ಲಿ ಬುಟ್ಟಿ ಹಿಡಿದು ಅಗ್ರಹಾರದ ವೃಕ್ಷಗಳಿಂದ ಪಾರಿಜಾತ, ಮಲ್ಲಿಗೆ, ಸಂಪಿಗೆ ಹೂಗಳನ್ನು ಕೊಯ್ದು ತುಂಬಿಸಿದರು. ಬುಟ್ಟಿ ತುಂಬ ತುಳಸಿಯನ್ನು ತುಂಬಿಕೊಂಡರು. ಹೊಳೆಯಲ್ಲಿ ಸ್ನಾನಮಾಡಿ, ಒದ್ದೆವಸ್ತ್ರ

ಉಟ್ಟು, ಯಜ್ಞೋಪವೀತವನ್ನು ಬದಲಾಯಿಸಿಕೊಂಡರು. ಹೊಳೆ ದಾಟಿ, ಕಾಡು ಹೊಕ್ಕು ನಡೆದು, ಎರಡು ಮೈಲಿಯಾಚೆ ಅರಣ್ಯದ ಮೌನದಲ್ಲಿ ಪ್ರಶಾಂತವಾಗಿದ್ದ ಮಾರುತಿಯ ಗುಡಿಗೆ ಬಂದರು. ಗುಡಿಯ ಬಾವಿಯಿಂದ ನೀರು ಸೇದಿ, ದಾರಿಯಲ್ಲೆಲ್ಲಾದರೂ ಮೈಲಿಗೆ ತಟ್ಟಿರಬಹುದೆಂದು ಎರಡು ಕೊಡ ನೀರನ್ನು ಸುರಿದುಕೊಂಡರು. ಇನ್ನೊಂದು ಕೊಡ ನೀರೆತ್ತಿಕೊಂಡು ಹೋಗಿ, ಆಳೆತ್ತರದ ಮಾರುತಿಯ ವಿಗ್ರಹದ ಮೇಲಿದ್ದ ಒಣಗಿದ ತುಳಸಿ ಪುಷ್ಪಗಳನ್ನು ತೆಗೆದು, ನೀರಿನಿಂದ ಶುಭ್ರವಾಗಿ ತೊಳೆದರು. ನಂತರ ಕೂತು ಒಂದು ಗಂಟೆಕಾಲ ಮಂತ್ರೋಚ್ಚಾರಣೆ ಮಾಡುತ್ತ ಗಂಧವನ್ನು ತೇದರು. ತೇದ ಗಂಧವನ್ನು ಮಾರುತಿಯ ಮೈಗೆ ಹಚ್ಚಿ, ಹೂವು ತುಳಸಿಗಳಿಂದ ಇಡಿಯ ವಿಗ್ರಹವನ್ನು ಶೃಂಗರಿಸಿದರು. ಕಣ್ಣು ಮುಚ್ಚಿ ಧ್ಯಾನಿಸಿ, ತಮ್ಮ ಮನಸ್ಸಿನ ಸಂಕಟಗಳನ್ನೆಲ್ಲ ನಿವೇದಿಸಿ–"ಆಗಲಿ ಎಂದು ನಿನ್ನ ಆಜ್ಞೆಯಾದರೆ ಬಲಗಡೆಯ ಪ್ರಸಾದವನ್ನು ನೀಡಪ್ಪ; ಶವಸಂಸ್ಕಾರ ನಿಷೇಧವಾದರೆ ಎಡಗಡೆಯ ಪ್ರಸಾದವನ್ನು ದಯಪಾಲಿಸಪ್ಪ. ಅಲ್ಪಮತಿಯಾದ್ದರಿಂದ ಆಪದ್ಧರ್ಮ ವೇನೆಂದು ಅರಿಯದೆ ನಿನ್ನ ಬಳಿ ಬಂದೆ" ಎಂದು ಕಣ್ಣು ಮುಚ್ಚಿದವರು ಭಕ್ತಿಯಿಂದ ಸಂಕಲ್ಪಿಸಿಕೊಂಡು, ನೀಲಾಂಜನದ ಬೆಳಕಿನಲ್ಲಿ ಮಾರುತಿ ಯನ್ನು ನೋಡುತ್ತ ಕುಳಿತರು.

ಬೆಳಿಗ್ಗೆ ಹತ್ತು ಗಂಟೆಯ ಒಳಗೇ ಭಯಂಕರ ಬಿಸಿಲಾದ್ದರಿಂದ ಗುಡಿಯ ಕತ್ತಲಿನಲ್ಲೂ ಸೆಖೆಯಾಗಿ, ಬೆವರಿ, ಆಚಾರ್ಯರು ಮತ್ತೊಂದು ಕೊಡ ನೀರು ಸುರಿದುಕೊಂಡು ಒದ್ದೆಮೈಯಲ್ಲಿ ಕೂತರು. "ನಿನ್ನ ಅಪ್ಪಣೆಯಾಗುವ ವರೆಗೆ ನಾನು ಏಳುವುದಿಲ್ಲ" ಎಂದರು.

ಪ್ರಾಣೇಶಾಚಾರ್ಯರು ಮನೆ ಬಿಟ್ಟ ಕ್ಷಣ, ಉಳಿದ ಬ್ರಾಹ್ಮಣರ ಸಿಡುಕು ಮುಖಗಳನ್ನು ನೋಡಲು ಅಂಜಿದ ಚಂದ್ರಿ, ತಿರುಗಿ ತೋಟಕ್ಕೆ ಹೋಗಿ ಮಡಲಿನ ತುಂಬ ರಸಬಾಳೆ ಹಣ್ಣುಗಳನ್ನು ಕಟ್ಟಿಕೊಂಡು, ಹೊಳೆ ಯಲ್ಲಿ ಶುಭ್ರವಾಗಿ ಸ್ನಾನಮಾಡಿ, ತನ್ನ ಕಪ್ಪು ನುಣುಪು ಕೂದಲಿನ ರಾಶಿ ಯನ್ನು ಒದ್ದೆಯಾದ ಮೈಮೇಲೆ ಇಳಿಬಿಟ್ಟು, ಮೈಗೆ ಹತ್ತಿದ ಒದ್ದೆ ಸೀರೆ ಯಲ್ಲಿ ನಡೆದು ಮಾರುತಿಯ ಗುಡಿಯಿಂದ ಸ್ವಲ್ಪ ದೂರದಲ್ಲೊಂದು ಮರ ಕ್ಕೊರಗಿ ಕೂತಳು. ದೂರದ ಗುಡಿಯಿಂದ ಆಚಾರ್ಯರು ಬಾರಿಸಿದ ಗಂಟೆ ಕಿವಿಗೆ ಬಿದ್ದಿತು. ಗುಡಿಯ ಗಂಟೆಯ ಪವಿತ್ರ ಧ್ವನಿಯಿಂದಾಗಿ ಹಿಂದಿನ ರಾತ್ರೆ ತನ್ನನ್ನು ಅವಾಕ್ಕಾಗಿ ಮಾಡಿದ ಅನುಭವ ಮರುಕೊಳಿಸಿತು. ತನ್ನ

ಅಪ್ಪ ಹೇಳಿದ ಮಾತನ್ನು ತಾನು ನೆನೆಯುತ್ತಿರುವಾಗಲೆ ಕತ್ತಲೆಯಲ್ಲಿ ಲಾಟೀನು ಹಿಡಿದು, ಚಾಪೆ ದಿಂಬುಗಳನ್ನು ತಂದು, ಆಚಾರ್ಯರು ಮೃದುವಾಗಿ 'ಚಂದ್ರೀ' ಎಂದು ಕರೆಯಬೇಕೆ? ಮತ್ತೆ ಥಟ್ಟನೆ ತನಗೀಗ ಮುವ್ವತ್ತು ತುಂಬಿದೆ, ನಾರಣಪ್ಪನ ಜೊತೆ ಹತ್ತು ವರ್ಷ ಬಾಳಿಯೂ ಸಂತಾನ ಪ್ರಾಪ್ತಿವಾಗಲಿಲ್ಲ ಎಂದು ಕೊರಗಿದಳು. ಮಗನಿದ್ದಿದ್ದರೆ ಅವನನ್ನೊಬ್ಬ ದೊಡ್ಡ ಸಂಗೀತಗಾರನನ್ನಾಗಿ ಮಾಡಬಹುದಿತ್ತು. ಮಗಳಿದ್ದಿದ್ದರೆ ಭರತನಾಟ್ಯ ಕಲಿಸಬಹುದಿತ್ತು—ಎಲ್ಲ ಇದ್ದೂ ತನಗೆ ಏನೂ ಇಲ್ಲವಾಯಿತು ಎಂದು ಮರಗಳ ಮೇಲೆ ಪುರ್ರ್ ಎಂದು ಹಾರಿ ಬಂದು ಕೂತ ಪುಟ್ಟಪುಟ್ಟ ಹಕ್ಕಿಗಳನ್ನು ನೋಡುತ್ತ ಕೂತಳು.

## ಅಧ್ಯಾಯ : ಎಂಟು

ದಾಸಾಚಾರ್ಯನಿಗೆ ತಾನಿನ್ನು ಊಟ ಮಾಡದಿದ್ದರೆ ಸತ್ತುಬಿಡಬಹುದೆಂದು ಭಯವಾಯಿತು. ಉರಿಯುವ ಬೆಂಕಿಗೆ ಹೊಯ್ದ ತುಪ್ಪದ ಹಾಗೆ ಮಕ್ಕಳಿಗೆಂದು ಬೇಯಿಸುತ್ತಿದ್ದ ಗಂಜಿಯ ವಾಸನೆ ಬೇರೆ. ಬಾಯಲ್ಲಿನ ಉಗುಳನ್ನು ತುಪ್ಪಿದ, ನುಂಗಿದ—ಕೊನೆಗೆ ಸಹಿಸಲಾರದೆ ಎದ್ದು ಹೊರಟ. ಯಾರ ಕಣ್ಣಿಗೂ ಬೀಳದಂತೆ ಬಿಸಿಲಿನ ಉರಿಯಲ್ಲಿ ತುಂಗಾನದಿಗೆ ಇಳಿದು ಸ್ನಾನ ಮಾಡಿ, ಪಾರಿಜಾತಪುರಾಭಿಮುಖನಾಗಿ ನಡೆದ. ಸಾಹುಕಾರ ಮಂಜಯ್ಯನ ಚಪ್ಪರದ ನೆರಳಿನಲ್ಲಿ ನಿಂತ. ಹೇಗೆ ಬಾಯಾರ ಹೇಳಿಕೊಳ್ಳೋದು? ಜನ್ಮಾಪಿ ಅವನು ಈ ಅಡ್ಡಪಂಕ್ತಿಯವರ ಮನೆಗಳಲ್ಲಿ ನೀರು ಮುಟ್ಟಿದವನಲ್ಲ. ತತ್ರಾಪಿ ತಾನು ಬ್ರಾಹ್ಮಣಾರ್ಥದಿಂದ ಹೊಟ್ಟೆ ಹೊರೆಯಬೇಕಾದ ಬ್ರಾಹ್ಮಣ. ಉಳಿದವರಿಗೆ ತಿಳಿದರೆ ಏನು ಗತಿ? ಆದರೆ ಯೋಚನೆಗಿಂತ ಶೀಘ್ರವಾಗಿ ಅವನ ಕಾಲುಗಳು ಅವನನ್ನು ಅವಲಕ್ಕಿ ಉಪ್ಪಿಟ್ಟು ತಿನ್ನುತ್ತಿದ್ದ ಮಂಜಯ್ಯನ ಎದುರು ತಂದು ನಿಲ್ಲಿಸಿತ್ತು.

"ಓಹೋಹೋ ಬರೋಣಾಗಲಿ ಬರೋಣಾಗಲಿ, ಆಚಾರ್ಯರೆ. ಏನು ಇತ್ತ ಕಾಲು ಬೆಳಸಿದರಲ್ಲ? ಪ್ರಾಣೇಶಾಚಾರ್ಯರೇನಾದರೂ ಒಂದು ನಿರ್ಧಾರಕ್ಕೆ ಬಂದರ—ಏನು ಕತೆ? ಪಾಪ, ಅವನ ಶವ ತೆಗೆಯದ ಹೊರ್ತು ನಿಮಗೆ ಯಾರಿಗೂ ಊಟವಿಲ್ಲ, ಅಲ್ಲವೆ? ಕೂರೋಣಾಗಲಿ, ಆಯಾಸ ಪರಿಹಾರ

ಮಾಡಿಕೊಳ್ಳೋಣಾಗಲಿ. ಇವಳೇ, ಆಚಾರ್ಯರಿಗೆ ಮಣೇ ಹಾಕೇ"

ಎಂದು ಮಂಜಯ್ಯ ಉಪಚರಿಸಿದರು.

ಉಪ್ಪಿಟ್ಟನ್ನೇ ನೋಡುತ್ತ ಧ್ಯಾಸವಿಲ್ಲದವನಂತೆ ದಾಸಾಚಾರ್ಯ ನಿಂತು ಬಿಟ್ಟ. ಮಂಜಯ್ಯ ಅವನನ್ನು ಕರುಣೆಯಿಂದ ನೋಡಿದರು :

"ತಲೆ ಸುತ್ತುತ್ತಿದೆಯೆ, ಆಚಾರ್ಯರೇ. ಸ್ವಲ್ಪ ಪಾನಕ ಮಾಡಿಸಲೆ ?"

ದಾಸಾಚಾರ್ಯ ಹೂ ಎನ್ನದೆ ಊಹೂ ಎನ್ನದೆ, ಹಾಕಿದ ಮಣೆಯ ಮೇಲೆ ಕುಕ್ಕುರುಗಾಲಿನಲ್ಲಿ ಕೂತು ಯೋಚಿಸಿದ. ಹೇಗೆ, ಹೇಗೆ, ಬಾಯಾರೆ ಕೇಳುವುದು ? ಧೈರ್ಯ ತಂದು ಸುತ್ತಿಸುತ್ತಿ ಮಾತಾಡಲು ಪ್ರಾರಂಭಿಸಿದ. ಮಂಜಯ್ಯನವರು ಉಪ್ಪಿಟ್ಟನ್ನು ತಿನ್ನುತ್ತ ಕೇಳಿಸಿಕೊಂಡರು.

"ನಿನ್ನೆ ನಮ್ಮವರು ಇಲ್ಲಿ ಆಡಿದ ರೀತಿ ನನಗಂತೂ ಸರಿಬರಲಿಲ್ಲ ಮಂಜಯ್ಯ."

"ಛೆ ಛೆ ಛೆ, ಹಾಗೆನ್ನಬಾರದು ನೀವು" ಎಂದರು ಮಂಜಯ್ಯ, ವಿನಯಕ್ಕಾಗಿ.

"ಹಾಗೆ ನೋಡಿದರೆ ಈ ಕಲಿಯುಗದಲ್ಲಿ ನಿಜವಾದ ಬ್ರಾಹ್ಮಣರು ಎಷ್ಟು ಜನರಿದ್ದಾರೆ ಹೇಳಿ ಮಂಜಯ್ಯ?"

"ಒಪ್ಪಿದೆ, ಒಪ್ಪಿದೆ ಆಚಾರ್ಯರೇ, ಕಾಲ ಕೆಟ್ಟುಹೋಯಿತು—ನಿಜ."

"ಯಾಕೆಂದೆನೆಂದರೆ—ನೇಮ-ನಿಷ್ಠೆಯಲ್ಲಿ ಯಾವ ಬ್ರಾಹ್ಮಣರಿಗೆ ನೀವು ಕಡಿಮೇಂತ ನಾನು ಕೇಳೋದು, ಮಂಜಯ್ಯನವರೆ. ಕಾಸು ಕೊಳ್ಳದೆ ಸಂಸ್ಕಾರ ಮಾಡ್ತೀನಿ ಅಂತ ತಾವು ಅಂದರೆ, ನಮ್ಮ ಅಗ್ರಹಾರದ ಗರುಡ, ಲಕ್ಷ್ಮಣ ಕಾಗೆಗಳ ಹಾಗೆ ಬಂಗಾರಕ್ಕೆಂದು ಜಗಳವಾಡುತ್ತಾರೆ...."

"ಅಯ್ಯೊ ಅಯ್ಯೊ, ಅಲ್ಲವೆ?" ಎಂದು ಯಾರ ನಿಷ್ಠುರವನ್ನೂ ಕಟ್ಟಿಕೊಳ್ಳಲು ಆಶಿಸದ ಮಂಜಯ್ಯ ತೇಲಿಸಿ ಆಡಿದರು.

"ಗುಟ್ಟಾಗಿ ನಿಮ್ಮ ಹತ್ತಿರ ಮಾತ್ರ ಒಂದು ಮಾತು, ಮಂಜಯ್ಯ: ಎಲ್ಲಾ ಅಂಬೋದು ಏನು ಅಂದರೆ ಗರುಡ ಮಾಟ ಮಾಡಿಸಿ ಹಾಗೆ ನಾರಣಪ್ಪ ದಾರಿಗೆಟ್ಟ ಅಂತ. ಅದರ ಫಲವಾಗಿ ಈಗ ಅವನ ಸ್ವಂತ ಮಗನೇ ಮಿಲಿಟರಿ ಸೇರಿಬಿಟ್ಟ ಅಂತ. ಆ ಪಾಪದ ಲಕ್ಷ್ಮೀದೇವಮ್ಮನ ನಗನಾಣ್ಯವನ್ನೂ ಮುಟ್ಟುಗೋಲು ಹಾಕಿಬಿಟ್ಟನಲ್ಲ...."

ಮಂಜಯ್ಯನವರಿಗೆ ಸಂತೋಷವಾದರೂ ಮಾತಾಡಲಿಲ್ಲ.

"ಈಗ ಯಾರು ನಿಜವಾದ ಬ್ರಾಹ್ಮಣರಿದ್ದಾರೆ ಎಂಬೋದಕ್ಕೆ ಈ ಮಾತ

ಸ್ನಾಡಿದನೆ ಹೊರತು ಗರುಡನ ಮೇಲೇನೂ ನನಗೆ ದ್ವೇಷವಿಲ್ಲ. ವರ್ಷಕ್ಕೊಮ್ಮೆ ಗುರುಗಳ ಹತ್ತಿರ ಪಂಚಮುದ್ರಾಧಾರಣೆ ಮಾಡಿಸಿಕೊಂಡ ಕ್ಷಣ ಎಲ್ಲ ಪಾಪವೂ ಸುಟ್ಟುಬಿಡುತ್ತದ? ತಾವು ಮಾಡದ ಕೆಲಸವನ್ನ ನಿಮ್ಮ ಹತ್ತಿರ ಮಾಡಿಸಬೇಕೆಂದು ಅವರು ಬಗೆದದ್ದು ನನಗೆ ಸರ್ವಥಾ ಒಪ್ಪಿಗೆಯಾಗಲಿಲ್ಲ. ನೀವು ಏನೇ ಹೇಳಿ ಮಂಜಯ್ಯ, ನಿಜವಾದ ಬ್ರಾಹ್ಮಣರೆಂದರೆ ನಮ್ಮ ಪ್ರಾಣೇಶಾಚಾರ್ಯರು. ಅದೇನು ತೇಜಸ್ಸು! ಅದೇನು ತಪಸ್ಸು! ತು, ತು, ತು, ತು...."

"ಅಲ್ಲವೆ, ಅಲ್ಲವೆ, ಅಲ್ಲವೆ.." ಎಂದು ಮಂಜಯ್ಯ ಒಪ್ಪಿ, "ಸ್ನಾನ ಮಾಡಿದ್ದೀರ, ಆಚಾರ್ಯರೆ?" ಎಂದು ಕೇಳಿದರು.

ದಾಸಾಚಾರ್ಯನಿಗೆ ಮುಖ ಚಿರೋಟಿಯಗಲ ಹರಡಿ ಹರ್ಷವಾಯಿತು.

"ಓಹೊ. ನದಿಯಲ್ಲಿ ಮಾಡಿಯೇ ಇತ್ತ ಬಂದೆ" ಎಂದ.

"ಹಾಗಿದ್ದರೆ ಏನನ್ನಾದರೂ ತೆಗೆದುಕೊಳ್ಳಿ, ಆಚಾರ್ಯರೆ."

"ನನಗೇನೂ ನಿಮ್ಮಲ್ಲಿ ಆಹಾರ ಸ್ವೀಕರಿಸಲು ಅಡ್ಡಿಯಿಲ್ಲ. ಆದರೆ ನಮ್ಮ ಅಗ್ರಹಾರದ ಕಿಡಿಗೇಡಿಗಳಿಗೇನಾದರೂ ತಿಳಿದರೆ ನನ್ನ ಬ್ರಾಹ್ಮಣಾರ್ಥಕ್ಕೆ ಮುಟ್ಟುಗೋಲು ಹಾಕಿಬಿಡುತ್ತಾರಲ್ಲ, ಮಂಜಯ್ಯ?"

ಆರ್ತನಾಗಿ ದಾಸಾಚಾರ್ಯ ಹೇಳಿದ ಮಾತಿಗೆ ಮಂಜಯ್ಯನವರು ಗುಟ್ಟಾಗಿ ಹತ್ತಿರ ಬಂದು, ಇನ್ನೊಬ್ಬ ಅಗ್ರಹಾರದ ಬ್ರಾಹ್ಮಣ ತಮ್ಮಲ್ಲಿ ತಿನ್ನಲು ಬಂದನಲ್ಲ ಎಂದು ಅತಿ ಹರ್ಷರಾಗಿ :

"ನೀವು ಇಲ್ಲಿ ಉಂಡಿರೆಂದು ನಾವು ಯಾಕೆ ಹೇಳಬೇಕು, ಆಚಾರ್ಯರೆ? ಏಳಿ, ಏಳಿ. ಕಾಲು ತೊಳೆದುಕೊಳ್ಳಿ. ಏ ಇವಳೇ, ಇಲ್ಲೊಂದಿಷ್ಟು ಉಪ್ಪಿಟ್ಟು...."

ಉಪ್ಪಿಟ್ಟಿನ ಶಬ್ದವೆತ್ತಿದೊಡನೆಯೇ ದಾಸಾಚಾರ್ಯನ ಹೊಟ್ಟೆಯೊಳಗೆ ಗೊಳ್ ಗೊಳ್ ಗೊಟರ್ ಎಂದು ಕರುಳು ಹೊರಳಿತು. ಆದರೆ ಬೇಯಿಸಿದ ಪದಾರ್ಥವನ್ನು ಮುಟ್ಟಲು ದಾಸಾಚಾರ್ಯ ಹೆದರಿ :

"ಬೇಡಿ, ಬೇಡಿ, ನನ್ನ ಆರೋಗ್ಯಕ್ಕೆ ಉಪ್ಪಿಟ್ಟು ಸರಿಬರೋದಿಲ್ಲ. ಒಂದಿಷ್ಟು ಖಾಲಿ ಅವಲಕ್ಕಿ, ಬೆಲ್ಲ, ಹಾಲಾದರೆ ಸಾಕು" ಎಂದರು.

ಮಂಜಯ್ಯನವರಿಗೆ ಅರ್ಥವಾಗಿ ನಗೆ ಬಂದು, ಆಚಾರ್ಯರಿಗೆ ಕಾಲು ತೊಳೆಯಲು ನೀರು ಕೊಟ್ಟು, ಗುಟ್ಟಾಗಿ ಅಡಿಗೆಮನೆಯಲ್ಲಿ ಕೂರಿಸಿ ಖುದ್ದಾಗಿ ತಾವೇ ಕೂತು ಉಪಚರಿಸುತ್ತ ಹಾಲು, ಬೆಲ್ಲ, ಅವಲಕ್ಕಿ, ಬಾಳೆಹಣ್ಣು, ಜೇನುತುಪ್ಪ ತಿನ್ನಿಸಿದರು. ತಿಂದಹಾಗೆ ಹಿಗ್ಗುತ್ತ ಬಂದಿದ್ದ ದಾಸಾಚಾರ್ಯ

ನಿಗೆ ಕೊನೆಯಲ್ಲಿ ಒತ್ತಾಯ ಮಾಡಿ 'ಒಂದು ಚಮಚಕ್ಕೇನೆಂದು' ಒಂದು ಚಮಚ ಉಪ್ಪಿಟ್ಟು ತಿನ್ನಿಸಿದರು. ಆಮೇಲಿಂದ ಮತ್ತೆ ನಾಲ್ಕು ಚಮಚ ಉಪ್ಪಿಟ್ಟನ್ನು ಖುಷಿಯಿಂದ ಮಂಜಯ್ಯನವರ ಹೆಂಡತಿ ಬಡಿಸಿದರೆ 'ಪರಮಾತ್ಮ' ಎಂದು ಹೊಟ್ಟೆಯುಜ್ಜಿಕೊಳ್ಳುತ್ತ ದಾಸಾಚಾರ್ಯ 'ಬೇಡ' ಎನ್ನಲಿಲ್ಲ. ದಾಕ್ಷಿಣ್ಯಕ್ಕೆ ಅನ್ನಲೇಬೇಕಾದಂತೆ 'ಸಾಕು ಸಾಕು, ನಿಮಗಿರಲಿ' ಎಂದು ಕೈಯನ್ನು ಎಲೆಗೆ ಅಡ್ಡ ಮಾಡುವಂತೆ ನಟಿಸಿದ ಅಷ್ಟೆ.

## ಅಧ್ಯಾಯ : ಒಂಬತ್ತು

ಬೆಳ್ಳಿಯ ಬದಲು ಆವತ್ತು ಚಿನ್ನಿ ಸಗಣಿ ಎತ್ತಲು ಬಂದಳು. ಕಾರಣ, 'ಬೆಳ್ಳಿಯ ಅಪ್ಪ ಅವ್ವ ಎಲ್ಡೂ ಜಡ ತಗುಲಿ ಮಲಗಿಬಿಟ್ಟವೆ' ಎಂದಳು—ಅಗ್ರಹಾರದ ಹೆಂಗಸರಿಗೆ. ತಮ್ಮ ಪಾಡೇ ತಮಗಾದ ಬ್ರಾಹ್ಮಣ ಹೆಂಗಸರು ಚಿನ್ನಿಯ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಆದರೆ ಚಿನ್ನಿ ಗೊಬ್ಬರ ವೆತ್ತುತ್ತ ಯಾರು ಕೇಳಿಸಿಕೊಳ್ಳಲಿ ಬಿಡಲಿ, ತಮ್ಮ ಕೇರಿಯ ಕಥೇನ ಆಡಿ ಕೊಂಡಳು. 'ಚೌಡ ಸತ್ತ, ಅವನ ಹೊಲತಿಯೂ ಸತ್ತಿತು, ಗುಡೀಗೆ ಬೆಂಕಿಯಿಟ್ಟು ಅವರ್ನ ಸುಟ್ಟದಾಯ್ತವ್ವ. ದಯ್ಯಕ್ಕೆ ಕ್ವಾಪ ಬಂದಯ್ತೋ ಏನು ಕತೆಯೋ.' ಗರುಡಾಚಾರ್ಯರ ಹೆಂಡತಿ ಸೀತಾದೇವಿ ಸೊಂಟದ ಮೇಲೆ ಕೈಯಿಟ್ಟು ತನ್ನ ಮಗನ ಬಗ್ಗೆಯೇ ಚಿಂತಿಸುತ್ತಿದ್ದಳು: ಮಿಲಿಟರಿ ಸೇರಿದ ಪರದೇಶಿಗೆ ಏನಾದರೂ ಆದರೆ ಏನು ಗತಿ? ಚಿನ್ನಿ ದೂರದಲ್ಲಿ ನಿಂತು: "ಅವ್ವಾ ಅವ್ವಾ, ಬಾಯಿಗಷ್ಟು ಕವಳಾ ಎಸೀರವ್ವಾ" ಎಂದು ಬೇಡಿದಳು. ಸೀತಾದೇವಿ ಒಳಗೆ ಹೋಗಿ ಎಲೆ, ಅಡಿಕೆ, ಹೊಗೆಸೊಪ್ಪನ್ನ ಎಸೆದು ಅಲ್ಲೇ ನಿಂತಳು—ಹಿಂದಿನದೇ ಯೋಚನೆಯಲ್ಲಿ. ಚಿನ್ನಿ ಹೊಗೆ ಸೊಪ್ಪು ಎಲೆಯಡಿಕೆಯನ್ನು ತನ್ನ ಮಡಲಿಗೆ ಸಿಕ್ಕಿಸಿಕೊಳ್ಳುತ್ತ:

"ಅವ್ವಾ, ಯಾಪಟ್ಟು ಇಲಿಗಳು ಹೆಂಗೆ ಹೊಂಟವೆ ಹ್ವರಗೆ! ಒಳ್ಳೇ ದಿಬ್ಬಣಕ್ಕೆ ಹ್ವಂಟಂಗೆ. ಏನು ಕಾರುಭಾರೋ ಅವಕ್ಕೆ" ಎಂದು ಬುಟ್ಟಿ ಯಲ್ಲಿ ಸಗಣಿ ಹೊತ್ತು ನಡೆದಳು.

ಗುಡಿಗೆ ಹಿಂದಕ್ಕೆ ಬಂದವಳು ಬೆಳ್ಳಿಗಷ್ಟು ಹೊಗೆಸೊಪ್ಪನ್ನು ಮುರಿದು ಕೊಡುವ ಎಂದು ಅವಳ ಗುಡಿ ಕಡೆ ನಡೆದಳು. ದೂರದಿಂದಲೇ ಬೆಳ್ಳಿಯ

ಗುಡಿಯಲ್ಲಿ ಅವಳ ಅಪ್ಪ ಅವ್ವ ಕಿರುಚುವುದು ಕೇಳಿತು. 'ಅಯ್ಯೋ ! ಜಡ ಬಂದರೆ ಯಾಪಟ್ಟು ಕಿರುಚುತಾನೆ ಅಪ. ಇವನನ್ನೂ ದಯ್ಯ ಮೆಟ್ಟಿತೊ ಕಾಣೆ' ಎಂದು 'ಬೆಳ್ಳೀ' ಎಂದು ಕರೆಯುತ್ತ ಬಂದು ನೋಡಿದರೆ ಬೆಳ್ಳಿ ಅಪ್ಪ ಅವ್ವನ ಬಳಿ ತಲೆಮೇಲೆ ಕೈ ಹೊತ್ತು ಕೂತಿದ್ದಳು. "ಅಗ್ರಹಾರದಾಗೂ ಹೆಂಗೆ ಇಲಿ ದಿಬ್ಬಣ ಹೊಂಟವೆ" ಎಂದು ಹೇಳಬಂದಳು. ಅವಾಕ್ಕಾಗಿ ನಿಂತಳು. ಹೊಗೆಸೊಪ್ಪನ್ನು ಮುರಿದು "ತಗ ಬಾಯಿಗೆ. ಅಪ್ಪ ಕೊಟ್ಟರು" ಎಂದು ಕೊಡತಳು. ಬೆಳ್ಳಿ ಹೊಗೆಸೊಪ್ಪನ್ನು ತಿಕ್ಕಿ ಬಾಯಿಗೆ ಹಾಕಿ ಕೊಂಡು :

"ಪಿಳ್ಳಗಿವತ್ತು ಮೈಮೇಲೆ ಗಣಾ ಬಂದರೆ ಕ್ಯಾಳಬಾಕು. ನಂಗ್ಯಾಕೊ ಭಯವಾತ್ತೈತೆ ಕಣೇ. ಇಲಿ ಹಿಂಗೆ ಹೊಲೇರ ಗುಡೀಗೆ ದಂಡು ಬರೋ ದೆಂದ್ರೇನು, ಚೌಡ ಅವನ ಹೊಲತಿ ಲಕ್ ಎಂದು ಪರಾಣ ಬಿಡೋ ದೆಂದ್ರೇನು, ನನ್ನಪ್ಪ ಅವ್ವನನ್ನ ಹೀಗೆ ದಯ್ಯ ಮೆಟ್ಟೋದೆಂದ್ರೇನು—ಕ್ಯಾಳ ಬಾಕು" ಎಂದಳು.

"ಅಯ್, ನಿಂದೊಂದು. ಸುಮ್ಕಿರು" ಎಂದು ಚಿನ್ನಿ ಬೆಳ್ಳಿಗೆ ಸಮಾಧಾನ ಹೇಳಿದಳು.

* * *

ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಸೂರ್ಯ, ಧಗಧಗನೆ ನೆತ್ತಿಯ ಮೇಲೆ ಪಶುಪತಿ ಕೋಪದಲ್ಲಿ ತೆರೆದ ಹಣೆಗಣ್ಣಿನಂತೆ ಉರಿದು, ಹಸಿವಿ ನಿಂದ ಅರ್ಧಜೀವರಾದ ಬ್ರಾಹ್ಮಣರನ್ನು ದಿಙ್ಮೂಢರನ್ನಾಗಿ ಮಾಡಿ ಕುಕ್ಕರಿಸಿದ. ಪ್ರಾಣೇಶಾಚಾರ್ಯರ ಆಗಮನವನ್ನು ನಿರೀಕ್ಷಿಸುತ್ತ, ಪೆದ್ದು ಪೆದ್ದಾಗಿ ಬೀದಿಯ ಝಳ ಝಳ ಬಿಸಿಲನ್ನು ನೋಡುತ್ತ ಕೂತ ಕಣ್ಣುಗಳ ಎದುರು ಬಿಸಿಲುಕುದುರೆಗಳು ನರ್ತಿಸಿದವು. ಉತ್ಕಟವಾಗಿದ್ದ ಭೀತಿ ಮತ್ತು ಹಸಿವು ಹೊಟ್ಟೆಯಲ್ಲಿ ಗುಮ್ಮನಂತೆ ಅಡಗಿ, ನಿರಾಕಾರವಾದ ಕಳವಳಮಾತ್ರವಾಗಿ—ಮಾರುತಿಯ ಅಪ್ಪಣೆಯನ್ನು ಪಡೆಯಹೋದ ಪ್ರಾಣೇಶಾಚಾರ್ಯರ ವ್ಯಕ್ತಿತ್ವದ ಸುತ್ತ ಬ್ರಾಹ್ಮಣರ ಜೀವಗಳು ಬಾವಲಿ ಗಳಂತೆ ನೇತುಬಿದ್ದವು. ಏನೋ ಭರವಸೆ : ಇನ್ನೊಂದು ರಾತ್ರೆ ನಾರಣಪ್ಪನ ಹೆಣವನ್ನಿಟ್ಟುಕೊಂಡಿರಬೇಕಾದ ಪ್ರಸಂಗ ಬರಲಿಕ್ಕಿಲ್ಲವೆಂಬ ನಂಬಿಕೆ. ಉಗ್ರಾಣದ ಅಕ್ಕಿಯ ದೋಣಿಯಲ್ಲಿ ಸತ್ತುಬಿದ್ದಿದ್ದ ಇಲಿಯನ್ನು ಬಾಲ

ದಿಂದೆತ್ತಿ, ಸೆರಗಿನಿಂದ ಮೂಗು ಮುಚ್ಚಿಕೊಂಡು ಹೊರಗೆಸೆಯಲೆಂದು ಹೋದ ಸೀತಾದೇವಿ, ಗವ್ವೆಂದು ಒಂದು ಹದ್ದು ಈಸಿ ಬಂದು ತನ್ನ ಮನೆಯ ಸೂರಿನ ಮೇಲೆ ಬಂದು ಕೂತಿದ್ದು ಕಂಡು, "ಅಯ್ಯಯ್ಯೋ, ಇವರೇ ಇವರೇ" ಎಂದು ಕಿರುಚಿದಳು. ಹದ್ದು ಹೀಗೆ ಮನೆಯ ಮೇಲೆ ಬಂದು ಕೂರೋದು ಸಾವಿನ ಶಕುನ. ಹಿಂದೆ ಎಂದೂ ಹೀಗಾದ್ದಿಲ್ಲ. ಗರುಡಾಚಾರ್ಯ ಓಡಿಬಂದು ಹದ್ದನ್ನು ನೋಡಿ ಕುಸಿದುಬಿಟ್ಟ. ಸೀತಾದೇವಿ "ಅಯ್ಯೋ, ನನ್ನ ಮಗನಿಗೆ ಏನಾಗಿಬಿಟ್ಟಿತೋ...." ಎಂದು ಅಳಲು ಪ್ರಾರಂಭಿಸಿದಳು. ಗರುಡಾಚಾರ್ಯ ತಾನು ಹಿಂದಿನ ದಿನ ಮಾರುತಿಗೆ ಬಂಗಾರ ಸೇರಲೆಂದು ದಾಸಾಚಾರ್ಯ ಹೇಳಿದ ಮಾತನ್ನು ಮನಸ್ಸಿನೊಳಗೆ ನಿರಾಕರಿಸಿದ್ದರಿಂದ ಹೀಗಾಗಿರಬೇಕೆಂದು ಅತ್ಯಂತ ಭಯದಲ್ಲಿ ಹೆಂಡತಿಯ ಕೈ ಹಿಡಿದು ಎದ್ದು ಒಳಗೆ ಬಂದು, ಕಾಣಿಕೆಯನ್ನು ದೇವರ ಎದುರಿಟ್ಟು, ನಮಸ್ಕಾರ ಮಾಡಿ "ತಪ್ಪಾಯಿತಪ್ಪ. ನಿನ್ನ ಬಂಗಾರ ನಿನಗೇ ಇರಲಿ, ಮನ್ನಿಸಿಬಿಡು" ಎಂದು ಪ್ರಾರ್ಥಿಸಿದ. ಮತ್ತೆ ಹೊರಗೆ ಬಂದು ಹದ್ದನ್ನು ಹಾರಿಸಲೆಂದು 'ಉಶ್ ಉಶ್' ಎಂದ. ಸೀತಾದೇವಿ ಎಸೆದಿದ್ದ ಇಲಿಯನ್ನು ಸೂರಿಂಗೆತ್ತಿಕೊಂಡು ಹೋಗಿ ಉಣ್ಣುತ್ತಿದ್ದ ಹದ್ದು ನಿರ್ಭಯವಾಗಿ, ನಾಚಿಕೆಗೆಟ್ಟ ನೆಂಟನ ಹಾಗೆ, ಕೂತೇಬಿಟ್ಟಿತು. ಗರುಡಾಚಾರ್ಯ ಕಣ್ಣು ಕುಕ್ಕುವ ಬಿಸಿಲಿನಲ್ಲಿ ಕತ್ತೆತ್ತಿ ನೋಡುತ್ತಾನೆ—ಏನು ನೋಡೋದು —ಹದ್ದು, ಹದ್ದು, ಹದ್ದು, ಆಕಾಶದ ನೀಲಿಯ ತುಂಬ ತೇಲಾಡುವ, ಓಲಾಡುವ, ವೃತ್ತವೃತ್ತ ಸುತ್ತಿ ಕೆಳಗೆ ಬರುತ್ತಿರುವ ಹದ್ದುಗಳು. "ಇವಳೇ, ನೋಡೇ ಇಲ್ಲಿ" ಎಂದು ಕೂಗಿದ. ಸೀತಾದೇವಿ ಓಡಿಬಂದು ಹಣೆಗೆ ಕೈ ಮಾಡಿ ಕಣ್ಣುಗಳನ್ನೆತ್ತಿ 'ಉಶ್' ಎಂದು ನಿಟ್ಟುಸಿರೆಳೆದಳು. ಅವರು ನೋಡುತ್ತಿದ್ದಂತೆ ತನ್ನ ಮನೆಯ ಮೇಲೆ ಕೂತ ಹದ್ದು ನರ್ತಕಿಯಂತೆ ಕತ್ತು ಕೊಂಕಿಸಿ, ಸುತ್ತ ನೋಡಿ, 'ಭರ್‍ರ್' ಎಂದು ಅವರ ಕಾಲಬುಡಕ್ಕೆ ಎಗರಿ, ಉಗ್ರಾಣದಿಂದ ಹಿತ್ತಲಿಗೆ ಓಡಿಬರುತ್ತಿದ್ದ ಇಲಿಯೊಂದನ್ನು ಕುಕ್ಕಿ, ಮತ್ತೆ ಹಾರಿ ಮನೆಯ ಮೇಲೇ ಕೂತಿತು. ದಂಪತಿಗಳ ಪ್ರಾಣ ಒಂದು ಕ್ಷಣ ಜೊತೆಯಾಗಿ ಎಂದೂ ಕಂಪಿಸದ ಹಾಗೆ ಕಂಪಿಸಿ—ಇಬ್ಬರೂ ಕೂತುಬಿಟ್ಟರು. ಆಕಾಶದಲ್ಲಿ ಹಾರಾಡುತ್ತಿದ್ದ ಹದ್ದುಗಳಲ್ಲಿ ಒಂದು ಇಳಿದು ನಾರಣಪ್ಪನ ಮನೆಯ ಮೇಲೆ ಕೂತಿತು. ಕತ್ತನ್ನು ಎತ್ತಿ ಅದರ ದೈತ್ಯ ರೆಕ್ಕೆಗಳನ್ನು ಪಟಪಟನೆ ಬಡಿದು, [illegible]ರವನ್ನೆಲ್ಲ

... SIMHASAN JNANAMANDIR
LIBRARY
...gamawadi Math, Varanasi
Acc. No. ........4956..........

ಹದ್ದುಗಣ್ಣಿನಲ್ಲಿ ಈಕ್ಷಿಸಿತು. ತದನಂತರ ಹಾರುತ್ತಿದ್ದ ಹದ್ದುಗಳೆಲ್ಲ ಇಳಿದು ಮನೆಗೆ ಎರಡೆರಡರಂತೆ, ಮೊದಲೇ ನಿಶ್ಚಯಮಾಡಿಕೊಂಡವಂತೆ ಬಂದು ಕೂತವು. 'ರಪ್ಪನೆ'ನೇ ಕೆಳಗೆ ಹಾರುವುವು; ಇಲಿಯೊಂದನ್ನು ಕೊಕ್ಕಿನಿಂದೆತ್ತಿ ಸೂರಿನ ಮೇಲೆ ಕೂತು ಕುಕ್ಕುತ್ತ ತಿನ್ನುವುವು—ಸ್ಮಶಾನದಲ್ಲಿರಬೇಕಾದ ರಣಹದ್ದುಗಳು ಹೀಗೆ, ಪ್ರಳಯಕಾಲದಲ್ಲೆಂಬಂತೆ, ಅಗ್ರಹಾರಕ್ಕೆ ಎರಗಿದ್ದನ್ನು ಕಂಡು ಅಗ್ರಹಾರದ ಸಮಸ್ತರೂ ಬಾಯಿಬಡಿದವರಂತೆ ಬಂದು ಬೀದಿಯಲ್ಲಿ ನೆರೆದರು. ಎಲ್ಲರ ಮನೆಯ ಮೇಲೂ ಹದ್ದುಗಳು ತಂಗಿದ್ದು ಕಂಡು ಸೀತಾದೇವಿ, 'ಇದು ಬರೀ ನನ್ನ ಮಗನ ಕ್ಷೇಮದ ಬಗ್ಗೆ ಶಕುನವಲ್ಲ' ಎಂದು ಸಮಾಧಾನಿತಳಾದಳು. ವಾಚ್ಯಾತೀತವಾದ ಭಯದಿಂದ ಅಗ್ರಹಾರದ ಬ್ರಾಹ್ಮಣರು, ಹೆಂಗಸರು, ಮಕ್ಕಳು ನಿಂತಿದ್ದು ಎರಡು ಕ್ಷಣ ಮಾತ್ರ: ಮೊದಲು ದುರ್ಗಾಭಟ್ಟ ಹದ್ದುಗಳನ್ನು ಹೆದರಿಸಲೆಂದು 'ಹೋ ಹೋ ಹೋ' ಎಂದು ಕೂಗಿದ. ನಡೆಯಲಿಲ್ಲ. ಎಲ್ಲ ಬ್ರಾಹ್ಮಣರೂ ಒಕ್ಕೊರಲಿನಿಂದ ಕೂಗಿದರು. ಅದೂ ನಡೆಯಲಿಲ್ಲ. ಉಪ್ಪಿಟ್ಟು ತಿಂದು ಆಗತಾನೆ ಪ್ರಸನ್ನನಾಗಿ ಹಿಂದೆ ಬಂದ ದಾಸಾಚಾರ್ಯನಿಗೊಂದು ಉಪಾಯ ಹೊಳೆಯಿತು. 'ಜಾಗಟೆ ತಂದು ಬಾರಿಸಿ' ಎಂದ. ಹುಡುಗರಿಗೆ ಗೆಲುವಾಗಿ, ದೇವರ ಮನೆಯೊಳಕ್ಕೆ ಓಡಿ, ಕಂಚಿನ ಜಾಗಟೆಗಳ ಜೊತೆ ಶಂಖವನ್ನೂ ತಂದರು. ಮಹಾಮಂಗಳಾರತಿಯ ವೇಳೆಯಲ್ಲಿ ಮಾಡುವ ಭಯಂಕರ ಮಂಗಳಶಬ್ದ ಮಧ್ಯಾಹ್ನದ ರುದ್ರಮೌನವನ್ನು ರಣಭೇರಿಯಂತೆ ನುರಿದು ನುಚ್ಚುನೂರು ಮಾಡಿತು. ಐದಾರು ಮೈಲಿ ವಿಸ್ತೀರ್ಣದಲ್ಲಿದ್ದ ಅಗ್ರಹಾರದ ಜನರಿಗೆ ದೂರ್ವಾಸಪುರದಲ್ಲಿ ನಗಾರಿ, ಪೂಜೆ, ಮಂಗಳಾರತಿ ನಡೆಯುತ್ತಿರಬೇಕೆಂಬ ಭ್ರಾಂತಿಯನ್ನು ಕವಿಸಿತು. ರಣಹದ್ದುಗಳು ಆಶ್ಚರ್ಯಪಟ್ಟವರಂತೆ ಅತ್ತ ಇತ್ತ ನೋಡಿ, ರೆಕ್ಕೆಗಳನ್ನು ಬಿಚ್ಚಿ, ಇಲಿಗಳನ್ನು ಕಚ್ಚಿಕೊಂಡು ಹಾರಿದವು. ಆಕಾಶದಲ್ಲಿ ತೇಲುತ್ತ ಹೊಳೆಯುವ ಚುಕ್ಕೆಗಳಾದುವು. 'ನಾರಾಯಣ' ಎಂದು ಸುಸ್ತಾದ ಬ್ರಾಹ್ಮಣರು ಚಾವಡಿ ಏರಿ, ಹೊದ್ದ ವಸ್ತ್ರದಿಂದ ಮೂಗು ಮುಚ್ಚಿಕೊಂಡು, ಬೆವರೊರಸಿಕೊಂಡರು. ಸೀತಾದೇವಿ ಮತ್ತು ಅನಸೂಯ ಅವರ ಗಂಡಂದಿರ ಬಳಿ ಹೋಗಿ, "ಬಂಗಾರದ ವಿಷಯ ಹಾಳಾಗಲಿ. ಕಂಡವರ ಆಸ್ತಿ ನಮಗೇಕೆ. ಮೊದಲು ಶವವನ್ನು ತೆಗೆದು ಸಂಸ್ಕಾರ ಮಾಡಿ. ನಾರಣಪ್ಪನ ಪ್ರೇತವೇ ಈ ಹದ್ದುಗಳನ್ನು ಕರೆಯುತ್ತಿದೆ" ಎಂದು ಕಣ್ಣೀರಿಟ್ಟು ಬೇಡಿದರು. ಗಾಳಿ ಬೀಸುತ್ತಿರಲಿಲ್ಲ

ವಾದ್ದರಿಂದ ಮನೆಮನೆಯಲ್ಲೂ ಮಡುವುಗಟ್ಟಿ ನಿಂತ ಧಗೆ, ಭೀತಿ, ಹಸಿವಿನಲ್ಲಿದ್ದವರನ್ನು ನಿರಾಕಾರ ಪ್ರೇತದಂತೆ ಕಾಡಿತು. ಜನ್ಮಜನ್ಮಾಪಿ ಕಳೆದುಕೊಳ್ಳಲಾರದ ಅಶುಚಿಯಲ್ಲಿದ್ದಂತೆನಿಸಿ, ನೇಮ ನಿಷ್ಠೆಯ ಬ್ರಾಹ್ಮಣರು ಕಂಗಾಲಾದರು.

* * *

ಮಧ್ಯಾಹ್ನದ ಉರಿ ಏರಿ ಮರದ ನೆರಳಿನಲ್ಲಿ ಕೂತಿದ್ದ ಚಂದ್ರಿಗೆ ತುಂಬ ದಣಿವಾಯಿತು. ಮಡಲಿನಲ್ಲಿದ್ದ ರಸಬಾಳೆಹಣ್ಣಿಗೆ ಕೈಹಾಕಿದವಳು ಗುಡಿಯಲ್ಲಿ ಪ್ರಾಣೇಶಾಚಾರ್ಯರು ಹಸಿದು ಪೂಜೆಯಲ್ಲಿ ಕೂತಿದ್ದಾಗ ತಾನೇನು ತಿನ್ನುವುದೆಂದು ಸುಮ್ಮನಾದಳು. ದೂರದಿಂದ ಶಂಖ ಜಾಗಟೆಯ ಧ್ವನಿ ಕೇಳಿ ಆಶ್ಚರ್ಯವಾಯಿತು: ಸುತ್ತ ಕಣ್ಣುಹಾಯಿಸಿದಳು. ಗಾಳಿ ನಿಶ್ಚಲವಾಗಿ ಮರದೆಲೆಗಳೂ ಅಲುಗುತ್ತಿರಲಿಲ್ಲ. ಅಲ್ಲಾಡುವುದೆಂದರೆ ದೂರದ ಶುಭ್ರ ತಿಳಿನೀಲಿಯಲ್ಲಿ ಓಲಾಡುವ ಹದ್ದುಗಳು ಮಾತ್ರ. ಪ್ರಾಣೇಶಾಚಾರ್ಯರು ಮತ್ತೊಂದು ಕೊಡ ನೀರನ್ನು ಬಳಬಳನೆ ಮೈಗೆ ಸುರಿದುಕೊಂಡದ್ದು ಕಂಡು 'ನನ್ನಿಂದೆಷ್ಟು ತೊಂದರೆ' ಎಂದು ಯಾತನೆಯಾಯಿತು. ಅವಳು ಅರಿಯುವುದರೊಳಗೆ ಕೈ ಬಾಳೆಹಣ್ಣೊಂದನ್ನು ಸುಲಿದು ನಾಜೂಕಾಗಿ, ತೆರೆದ ಅವಳ ಬಾಯಲ್ಲಿಟ್ಟಿತ್ತು. 'ನನಗೆ ದೋಷವಿಲ್ಲ' ಎಂದು ಸಮಾಧಾನ ಹೇಳಿಕೊಂಡಳು.

* * *

ತಿರುಗಿ ತಿರುಗಿ ಹದ್ದುಗಳು ಹಟಹಿಡಿದು ಬಂದು ಕೂತವು! ಬ್ರಾಹ್ಮಣರು ಮತ್ತೆ ಹೊರಬಂದು ಜಾಗಟೆ ಬಾರಿಸಿ ಶಂಖ ಊದಿದರು. ಸಂಜೆಯವರೆಗೂ ಈ ಕಾಳಗ ನಡೆಯಿತು. ದಣಿದವರೆಂದರೆ ಬ್ರಾಹ್ಮಣರು ಮಾತ್ರ; ಆರ್ತರಾಗಿ ಕಾದರೂ ಪ್ರಾಣೇಶಾಚಾರ್ಯರ ಸುಳಿವೇ ಇಲ್ಲವಲ್ಲ! ಇನ್ನೊಂದು ರಾತ್ರಿಯನ್ನು ಹೇಗೆ ಕಳೆಯುವುದಪ್ಪ ಎಂಬ ಉತ್ಕಟ ಸಂಕಟ ಮರಳಿ—ಅಗ್ರಹಾರದಲ್ಲಿ ಕತ್ತಲಾಗಿ—ಹದ್ದುಗಳು ಮರೆಯಾದವು.

# ಅಧ್ಯಾಯ : ಹತ್ತು

ಪ್ರಸಾದಕ್ಕೆಂದು ಕಾಯುತ್ತ ಕೂತ ಪ್ರಾಣೇಶಾಚಾರ್ಯರು ಕಂಗೆಟ್ಟರು. 'ಸಂಸ್ಕಾರವಿಲ್ಲದೆ ಶವ ಕೊಳೆಯುತ್ತಿದೆ; ಮಾರುತಿ, ಎಷ್ಟು ಹೊತ್ತು ನಿನ್ನ ಪರೀಕ್ಷೆ' ಎಂದು ಯಾಚಿಸಿದರು. 'ಕೂಡದು ಎಂದು ನಿನ್ನ ಮತವಾದರೆ ಎಡ ಪ್ರಸಾದವನ್ನಾದರೂ ದಯಮಾಡು' ಎಂದು ಬೇಡಿದರು. ಕಾಡಿದರು. ದೇವರನ್ನು ಒಲಿಸುವ ಪ್ರೇಮಭಾವದ ಕೀರ್ತನೆಗಳನ್ನು ಹಾಡಿದರು. ಮಗು ವಾದರು. ಹೆಂಡತಿಯಾದರು. ತಾಯಿಯಾದರು. ಮತ್ತೆ ದೇವರನ್ನು ದೂರುವ, ಅವನ ನೂರೊಂದು ತಪ್ಪುಗಳನ್ನು ಹೇಳಿ ಕೊಂಡಾಡುವ ಕೀರ್ತನೆಗಳನ್ನೆಲ್ಲ ನೆನೆದರು. ಆಳೆತ್ತರದ ಮಾರುತಿ ಅಂಗೈ ಮೇಲೆ ಲಕ್ಷ್ಮಣನ ಪ್ರಾಣವನ್ನುಳಿಸುವ ಸಂಜೀವಿನಿ ಮೂಲಿಕೆಯುಳ್ಳ ಪರ್ವತ ವನ್ನೆತ್ತಿ ನಿಶ್ಚಲ ನಿಂತ. ಉದ್ದಂಡ ಎರಗಿ ಪ್ರಾಣೇಶಾಚಾರ್ಯರು ಹಲುಬಿ ದರು. ಸಂಜೆಯಾಯಿತು. ಕತ್ತಲಾಯಿತು. ನೀಲಾಂಜನದ ಬೆಳಕಿನಲ್ಲಿ ಪುಷ್ಪಾಲಂಕೃತ ಮಾರುತಿ ಜಗ್ಗಲಿಲ್ಲ; ಎಡಪ್ರಸಾದವನ್ನೂ ಕೊಡಲಿಲ್ಲ, ಬಲಪ್ರಸಾದವನ್ನೂ ಕೊಡಲಿಲ್ಲ. 'ಧರ್ಮಶಾಸ್ತ್ರದಲ್ಲೂ ನನಗೆ ಉತ್ತರ ಸಿಗಲಿಲ್ಲ, ನಿನ್ನಿಂದಲೂ ಸಿಗಲಿಲ್ಲ—ನಾನು ಅಪಾತ್ರನೇನು ಹಾಗಾದರೆ' ಎಂದು ಸಂಶಯಪಟ್ಟರು. 'ಯಾವ ಮುಖದಿಂದ ನನ್ನ ಮೇಲೆ ನಂಬಿಕೆ ಯಿಟ್ಟವರನ್ನು ಹೋಗಿ ನೋಡಲಿ' ಎಂದು ಅವಮಾನಿತರಾದರು. 'ನನ್ನನ್ನೇ ಪರೀಕ್ಷಿಸುತ್ತಿದ್ದೀಯಲ್ಲ' ಎಂದು ಮಾರುತಿಯನ್ನು ಬಯ್ದರು. ಕತ್ತಲು ಗಾಢವಾದಂತೆ, ಇದು ಕೃಷ್ಣಪಕ್ಷ ಎಂದು ಅರಿತು—ಇದನ್ನು ನನ್ನ ಪರೀಕ್ಷೆ ಯೆಂದು ಅರಿಯಬೇಡಪ್ಪ, ಕೊಳೆಯುತ್ತಿರುವ ಶವವನ್ನು ನೆನಪಿಟ್ಟುಕೊ— ಎಂದು ಬುದ್ಧಿ ಹೇಳಿದರು. ಮಾರುತಿ ಯಾವುದಕ್ಕೂ ಜಗ್ಗದೆ ಪರ್ವತದ ಕಡೆ ಮುಖ ತಿರುಗಿಸಿ ನಿಂತ. ಆಚಾರ್ಯರಿಗೆ ಥಟ್ಟನೆ ತನ್ನ ಹೆಂಡತಿಗೆ ಔಷಧ ಕೊಡಬೇಕೆಂದು ನೆನಪಾಯಿತು. ಕಣ್ಣುಗಳಲ್ಲಿ ನೀರು ಬರುವು ದೊಂದು ಬಾಕಿ—ನಿರಾಶೆಯಿಂದ ಎದ್ದು ನಿಂತರು. ಕಾಲು ಕೂತು ಮರ ಗಟ್ಟಿತ್ತು. ಕ್ಷೀಣರಾಗಿ ಮೆಲ್ಲಮೆಲ್ಲನೆ ನಡೆದರು.

ಸ್ವಲ್ಪ ದೂರ ನಡೆದಮೇಲೆ ದಟ್ಟವಾದ ಕತ್ತಲಿನ ಕಾಡಿನಲ್ಲಿ ಹಿಂದಿನಿಂದ ಹೆಜ್ಜೆ ಸಪ್ಪಳವಾದಂತಾಗಿ ನಿಂತರು. ಕೈಬಳೆಯ ಶಬ್ದ. ಆಲಿಸಿದರು. 'ಯಾರು?' ಎಂದರು. ಕಾದರು.

'ನಾನು' ಎಂದಳು ಸಂಕೋಚದಲ್ಲಿ ಸಣ್ಣಗಾಗಿ ಚಂದ್ರಿ.

ಪ್ರಾಣೇಶಾಚಾರ್ಯರಿಗೆ ಒಮ್ಮೆಲೆ ಕಾಡು ಕತ್ತಲಿನಲ್ಲಿ ಹೀಗೆ ಹೆಣ್ಣೊಬ್ಬಳು ಬಳಿ ನಿಂತಿರುವುದರಿಂದ ಒಂದು ತರಹವಾಯಿತು. ಏನಾದರೂ ಅನ್ನಬೇಕೆಂದು ಮಾತು ಹುಡುಕಿ, ತನ್ನ ಪಾಡು ನೆನೆದು ದುಃಖವಾಗಿ, 'ಮಾರುತಿ, ಮಾರುತಿ....' ಎನ್ನುತ್ತ ನಿಂತರು.

ಚಂದ್ರಿಗೆ ಅವರ ಮೃದುವಾದ, ಗದ್ಗದಿತವಾದ ಧ್ವನಿ ಕೇಳಿ ತುಂಬ ಮರುಕ ಉಕ್ಕಿತು. ಪಾಪ. ಹಸಿದು, ಕಂಗೆಟ್ಟು, ತನಗಾಗಿ ಒದ್ದಾಡಿ ಬಡವಾಗಿದ್ದಾನೆ ಬ್ರಾಹ್ಮಣ. ಅವರ ಕಾಲನ್ನು ಭದ್ರವಾಗಿ ಹಿಡಿದು ನಮಸ್ಕಾರ ಮಾಡಬೇಕೆನ್ನಿಸಿತು. ಮರುಕ್ಷಣವೇ ಮುಂದೆ ಬಂದು ಬಿದ್ದಳು. ಕತ್ತಲೆಯಲ್ಲಿ ಕಣ್ಣು ಕಾಣಿಸದ್ದರಿಂದ, ಉಮ್ಮಳದಲ್ಲೆಂಬಂತೆ ಅವಳು ಬಾಗಿದ್ದರಿಂದ, ಪಾದದ ಬದಲು ಅವರ ಮೊಣಕಾಲು ಅವಳ ಎದೆಗೆ ತಾಕಿತು. ಮುಗ್ಗರಿಸಿದ ವೇಗಕ್ಕೆ ಕುಪ್ಪಸದ ಗುಂಡಿಗಳು ಹರಿದವು. ಅವಾಕ್ಕಾಗಿ ಅವರ ತೊಡೆಯಮೇಲೆ ತಲೆಯಿಟ್ಟು ಕಾಲುಗಳನ್ನು ತಬ್ಬಿಕೊಂಡಳು. ಉಕ್ಕಿಬಂದ ಭಕ್ತಿ, ಹೆಣ್ಣಿನ ಸುಖವನ್ನೇ ಕಾಣದ ಬ್ರಾಹ್ಮಣ ಎನ್ನುವ ಮರುಕ, ಈ ಅಗ್ರಹಾರದಲ್ಲಿ ನೀವಲ್ಲದೆ ನನ್ನ ಹಿತಚಿಂತಕರು ಯಾರೂ ಇಲ್ಲ ಎನ್ನುವ ನಿಸ್ಸಹಾಯಕತೆ—ಒಟ್ಟಿಗೇ ಕೂಡಿ ಅತ್ತಳು. ಪ್ರಾಣೇಶಾಚಾರ್ಯರಿಗೆ ಪಶ್ಚಾತ್ತಾಪ, ಥಟ್ಟನೇ ಪರಕೀಯಳಾದ ಯೌವನದ ಹೆಣ್ಣೊಬ್ಬಳ ಬಿಗಿಯಾದ ಸ್ಪರ್ಶದಿಂದ ತಬ್ಬಿಬ್ಬೆನಿಸಿ ಆಶೀರ್ವದಿಸಲೆಂದು ಬಾಗಿ ಕೈ ನೀಡಿದರು. ಚಾಚಿದ ಕೈಗೆ ಅವಳ ಬಿಸಿ ಉಸಿರು, ಕಣ್ಣೀರು ತಾಗಿ, ರೋಮಾಂಚದ ಮಾರ್ದವ ಉಕ್ಕಿ, ಅವಳ ಚೆಲ್ಲಿದ ಕೂದಲನ್ನು ಸವರಿದರು. ಆಶೀರ್ವಾದದ ಸಂಸ್ಕೃತ ಮಾತು ಬಾಯಿಂದ ಹೊರಡಲಿಲ್ಲ. ತನ್ನ ತಲೆಗೂದಲಿನ ಮೇಲೆ ಅವರ ಕೈ ಆಡಿದ್ದರಿಂದ ಚಂದ್ರಿಗೆ ಇನ್ನಷ್ಟು ಆವೇಗವಾಗಿ, ಅವರ ಕೈಗಳನ್ನು ಭದ್ರವಾಗಿ ಹಿಡಿದು, ಎದ್ದುನಿಂತು, ಪಾರಿವಾಳದ ಹಾಗೆ ಡವಗುಟ್ಟುತ್ತಿದ್ದ ತನ್ನ ಎದೆಗಳಿಗೆ ಒತ್ತಿಕೊಂಡಳು.

ತನ್ನ ಕೈಗಳೆಂದೂ ಸ್ಪರ್ಶಿಸದ ಪುಷ್ಟವಾದ ಮೊಲೆಗಳನ್ನು ಮುಟ್ಟಿದ ಕ್ಷಣ ಪ್ರಾಣೇಶಾಚಾರ್ಯರಿಗೆ ಬವಳಿ ಬಂದಂತಾಯಿತು. ಕನಸಿನಲ್ಲೆಂಬಂತೆ ಮೊಲೆಗಳನ್ನು ಒತ್ತಿದರು. ಕೂಡಲೇ ಚಂದ್ರಿ, ಕಾಲು ಬತ್ತಿಬಂದ ಆಚಾರ್ಯರನ್ನು ಅವಚಿಕೊಂಡು ಮೆತ್ತಗೆ ಕೂರಿಸಿದಳು. ಆಚಾರ್ಯರಿಗೆ ಇಷ್ಟು ಹೊತ್ತೂ ಮನಸ್ಸಿಗೆ ಬಾರದಿದ್ದ ಹೊಟ್ಟೆಯ ಹಸಿವು ಜಗ್ಗನೆ

# ಅಧ್ಯಾಯ : ಹತ್ತು

ಪ್ರಸಾದಕ್ಕೆಂದು ಕಾಯುತ್ತ ಕೂತ ಪ್ರಾಣೇಶಾಚಾರ್ಯರು ಕಂಗೆಟ್ಟರು. 'ಸಂಸ್ಕಾರವಿಲ್ಲದೆ ಶವ ಕೊಳೆಯುತ್ತಿದೆ; ಮಾರುತಿ, ಎಷ್ಟು ಹೊತ್ತು ನಿನ್ನ ಪರೀಕ್ಷೆ' ಎಂದು ಯಾಚಿಸಿದರು. 'ಕೂಡದು ಎಂದು ನಿನ್ನ ಮತವಾದರೆ ಎಡ ಪ್ರಸಾದವನ್ನಾದರೂ ದಯಮಾಡು' ಎಂದು ಬೇಡಿದರು. ಕಾಡಿದರು. ದೇವರನ್ನು ಒಲಿಸುವ ಪ್ರೇಮಭಾವದ ಕೀರ್ತನೆಗಳನ್ನು ಹಾಡಿದರು. ಮಗು ವಾದರು. ಹೆಂಡತಿಯಾದರು. ತಾಯಿಯಾದರು. ಮತ್ತೆ ದೇವರನ್ನು ದೂರುವ, ಅವನ ನೂರೊಂದು ತಪ್ಪುಗಳನ್ನು ಹೇಳಿ ಕೊಂಡಾಡುವ ಕೀರ್ತನೆಗಳನ್ನೆಲ್ಲ ನೆನೆದರು. ಆಳೆತ್ತರದ ಮಾರುತಿ ಅಂಗೈ ಮೇಲೆ ಲಕ್ಷ್ಮಣನ ಪ್ರಾಣವನ್ನುಳಿಸುವ ಸಂಜೀವಿನಿ ಮೂಲಿಕೆಯುಳ್ಳ ಪರ್ವತ ವನ್ನೆತ್ತಿ ನಿಶ್ಚಲ ನಿಂತ. ಉದ್ದಂಡ ಎರಗಿ ಪ್ರಾಣೇಶಾಚಾರ್ಯರು ಹಲುಬಿ ದರು. ಸಂಜೆಯಾಯಿತು. ಕತ್ತಲಾಯಿತು. ನೀಲಾಂಜನದ ಬೆಳಕಿನಲ್ಲಿ ಪುಷ್ಪಾಲಂಕೃತ ಮಾರುತಿ ಜಗ್ಗಲಿಲ್ಲ; ಎಡಪ್ರಸಾದವನ್ನೂ ಕೊಡಲಿಲ್ಲ, ಬಲಪ್ರಸಾದವನ್ನೂ ಕೊಡಲಿಲ್ಲ. 'ಧರ್ಮಶಾಸ್ತ್ರದಲ್ಲೂ ನನಗೆ ಉತ್ತರ ಸಿಗಲಿಲ್ಲ, ನಿನ್ನಿಂದಲೂ ಸಿಗಲಿಲ್ಲ—ನಾನು ಅಪಾತ್ರನೇನು ಹಾಗಾದರೆ' ಎಂದು ಸಂಶಯಪಟ್ಟರು. 'ಯಾವ ಮುಖದಿಂದ ನನ್ನ ಮೇಲೆ ನಂಬಿಕೆ ಯಿಟ್ಟವರನ್ನು ಹೋಗಿ ನೋಡಲಿ' ಎಂದು ಅವಮಾನಿತರಾದರು. 'ನನ್ನನ್ನೇ ಪರೀಕ್ಷಿಸುತ್ತಿದ್ದೀಯಲ್ಲ' ಎಂದು ಮಾರುತಿಯನ್ನು ಬಯ್ದರು. ಕತ್ತಲು ಗಾಢವಾದಂತೆ, ಇದು ಕೃಷ್ಣಪಕ್ಷ ಎಂದು ಅರಿತು—ಇದನ್ನು ನನ್ನ ಪರೀಕ್ಷೆ ಯೆಂದು ಅರಿಯಬೇಡಪ್ಪ, ಕೊಳೆಯುತ್ತಿರುವ ಶವವನ್ನು ನೆನಪಿಟ್ಟುಕೊ— ಎಂದು ಬುದ್ಧಿ ಹೇಳಿದರು. ಮಾರುತಿ ಯಾವುದಕ್ಕೂ ಜಗ್ಗದೆ ಪರ್ವತದ ಕಡೆ ಮುಖ ತಿರುಗಿಸಿ ನಿಂತ. ಆಚಾರ್ಯರಿಗೆ ಥಟ್ಟನೆ ತನ್ನ ಹೆಂಡತಿಗೆ ಔಷಧ ಕೊಡಬೇಕೆಂದು ನೆನಪಾಯಿತು. ಕಣ್ಣುಗಳಲ್ಲಿ ನೀರು ಬರುವು ದೊಂದು ಬಾಕಿ—ನಿರಾಶೆಯಿಂದ ಎದ್ದುನಿಂತರು. ಕಾಲು ಕೂತು ಮರ ಗಟ್ಟಿತ್ತು. ಕ್ಷೀಣರಾಗಿ ಮೆಲ್ಲಮೆಲ್ಲನೆ ನಡೆದರು.

ಸ್ವಲ್ಪ ದೂರ ನಡೆದಮೇಲೆ ದಟ್ಟವಾದ ಕತ್ತಲಿನ ಕಾಡಿನಲ್ಲಿ ಹಿಂದಿನಿಂದ ಹೆಜ್ಜೆ ಸಪ್ಪಳವಾದಂತಾಗಿ ನಿಂತರು. ಕೈಬಳೆಯ ಶಬ್ದ. ಆಲಿಸಿದರು. 'ಯಾರು?' ಎಂದರು. ಕಾದರು.

'ನಾನು' ಎಂದಳು ಸಂಕೋಚದಲ್ಲಿ ಸಣ್ಣಗಾಗಿ ಚಂದ್ರಿ.

ಪ್ರಾಣೇಶಾಚಾರ್ಯರಿಗೆ ಒಮ್ಮೆಲೆ ಕಾಡು ಕತ್ತಲಿನಲ್ಲಿ ಹೀಗೆ ಹೆಣ್ಣೊಬ್ಬಳು ಬಳಿ ನಿಂತಿರುವುದರಿಂದ ಒಂದು ತರಹವಾಯಿತು. ಏನಾದರೂ ಅನ್ನಬೇಕೆಂದು ಮಾತು ಹುಡುಕಿ, ತನ್ನ ಪಾಡು ನೆನೆದು ದುಃಖವಾಗಿ, 'ಮಾರುತಿ, ಮಾರುತಿ....' ಎನ್ನುತ್ತ ನಿಂತರು.

ಚಂದ್ರಿಗೆ ಅವರ ಮೃದುವಾದ, ಗದ್ಗದಿತವಾದ ಧ್ವನಿ ಕೇಳಿ ತುಂಬ ಮರುಕ ಉಕ್ಕಿತು. ಪಾಪ. ಹಸಿದು, ಕಂಗೆಟ್ಟು, ತನಗಾಗಿ ಒದ್ದಾಡಿ ಬಡವಾಗಿದ್ದಾನೆ ಬ್ರಾಹ್ಮಣ. ಅವರ ಕಾಲನ್ನು ಭದ್ರವಾಗಿ ಹಿಡಿದು ನಮಸ್ಕಾರ ಮಾಡಬೇಕೆನ್ನಿಸಿತು. ಮರುಕ್ಷಣವೇ ಮುಂದೆ ಬಂದು ಬಿದ್ದಳು. ಕತ್ತಲೆಯಲ್ಲಿ ಕಣ್ಣು ಕಾಣಿಸದ್ದರಿಂದ, ಉಮ್ಮಳದಲ್ಲೆಂಬಂತೆ ಅವಳು ಬಾಗಿದ್ದರಿಂದ, ಪಾದದ ಬದಲು ಅವರ ಮೊಣಕಾಲು ಅವಳ ಎದೆಗೆ ತಾಕಿತು. ಮುಗ್ಗರಿಸಿದ ವೇಗಕ್ಕೆ ಕುಪ್ಪಸದ ಗುಂಡಿಗಳು ಹರಿದವು. ಅವಾಕ್ಕಾಗಿ ಅವರ ತೊಡೆಯಮೇಲೆ ತಲೆಯಿಟ್ಟು, ಕಾಲುಗಳನ್ನು ತಬ್ಬಿಕೊಂಡಳು. ಉಕ್ಕಿಬಂದ ಭಕ್ತಿ, ಹೆಣ್ಣಿನ ಸುಖವನ್ನೇ ಕಾಣದ ಬ್ರಾಹ್ಮಣ ಎನ್ನುವ ಮರುಕ, ಈ ಅಗ್ರಹಾರದಲ್ಲಿ ನೀವಲ್ಲದೆ ನನ್ನ ಹಿತಚಿಂತಕರು ಯಾರೂ ಇಲ್ಲ ಎನ್ನುವ ನಿಸ್ಸಹಾಯಕತೆ—ಒಟ್ಟಿಗೇ ಕೂಡಿ ಅತ್ತಳು. ಪ್ರಾಣೇಶಾಚಾರ್ಯರಿಗೆ ಪಶ್ಚಾತ್ತಾಪ, ಥಟ್ಟನೇ ಪರಕೀಯಳಾದ ಯೌವನದ ಹೆಣ್ಣೊಬ್ಬಳ ಬಿಗಿಯಾದ ಸ್ಪರ್ಶದಿಂದ ತಬ್ಬಿಬ್ಬೆನಿಸಿ ಆಶೀರ್ವದಿಸಲೆಂದು ಬಾಗಿ ಕೈ ನೀಡಿದರು. ಚಾಚಿದ ಕೈಗೆ ಅವಳ ಬಿಸಿ ಉಸಿರು, ಕಣ್ಣೀರು ತಾಗಿ, ರೋಮಾಂಚದ ಮಾರ್ದವ ಉಕ್ಕಿ, ಅವಳ ಚೆಲ್ಲಿದ ಕೂದಲನ್ನು ಸವರಿದರು. ಆಶೀರ್ವಾದದ ಸಂಸ್ಕೃತ ಮಾತು ಬಾಯಿಂದ ಹೊರಡಲಿಲ್ಲ. ತನ್ನ ತಲೆಗೂದಲಿನ ಮೇಲೆ ಅವರ ಕೈ ಆಡಿದ್ದರಿಂದ ಚಂದ್ರಿಗೆ ಇನ್ನಷ್ಟು ಆವೇಗವಾಗಿ, ಅವರ ಕೈಗಳನ್ನು ಭದ್ರವಾಗಿ ಹಿಡಿದು, ಎದ್ದುನಿಂತು, ಪಾರಿವಾಳದ ಹಾಗೆ ಢವಗುಟ್ಟುತ್ತಿದ್ದ ತನ್ನ ಎದೆಗಳಿಗೆ ಒತ್ತಿಕೊಂಡಳು.

ತನ್ನ ಕೈಗಳೆಂದೂ ಸ್ಪರ್ಶಿಸದ ಪುಷ್ಟವಾದ ಮೊಲೆಗಳನ್ನು ಮುಟ್ಟಿದ ಕ್ಷಣ ಪ್ರಾಣೇಶಾಚಾರ್ಯರಿಗೆ ಬವಳಿ ಬಂದಂತಾಯಿತು. ಕನಸಿನಲ್ಲೆಂಬಂತೆ ಮೊಲೆಗಳನ್ನು ಒತ್ತಿದರು. ಕೂಡಲೇ ಚಂದ್ರಿ, ಕಾಲು ಬತ್ತಿಬಂದ ಆಚಾರ್ಯರನ್ನು ಅವಚಿಕೊಂಡು ಮೆತ್ತಗೆ ಕೂರಿಸಿದಳು. ಆಚಾರ್ಯರಿಗೆ ಇಷ್ಟು ಹೊತ್ತೂ ಮನಸ್ಸಿಗೆ ಬಾರದಿದ್ದ ಹೊಟ್ಟೆಯ ಹಸಿವು ಜಗ್ಗನೆ

ಎದ್ದು, ಸಂಕಟವಾಗಿ 'ಅಮ್ಮ' ಎಂದರು. ಚಂದ್ರಿ ಅವರನ್ನು ಎದೆಗಾನಿಸಿಕೊಂಡು, ಮಡಿಲಿನಿಂದ ರಸಬಾಳೆ ಹಣ್ಣುಗಳನ್ನು ತೆಗೆದು, ಸುಲಿದು ತಿನ್ನಿಸಿದಳು. ನಂತರ ತನ್ನ ಸೀರೆಯನ್ನು ಬಿಚ್ಚಿ ಹಾಸಿ ಪ್ರಾಣೇಶಾಚಾರ್ಯರನ್ನು ತಬ್ಬಿಕೊಂಡು ಮಲಗಿ ಗಳಗಳನೆ ಅತ್ತುಬಿಟ್ಟಳು.

## ಅಧ್ಯಾಯ : ಒಂದು

ಆಚಾರ್ಯರಿಗೆ ಎಚ್ಚರವಾದಾಗ ನಡುರಾತ್ರೆ. ಅವರ ತಲೆ ಚಂದ್ರಿಯ ತೊಡೆಗಳ ಮೇಲಿತ್ತು. ಕೆನ್ನೆ ಅವಳ ನಗ್ನ ಕಿಪ್ಪೊಟ್ಟೆಗೆ ಒತ್ತಿಕೊಂಡಿತ್ತು. ಚಂದ್ರಿ ತನ್ನ ಬೆರಳುಗಳಿಂದ ಅವರ ತಲೆ ಕಿವಿ ಕೆನ್ನೆಗಳನ್ನು ಸವರುತ್ತಿದ್ದಳು.

ತಾನೇ ತನಗೆ ಥಟ್ಟನೆ ಅಪರಿಚಿತನಾಗಿಬಿಟ್ಟಂತಾಗಿ ಕಣ್ಣು ಬಿಟ್ಟು ಆಚಾರ್ಯರು ಯೋಚಿಸಿದರು. ಎಲ್ಲಿದ್ದೇನೆ? ಇಲ್ಲಿಗೆ ಹೇಗೆ ಬಂದೆ? ಇದು ಯಾವ ಕತ್ತಲು? ಇದು ಯಾವ ಕಾಡು? ಇವಳು ಯಾರು?

ತನ್ನ ಬಾಲ್ಯಕ್ಕೊಮ್ಮೆಗೆ ಮುಗುಚಿಕೊಂಡುಬಿಟ್ಟಂತೆನಿಸಿ ಅಮ್ಮನ ತೊಡೆಯ ಮೇಲೆ ಮಲಗಿ ದಣಿವು ಕಳೆದುಕೊಳ್ಳುತ್ತಿದ್ದುದು ಮರುಕಳಿಸಿತು. ಬೆರಗಿನಿಂದ ನೋಡಿದರು: ಗರಿ ಬಿಚ್ಚಿದ ನವಿಲಿನಂತಹ ಅಕ್ಷಯ ನಕ್ಷತ್ರದ ರಾತ್ರಿ; ಸಪ್ತಋಷಿಗಳ ಮಂಡಲ; ವಸಿಷ್ಠರ ಪಕ್ಕದಲ್ಲಿ ನಾಚಿ ಮಿನುಗುವ ಅರುಂಧತಿ. ಕೆಳಗೆ ಹುಲ್ಲಿನ, ಹಸಿಮಣ್ಣಿನ, ವಿಷ್ಣುಕಾಂತಿಯ, ಸುಗಂಧಿಯ, ಹೆಣ್ಣಿನ ಬೆವರಿದ ಮೈಯ ವಾಸನೆ. ಕತ್ತಲು ಆಕಾಶ, ನೆಮ್ಮದಿಯಿಂದ ನಿಂತ ವೃಕ್ಷಗಳು. ಕನಸೋ ಎಂದು ಕಣ್ಣುಜ್ಜಿಕೊಂಡರು. ಎಲ್ಲಿಂದ ಇಲ್ಲಿಗೆ ಬಂದೆ, ಎಲ್ಲಿಗೆ ಹೋಗಬೇಕೆಂದು ಬಂದು ಮರೆತುಬಿಟ್ಟೆ ಎಂದು ಕಳವಳಿಸಿದರು. 'ಚಂದ್ರಿ' ಎಂದು ಕರೆದು ಪೂರ್ಣ ಎಚ್ಚರವಾದರು. ಆಲಿಸಿದರು. ಕಾಡಿನಲ್ಲಿ, ಮೌನದಲ್ಲಿ, ಗುಟ್ಟುಗಳನ್ನು ಹೇಳುತ್ತಿರುವಂತಹ ಚಿಲಿಚಿಲಿ ಎನ್ನುವ ಕತ್ತಲು. ಚಿಲಿಪಿಲಿ ಎನ್ನುವ ಶಬ್ದ 'ಮಿಣಕ್' 'ಮಿಣಕ್' ಎನ್ನುವ ಬೆಳಕಾಗಿ, ರಾಶಿರಾಶಿಯಾದ ಮಿಣುಕುಹುಳುಗಳು ತೇರಿನಂತೆ ಏರಿಬಂದು ಪೊದೆಯಿಂದ ಹೊರಗೆ ಪ್ರತ್ಯಕ್ಷವಾದವು. ಕಣ್ಣು ತುಂಬುವಂತೆ, ಕಿವಿ ತುಂಬುವಂತೆ ಆಲಿಸುತ್ತ ನೋಡಿದರು: ಸುತ್ತಲೂ ಮಿಣುಕುಹುಳುಗಳ ರಾಶಿರಾಶಿ ತೇರು. 'ಚಂದ್ರೀ' ಎಂದು ಅವಳ ಹೊಟ್ಟೆಯನ್ನು ಮುಟ್ಟಿ ಎದ್ದು ಕೂತರು.

ಪ್ರಾಣೇಶಾಚಾರ್ಯರು ತನ್ನನ್ನೆಲ್ಲಿ ಬಯ್ದುಬಿಡುವರೋ, ಹಳಿದುಬಿಡುವರೋ ಎಂದು ಚಂದ್ರಿಗೆ ಭಯ. ಅಲ್ಲದೆ ತಾನು ಫಲವತಿಯಾಗಿರಬಹುದೇನೋ ಎನ್ನುವ ಆಸೆ. ತಾನು ಪುಣ್ಯಾತಿಗಿತ್ತಿಯಾದೆ ಎನ್ನುವ ಕೃತಜ್ಞತೆ. ಆದರೆ ಅವಳು ಮಾತಾಡಲಿಲ್ಲ.

ಪ್ರಾಣೇಶಾಚಾರ್ಯರೂ ಬಹಳ ಹೊತ್ತು ಮಾತಾಡಲಿಲ್ಲ. ಕೊನೆಗೆ ಎದ್ದು ನಿಂತು ಅಂದರು:

"ಚಂದ್ರಿ, ಏಳು ಹೋಗುವ. ನಾಳೆ ಬೆಳಿಗ್ಗೆ ಬ್ರಾಹ್ಮಣರು ಸೇರಿದಾಗ ಹೀಗಾಯಿತೆಂದು ಹೇಳಿಬಿಡುವ. ನೀನೇ ಹೇಳಿಬಿಡು. ಅಗ್ರಹಾರಕ್ಕೆ ಒಂದು ನಿಶ್ಚಯ ಮಾಡಿ ಹೇಳುವ ಅಧಿಕಾರಾನ್ನ ನಾನು...."

ಏನು ಹೇಳುವುದು ಸರಿಯೆಂದು ತಿಳಿಯದೆ ಪ್ರಾಣೇಶಾಚಾರ್ಯರು ತತ್ತರಿಸಿ ನಿಂತರು:

"ಕಳೆದುಕೊಂಡೆ. ನಾಳೆ ನನಗೆ ಧೈರ್ಯ ಬಾರದಿದ್ದರೆ ನೀನೇ ಹೇಳಿಬಿಡಬೇಕು. ನನ್ನ ಮಟ್ಟಿಗೆ ಸಂಸ್ಕಾರ ಮಾಡಲು ನಾನು ಸಿದ್ಧ. ಉಳಿದ ಬ್ರಾಹ್ಮಣರಿಗೆ ಹೇಳುವ ಅಧಿಕಾರ ನನಗೆ ಇಲ್ಲ. ಅಷ್ಟೆ."

ಮಾತನ್ನಾಡಿಬಿಟ್ಟಮೇಲೆ ಪ್ರಾಣೇಶಾಚಾರ್ಯರಿಗೆ ತಮ್ಮ, ದಣಿವೆಲ್ಲ ಕಳೆದುಬಿಟ್ಟಂತಾಯಿತು.

* * *

ಒಟ್ಟಿಗೆ ಹೊಳೆ ದಾಟಿ, ನಾಚಿಕೆಯಾದ್ದರಿಂದ ಪ್ರಾಣೇಶಾಚಾರ್ಯರನ್ನು ಮುಂದೆ ಬಿಟ್ಟು ತಾನು ಹಿಂದಾಗಿ, ಅಗ್ರಹಾರವನ್ನು ಸೇರಿದಮೇಲೆ ಚಂದ್ರಿಗೆ ಕಳವಳವಾಯಿತು: ತಾನು ಮಾಡಿದ್ದೆಲ್ಲ ಹೀಗಾಗುತ್ತದಲ್ಲ! ಒಳ್ಳೆ ಬುದ್ಧಿಯಿಂದ ಬಂಗಾರ ಕೊಟ್ಟೆ; ಹಾಗಾಯ್ತು. ಈಗ ಅವರ ಸಂಸ್ಕಾರ ಮಾಡಲಿಕ್ಕೆಂದು ಪ್ರಯತ್ನಿಸುತ್ತಿದ್ದ ಆಚಾರ್ಯರನ್ನ....ಆದರೆ ಸ್ವಭಾವತಃ ಸುಖಿಯಾದ ಚಂದ್ರಿಗೆ ಆತ್ಮಾವಹೇಳನದ ಪದ್ಧತಿಯ ಮಾತುಗಳ ಪರಿಚಯವಿರಲಿಲ್ಲ. ಕತ್ತಲೆಯಲ್ಲಿ ಅಗ್ರಹಾರದ ಬೀದಿ ನಡೆಯುತ್ತಿದ್ದಂತೆ ಆ ಕತ್ತಲಿನ ಕಾಡಿನಲ್ಲಿ—ನಿಂತದ್ದು, ಬಾಗಿದ್ದು, ಕೊಟ್ಟದ್ದು, ಕೊಂಡದ್ದು, ಬಚ್ಚಿಟ್ಟುಕೊಂಡ ಪರಿಮಳದ ಹೂವಿನಂತೆ ಧನ್ಯಭಾವವನ್ನು ಮಾತ್ರ ತರುತ್ತದೆ. ಪಾಪ ಆಚಾರ್ಯರಿಗೆ ಹೀಗೆನ್ನಿಸುತ್ತದೋ, ಇಲ್ಲವೋ. ಇನ್ನು ಅವರ ಜಗುಲಿಗೆ ಪತ್ತೆ ಹೋಗಿ ಅವರ ಮನಸ್ಸಿಗೆ ನೋವುಂಟುಮಾಡಬಾರದು. ಅಲ್ಲದೆ ತನ್ನ ಬಾಳಿಗೆ ಆಕಸ್ಮಾತ್ತಾಗಿ ನುಗ್ಗಿ ಬಂದ ಈ ಅದೃಷ್ಟವನ್ನ ಆಚಾರ್ಯರು ಹೇಳಿದ ಹಾಗೆ ಅಗ್ರಹಾರದ ಗೊಡ್ಡುಬ್ರಾಹ್ಮಣರ ಎದುರಿನಲ್ಲಿ ಹೇಳಿ, ಬೀದಿಗೆಳೆದು, ಆಚಾರ್ಯರ ಮಾನ ಕಳೆಯುವಂಥವಳೇ ತಾನು? ಸರಿ—ಆದರೆ ಈಗ ನನ್ನ ಗತಿ? ಆಚಾರ್ಯರಲ್ಲಿಗೆ ಹೋಗೋದು ಸರಿಯಲ್ಲ; ಈಗ ಶವವಾದ ತನ್ನ ಯಜಮಾನನ ಮನೆಗೆ ಹೋಗಲು ಭಯ. ಏನು ಮಾಡಲಿ?

ಎಷ್ಟೆಂದರೂ ತನ್ನ ಕೂಡ ಸಹವಾಸ ಮಾಡಿದವರಲ್ಲವೆ ಎಂದು ಧೈರ್ಯ

ತಂದುಕೊಂಡಳು. ಅಲ್ಲಿಗೆ ಹೋಗಿ ನೋಡೋದು, ಧೈರ್ಯವಾದರೆ ಚಾವಡಿಯಲ್ಲಿ ಮಲಗಿರೋದು, ಇಲ್ಲವೆ ಆಚಾರ್ಯರ ಜಗುಲಿಗೇ ಮತ್ತೆ ಬರೋದು, ಏನು ಮಾಡಲಿಕ್ಕಾಗುತ್ತೆ ಆಪತ್ತಿನಲ್ಲಿ—ಎಂದು ವಾದಿಸಿಕೊಂಡು ಸೀದ ತನ್ನ ಮನೆಗೆ ಹೋದಳು. ಚಪ್ಪರದ ಕೆಳಗೆ ನಿಂತು ಆಲಿಸಿದಳು. ನಾಯಿ ಬೊಗಳಿದ ಶಬ್ದ ಕೇಳಿ ಎಲ್ಲ ರಾತ್ರೆಯ ಹಾಗೆ ಇದೂ ಒಂದು ರಾತ್ರೆ ಎನ್ನಿಸಿ ಚಾವಡಿಯ ಮೆಟ್ಟಿಲನ್ನು ಹತ್ತಿದಳು. ಚಾಚಿದ ಕೈಗೆ ಬಾಗಿಲು ತೆರೆದದ್ದು ತಿಳಿದು : 'ಅಯ್ಯೋ ಪರಮಾತ್ಮ, ನರಿ ನಾಯಿಯೇನಾದರೂ ನುಗ್ಗಿ ಅವನ ಶವನನ್ನ....' ಎಂದು ತಾಪವಾಗಿ ಭಯವನ್ನೆಲ್ಲ ಮರೆತು, ಕ್ಷಣದಲ್ಲಿ ಒಳನುಗ್ಗಿ, ಅಭ್ಯಾಸಬಲದಿಂದ ಗೂಡಿನಲ್ಲಿದ್ದ ಬೆಂಕಿಪೊಟ್ಟಣ ತೆರೆದು ಲಾಟೀನು ಹತ್ತಿಸಿದಳು. ದುರ್ವಾಸನೆ. ಸತ್ತು ಕೊಳೆಯುತ್ತಿದ್ದ ಇಲಿ. ತನಗಾಗಿ ಅಗ್ರಹಾರದಲ್ಲೆಲ್ಲ ನಿಷ್ಠುರ ಕಟ್ಟಿಕೊಂಡ ನಾರಣಪ್ಪನ ಶವವನ್ನ ಅನಾಥವಾಗಿ ಬಿಟ್ಟೆನಲ್ಲ ಎಂದು ದುಃಖವಾಗಿ ಮಹಡಿ ಹತ್ತಿ ಹೋದಳು. ಲೋಭಾನದ ಹೊಗೆ ಹಾಕಬೇಕೆಂದುಕೊಂಡಳು. ಹೆಣ ನಾರುತ್ತಿತ್ತು. ಬಾತುಕೊಂಡು ವಿಕಾರವಾಗಿ ವಿರೂಪವಾದ ಶವದ ಮುಖ ಕಂಡು ಹೊಟ್ಟೆಯೆಲ್ಲ ಕಲಿಸಿ, ಕಿಟಾರನೆ ಕಿರುಚಿ ಹೊರಕ್ಕೋಡಿದಳು. ಅಲ್ಲಿ ಮೇಲಿರುವುದಕ್ಕೂ, ತನ್ನನ್ನು ಒಲಿದಿದ್ದವನಿಗೂ ಯಾವ ಸಂಬಂಧವೂ ಇಲ್ಲ, ಇಲ್ಲ ಎಂದು ಅವಳ ಜೀವ ಕೂಗಿತು. ಲಾಟೀನು ಹಿಡಿದು ಆವೇಶದಲ್ಲೆಂಬಂತೆ ಚಂದ್ರಿ ಒಂದೇ ವೇಗದಲ್ಲಿ ಮೈಲಿ ನಡೆದು ಗೌಡರ ಕೇರಿಗೆ ಹೋದಳು. ತನ್ನ ಮನೆಗೆ ಕೋಳಿಮೊಟ್ಟೆಯನ್ನ ತಂದುಕೊಡುತ್ತಿದ್ದ ಗಾಡಿ ಶೇಷಪ್ಪನ ಮನೆಯನ್ನು ಅಂಗಳದಲ್ಲಿ ಕಟ್ಟಿದ ಬಿಳಿಯ ಎತ್ತುಗಳಿಂದ ಗುರುತಿಸಿ ಒಳಕ್ಕೆ ಹೋದಳು. ಎತ್ತುಗಳು ಅಪರಿಚಿತ ರೂಪವೊಂದನ್ನು ಕಂಡು ಎದ್ದು ನಿಂತು ಬುಸ್ ಎಂದು ಉಸಿರಾಡಿ ಹಗ್ಗವನ್ನ ಜಗ್ಗಿದುವು. ನಾಯಿ ಬೊಗಳಿತು. ಶೇಷಪ್ಪ ಎದ್ದು ಬಂದ. ಚಂದ್ರಿ ಆತುರವಾಗಿ ನಡೆದದ್ದನ್ನು ವಿವರಿಸಿ, "ನೀನು ಗಾಡಿ ಕಟ್ಟಿಕೊಂಡು ಬಂದು ಹೆಣವನ್ನು ಶ್ಮಶಾನಕ್ಕೆ ಸಾಗಿಸಬೇಕು, ಮನೆಯಲ್ಲಿಯೇ ಕಟ್ಟಿಗೆಯಿದೆ—ಸುಟ್ಟು ಬಿಡಬಹುದು" ಎಂದು ಕೇಳಿದಳು.

ಹೆಂಡವನ್ನು ಹೀರಿ ಮಜದಲ್ಲಿ ನಿದ್ದೆ ಮಾಡಿದ್ದ ಶೇಷಪ್ಪ ಗಾಬರಿಯಾಗಿ, "ಚಂದ್ರಮ್ಮ, ಸಾಧ್ಯವಿಲ್ಲವ್ವ. ಬ್ರಾಂಬ್ರ ಶವಾನ ನಾನು ಮುಟ್ಟಿ ನರಕಕ್ಕೆ ಹೋಗಲ? ಅಷ್ಟೈಶ್ವರ್ಯ ಕೊಟ್ಟರೂ ಬ್ಯಾಡಮ್ಮ....ಭಯವಾದರೆ ಈ ಬಡವನ ಗುಡಿಸಲಲ್ಲಿ ಮಲಗಿದ್ದು ನಸುಕಿನಲ್ಲಿ ಎದ್ದು ಹೋಗಿರವ್ವ" ಎಂದು ಉಪಚರಿಸಿದ.

ಚಂದ್ರಿ ಮಾತನ್ನಾಡದೆ ಬೀದಿಗೆ ಬಂದು ನಿಂತಳು. ಏನು ಮಾಡಲಿ? ಒಂದೇ ಒಂದು ಯೋಚನೆ ಅವಳಿಗೆ ಸ್ಪಷ್ಟವಾಯಿತು: ಅಲ್ಲಿ ಅದು ಕೊಳೆಯುತ್ತಿದೆ. ನಾರುತ್ತಿದೆ. ಬಾತುಕೊಂಡಿದೆ. ಅದು ತಾನು ಒಲಿದ ನಾರಣಪ್ಪನಲ್ಲ. ಬ್ರಾಹ್ಮಣನೂ ಅಲ್ಲ. ಶೂದ್ರನೂ ಅಲ್ಲ. ಹೆಣ. ಕೊಳೆಯುವ ನಾರುವ ಹೆಣ.

ಸೀದ ನಡೆದು ಮುಸಲ್ಮಾನರಿದ್ದ ಕೇರಿಗೆ ಹೋದಳು. ಹಣ ಕೊಡುವೆನೆಂದಳು. ಬಂಗಡೇ ಮೀನಿನ ವ್ಯಾಪಾರ ಮಾಡುತ್ತಿದ್ದ ಅಹ್ಮದ್ ಬ್ಯಾರಿ—ಕೈಯಲ್ಲಿ ಒಮ್ಮೆ ಕಾಸಿಲ್ಲದಾಗ ಎತ್ತುಗಳನ್ನು ಕೊಳ್ಳಲು ಸಾಲಕೊಟ್ಟ ಒಡೇರು ಅವರು ಎಂದು ನೆನೆದು—ಎಗ್ಗಿಲ್ಲದೆ ಗುಟ್ಟಾಗಿ ಗಾಡಿ ಕಟ್ಟಿಕೊಂಡು ಬಂದು, ಶವವನ್ನೂ ಕಟ್ಟಿಗೆಯನ್ನೂ ಒಟ್ಟಿಗೇ ತುಂಬಿ, ಯಾರಿಗೂ ಪತ್ತೆಯಾಗದಂತೆ ಮುಸಣಕ್ಕೊಯ್ದು, ಕತ್ತಲೆಯಲ್ಲಿ ಧಗಧಗ ಬೆಂಕಿಯೆಬ್ಬಿಸಿ ಬೂದಿಮಾಡಿ ನಡೆದುಬಿಟ್ಟ—ಹೈ ಹೈ ಎಂದು ಎತ್ತಿನ ಬಾಲ ತಿರುಪಿ. ಚಂದ್ರಿ ಎರಡು ತೊಟ್ಟು ಕಣ್ಣೀರು ಹಾಕಿ, ಮನೆಗೆ ಹಿಂದಕ್ಕೆ ಬಂದು, ಚೀಲದಲ್ಲಿ ತನ್ನದೊಂದಿಷ್ಟು ರೇಷ್ಮೆಯ ಸೀರೆಗಳನ್ನು, ಪೆಟ್ಟಿಗೆಯಲ್ಲಿದ್ದ ನಗದು ಹಣವನ್ನು ಮತ್ತು ಆಚಾರ್ಯರು ಹಿಂದಕ್ಕೆ ಕೊಟ್ಟ ಬಂಗಾರವನ್ನು ಗಂಟುಕಟ್ಟಿಕೊಂಡು ಹೊರಬಂದಳು. ಪ್ರಾಣೇಶಾಚಾರ್ಯರನ್ನು ಎಬ್ಬಿಸಿ ಅವರ ಕಾಲಿಗೆರಗಿ ಹೋಗಬೇಕೆಂಬ ತನ್ನ ಆಸೆಯನ್ನು ಅದುಮಿಕೊಂಡು, ಬೆಳಗ್ಗೆ ಕುಂದಾಪುರಕ್ಕೆ ಮೋಟಾರು ಹಿಡಿಯುವುದೆಂದು ಮೋಟಾರಿನ ದಾರಿಯ ಕಡೆ ಕಾಡುದಾರಿಯಲ್ಲಿ ಗಂಟು ಹಿಡಿದು ನಡೆದುಬಿಟ್ಟಳು.

## ಅಧ್ಯಾಯ: ಎರಡು

ಇತ್ತ ಪಾರಿಜಾತಪುರದಲ್ಲಿ ಸಾಹುಕಾರ ಮಂಜಯ್ಯನ ವಿಶಾಲವಾದ ಮಹಡಿಯಲ್ಲಿ ಶ್ರೀಪತಿ, ಗಣೇಶ, ಗಂಗಣ್ಣ, ಮಂಜುನಾಥ ಮತ್ತು ನಾಲ್ಕೈದು ಅಗ್ರಹಾರದ ಯುವಕರು ಗುಲೇಬಕಾವಲಿ ನಾಟಕದ ತಯಾರಿಕೆಯಲ್ಲಿ ತೊಡಗಿದ್ದರು. ಅವರ ನಡುವೆ ಇದ್ದ ಹಾರ್ಮೋನಿಯಂ ನಾರಣಪ್ಪ ತಮ್ಮ ನಾಟಕ ಕಂಪೆನಿಯ ಉಪಯೋಗಕ್ಕೆಂದು ಕೊಟ್ಟದ್ದು. ಪ್ರತಿ ನಾಟಕಕ್ಕೂ ಅವನು ಹಾಜರಿರಲೇಬೇಕು. ಅವನ ಪ್ರೋತ್ಸಾಹವಿಲ್ಲದಿದ್ದರೆ ಪಾರಿಜಾತ ನಾಟಕ

ಮಂಡಳಿ ಹುಟ್ಟುತ್ತಲೇ ಇರಲಿಲ್ಲ. ಹುರಿದುಂಬಿಸಿದವ ಅವ; ಅಲ್ಲದೆ ಯುವಕರು ಒಟ್ಟುಮಾಡಿದ ದುಡ್ಡಿಗೆ ತನ್ನದಷ್ಟು ಸೇರಿಸಿ ಶಿವಮೊಗ್ಗೆಯಿಂದ ಸೀನರಿಗಳನ್ನು ತಂದುಕೊಟ್ಟವ ಅವ. ನಾಟಕದ ಗತ್ತು ಇತ್ಯಾದಿಗಳ ಬಗ್ಗೆಯೂ ಸೂಚನೆ ಕೊಡುತ್ತಿದ್ದವನೂ ಅವನೆ....ಆಸುಪಾಸಿನಲ್ಲೆಲ್ಲ ಗ್ರಾಮೊಫೋನ್ ಇದ್ದುದೆಂದರೆ ಅವನ ಹತ್ತಿರ. ಹಿರಣ್ಣಯ್ಯನ ಕಂಪನಿಯ ನಾಟಕ ಹಾಡುಗಳ ಪ್ಲೇಟುಗಳೆಲ್ಲ ಅವನ ಹತ್ತಿರವಿದ್ದವು. ಅದನ್ನೆಲ್ಲ ಈ ಯುವಕರಿಗೆ ಕೀಕೊಟ್ಟು ತಿರುಗಿಸಿ ಕೇಳಿಸಿದ್ದ. ಅಷ್ಟಿಷ್ಟು ಕಾಂಗ್ರೆಸ್ ವಿಷಯಗಳನ್ನು ಅಲ್ಲಿಂದ ಇಲ್ಲಿಂದ ಕಿವಿಯ ಮೇಲೆ ಹಾಕಿಕೊಂಡು ಬಂದು ಯುವಕರಿಗೆ ಖಾದಿ ಜುಬ್ಬ ಪಾಯಜಾಮ, ಬಿಳಿ ಟೋಪಿಯ ಫ್ಯಾಶನ್ ಕಲಿಸಿದ್ದ. ಈಗ ಯುವಕರಿಗೆಲ್ಲ ಅವನ ಸಾವಿನಿಂದಾಗಿ ತುಂಬ ವ್ಯಥೆಯಾಗಿದೆ. ಆದರೆ ಹಿರಿಯರ ಭಯದಿಂದ ಎಲ್ಲ ಸುಮ್ಮನಿದ್ದಾರೆ. ಎಲ್ಲ ಬಾಗಿಲುಗಳನ್ನೂ ಜಡಿದು ಪಾಸಿಂಗ್ ಷೋ ಸಿಗರೇಟು ಹತ್ತಿಸಿ ಸೇದುತ್ತ ಅರೆಮನಸ್ಸಿನಲ್ಲಿ ಪ್ರಾಕ್ಟೀಸು ನಡೆದಿತ್ತು. ಯಕ್ಷಗಾನದ ಮೇಲೆ ಮರ್ಜಿಯಿದ್ದ ಶ್ರೀಪತಿಗೆ ಈ ನಾಟಕದಲ್ಲಿ ಪಾತ್ರವಿರದಿದ್ದರೂ ಬಣ್ಣ ಹಾಕಿ ನಡೆಯುವ ಸಮಸ್ತ ಕ್ರಿಯೆಯೂ ಅವನಿಗೆ ಖಯಾಲಿ. 'ಪ್ರಾಕ್ಟೀಸು' ನಡೆಯುತ್ತಿದ್ದಂತೆ ಒಂದು ಮರಿಗೆಯ ತುಂಬ ತುಂಬಿಟ್ಟ ಒಗ್ಗರಣೆ ಅವಲಕ್ಕಿ, ಕಡಾಯಿ ತುಂಬ ಬಿಸಿಬಿಸಿ ಕಾಫಿಯ ಸೇವನೆಯೂ ನಡೆದಿತ್ತು. ರಾತ್ರಿ ಹನ್ನೆರಡು ಗಂಟೆಯವರೆಗೂ ನಡುನಡುವೆ ನಾರಣಪ್ಪನನ್ನು ನೆನೆಯುತ್ತ ಅವಲಕ್ಕಿ ಕಾಫಿಯ ಸೇವನೆ ಮಾಡುತ್ತ, 'ಪ್ರಾಕ್ಟೀಸು' ಸಾಗಿತು. ಮುಗಿದ ಮೇಲೆ ನಾಗರಾಜ ಗಣೇಶನಿಗೆ ಕಣ್ಣು ಮಿಟುಕಿಸಿದ. ಗಣೇಶ ಪಕ್ಕದಲ್ಲಿ ಕೂತಿದ್ದ ಸ್ತ್ರೀಪಾತ್ರದ ಮಂಜುನಾಥನನ್ನು ಚೂಟಿದ. ಮಂಜುನಾಥ ಅದನ್ನು ಮಾಲೇರರ ಗಂಗಣ್ಣನಿಗೆ ದಾಟಿಸಿದ. ಗಂಗಣ್ಣ ಶ್ರೀಪತಿಯ ಪಂಚೆಯನ್ನು ಹಿಡಿದು ಜಗ್ಗಿದ. ಈ ಒಳ ಸಂಜ್ಞೆಯಾದ ಮೇಲೆ ಉಳಿದ ತರುಣರನ್ನು ಇವತ್ತಿನ 'ಪ್ರಾಕ್ಟೀಸು' ಸಾಕೆಂದು ಸಾಗಿಸಿದ್ದಾಯಿತು. ಎಲ್ಲ ಹೋಗಿಯಾದ ಮೇಲೆ ನಾಗರಾಜ ಬಾಗಿಲನ್ನು ಮುಚ್ಚಿ ಲಗುಬಗೆಯಿಂದ ಟ್ರಂಕಿನ ಮುಚ್ಚಳ ತೆರೆದು ಎರಡು ಸೀಸೆ ಸರಾಯನ್ನು ಎತ್ತಿ ಹಿಡಿದ. ನಮ್ಮ ಮಾಸ್ತರರಾದ ನಾರಣಪ್ಪನ ನೆನಪಿಗೆ ಎಂದು ತಮ್ಮ ಮೆಚ್ಚಿನ ನಟ ಹಿರಣ್ಣಯ್ಯನ ಹಾಡನ್ನು ಮೆಲುಕುಹಾಕಿದ. ಆಮೇಲಿಂದ ಗುಟ್ಟಾಗಿ ಸೀಸೆಗಳನ್ನು ಒಂದು ಚೀಲದಲ್ಲಿ ಇಟ್ಟದ್ದಾಯಿತು. ಬಾಳೆಲೆಯಲ್ಲಿ ಅವಲಕ್ಕಿಯನ್ನು ಕಟ್ಟಿಕೊಂಡದ್ದಾಯಿತು. ಮೆತ್ತಗೆ ಸದ್ದಾಗದಂತೆ ಗ್ಲಾಸುಗಳನ್ನು ತುಂಬಿಕೊಂಡದ್ದಾಯಿತು. 'ರೆಡಿ'

ಎಂದ ನಾಗರಾಜ. 'ರೆಡಿ' ಎಂದರು ಉಳಿದವರು. ಒಬ್ಬೊಬ್ಬರಾಗಿ ಮೆಟ್ಟಿಲನ್ನು ಇಳಿಯುತ್ತಿದ್ದಂತೆ ಮಂಜುನಾಥ 'ಹೋಲ್ಡಾನ್' ಎಂದು ಕತ್ತರಿಸಿದ ಒಂದು ಲಿಂಬೆಹಣ್ಣನ್ನು ಜೇಬಿಗೆ ಹಾಕಿಕೊಂಡ.

ತರುಣರು ಮೆತ್ತಗೆ ಬಾಗಿಲೆಳೆದುಕೊಂಡು ಅಗ್ರಹಾರ ದಾಟಿ, ತಮ್ಮ ಕಳ್ಳತನದ ವ್ಯಾಪಾರಕ್ಕೆ ಹಿಗ್ಗುತ್ತ ಕದ್ದಿಂಗಳಿನಲ್ಲಿ ಶ್ರೀಪತಿಯ ಬ್ಯಾಟರಿ ಬೆಳಕಿನಲ್ಲಿ ಹೊಳೆಯ ಕಡೆ ನಡೆದರು. "ಏನು ಮಾರಾಯ, ನಿಮ್ಮ ಗುರುಗಳು ಒಂದು ಬಾಟ್ಲಿ ಕುಡಿದೂ ಲಯ ತಪ್ಪದ ಹಾಗೆ ತಬಲ ನುಡಿಸುತ್ತಿದ್ದರಲ್ಲ" ಎಂದು ನಾರಣಪ್ಪನನ್ನ ನಾಗರಾಜ ದಾರಿಯಲ್ಲಿ ಸ್ಮರಿಸಿದ. ವಿಶಾಲವಾದ ಮರಳಿನ ರಾಶಿಯ ಮೇಲೆ ಬಂದು ಸುತ್ತಾಗಿ ಕೂತು, ನಡುವೆ ಬಾಟ್ಲಿ ಗ್ಲಾಸು ಅವಲಕ್ಕಿಗಳನ್ನಿಟ್ಟುಕೊಂಡರು. ತಾವು ಐವರೇ ಈ ಲೋಕಕ್ಕೆಲ್ಲ ಇದ್ದಂತೆ ಅನ್ನಿಸಿ, ನಕ್ಷತ್ರಸಾಕ್ಷಿಯಲ್ಲಿ, ಅಗ್ರಹಾರದ ತಮ್ಮ ವಾಮನತ್ವವನ್ನು ಸರಾಯಿಯಿಂದ ಕಳೆದುಕೊಂಡು ತ್ರಿವಿಕ್ರಮರಾಗಲು ಸನ್ನದ್ಧತೆ ನಡೆಸಿದರು. ಹೊಳೆ ಜುಳುಜುಳು ಎಂದು ಅವರ ಮಾತಿನ ನಡುವಿನ ಮೌನದಲ್ಲಿ ಹರಿದು ಯುವಕರಿಗೆ ತಮ್ಮ ಏಕಾಂತದ ಬಗ್ಗೆ ಧೈರ್ಯವನ್ನು ಹೇಳಿತು.

ಸರಾಯಿ ಹಿತವಾಗಿ ನೆತ್ತಿಗೇರುತ್ತಿದ್ದಂತೆ ಶ್ರೀಪತಿ ಗದ್ಗದಿತನಾಗಿ ಎಂದ: "ನಮ್ಮ ಅಪ್ಪನೊಬ್ಬ ಸತ್ತನಲ್ಲಯ್ಯ."

"ಹೌದಲ್ಲಯ್ಯ", ನಾಗರಾಜ ಅವಲಕ್ಕಿಗೆ ಕೈಹಾಕಿ ಹೇಳಿದ: "ನಮ್ಮ ಕಂಪನಿಯ ಒಂದು ಕಂಬವೇ ಮುರಿದಂತೆ ನಮಗೆ, ಅವನ ಹಾಗೆ ತಬಲದ ಮೇಲೆ ತಾಳ ಹಿಡಿಯುವವರು ಯಾರು ಈ ಆಸುಪಾಸಿನಲ್ಲಿ?"

ಎಷ್ಟು ನಿಂಬೆಹಣ್ಣನ್ನು ಹಿಂಡಿಕೊಂಡಿದ್ದರೂ ತಲೆಗೇರಿಬಿಟ್ಟಿದ್ದ ಮಂಜುನಾಥ ಏನನ್ನೋ ಹೇಳಲು ಯತ್ನಿಸುತ್ತ, "ಚಂದ್ರಿ, ಚಂದ್ರಿ" ಎಂದ.

ಶ್ರೀಪತಿಗೆ ಹುರುಪಾಯಿತು. "ಯಾರು ಏನೇ ಅನ್ನಲಿ, ಯಾವ ಬ್ರಾಹ್ಮಣ ಏನೇ ಬೊಗಳಲಿ—ಗೊತ್ತಾಯ್ತ—ಆಣೆ ಹಾಕಿ ಹೇಳ್ತೀನಿ—ಏನೂಂತೀರ?—ಚಂದ್ರಿಯಂಥ ಚೆಲುವೆ, ಗಟ್ಟಿಗೆ, ಒಳ್ಳೆಯ ಹೆಂಗಸು ಈ ನೂರು ಮೈಲಿಯಲ್ಲಿ ಇದ್ದಾಳಾ ಎಣಿಸಿಬಿಡಿ. ಇದ್ದರೆ ಜಾತಿ ಬಿಟ್ಟುಬಿಡುವೆ. ಸೂಳೆಯಾದರೆ ಏನಯ್ಯ? ನಾರಣಪ್ಪನಿಗೆ ಅವಳು ಹೆಂಡತಿಗಿಂತ ಹೆಚ್ಚಾಗಿ ನಡಕೊಂಡಳೊ ಇಲ್ಲವೊ ಹೇಳಿ ನೋಡುವ. ಅವನು ಕುಡಿದು ವಾಂತಿ ಮಾಡಿಕೊಂಡರೆ ಬಾಚಿದಳು. ಅಲ್ಲದೆ ನಮ್ಮ ವಾಂತೀನೂ ಬಾಚಿದಳಲ್ಲಯ್ಯ! ಅರ್ಧರಾತ್ರೆ ಅವನು ಬಂದು ಎಬ್ಬಿಸಲಿ—ಚುಟಪಿಟಕ್ಕೆನ್ನದೆ—ನಗ್ತನಗ್ತ ಅಡಿಗೆ ಮಾಡಿ ಬಡಿಸ್ತ

ದ್ದಳು. ಯಾವ ಬ್ರಾಹ್ಮಣ ಹೆಂಗಸು ಅಷ್ಟು ಮಾಡ್ತಾಳಯ್ಯ? ಎಲ್ಲ ಪಿರಿಪಿರಿ ಮುಂಡೇರು. ಥತ್" ಎಂದ.

ಮಂಜುನಾಥ ತನಗೆ ಗೊತ್ತಿದ್ದ ಮೂರು ಇಂಗ್ಲಿಷ್ ಶಬ್ದಗಳಲ್ಲಿ ಒಂದಾದ 'ಯಸ್' 'ಯಸ್' ಎಂದ.

"ಕುಡಿದದ್ದೆ ಮಂಜುನಾಥನಿಗೆ ಇಂಗ್ಲಿಷ್ ಬಂದುಬಿಡ್ತದೆ—" ಎಂದು ನಾಗರಾಜ ನಕ್ಕ.

ಮಾತು ಮತ್ತೆ ಹುಡುಗೀರ ಕಡೆ ಹೊರಳಿತು. ಶೂದ್ರ ಹೆಣ್ಣುಗಳಲ್ಲಿ ಯಾವುಯಾವುವು ಚೆನ್ನಾಗಿವೆಯೆಂದು ಲೆಖ್ಖಹಾಕಿದರು. ಬೆಳ್ಳಿ ಮತ್ತು ತನ್ನ ವಿಷಯ ನಾರಣಪ್ಪನೊಬ್ಬನಿಗೆ ಮಾತ್ರ ತಿಳಿದಿತ್ತಾದ್ದರಿಂದ ಶ್ರೀಪತಿ ಸಮಾಧಾನದಿಂದ ಅವರ ಮಾತು ಕೇಳಿದ. ಬೆಳ್ಳಿ ಇವರ ಕಣ್ಣಿಗೆ ಬೀಳದಿದ್ದುದು ಹೆಚ್ಚು. ಬಿದ್ದರೂ ಹೊಲತಿಯೆಂದು ಹೆದರುತ್ತಾರೆ, ಲಾಯಕ್ಕೇ ಆಯಿತು.

ಇನ್ನೊಂದು ಸೀಸೆಯ ಗಿದ್ನ ತೆರೆಯುತ್ತಿದ್ದಂತೆ ಶ್ರೀಪತಿ :

"ನಮ್ಮ ದೋಸ್ತು ಸತ್ತು ಸಂಸ್ಕಾರಾ ಇಲ್ಲದೆ ಕೊಳೀತಾ ಬಿದ್ದಿರೋವಾಗ ನಮ್ಮದೆಂತಹ ಮಜಯ್ಯ" ಎಂದು ಅಳಲು ಪ್ರಾರಂಭಿಸಿದ. ಎಲ್ಲ ಯುವಕರಿಗೂ ಅಳು ಸಾಂಕ್ರಾಮಿಕವಾಗಿ ಅವನಿಂದ ಹರಡಿತು. ಒಬ್ಬರನ್ನೊಬ್ಬರು ತಬ್ಬಿಕೊಂಡರು.

ಶ್ರೀಪತಿ ಹೇಳಿದ :

"ಯಾರು ಯಾರು ಗಂಡಸರು ಇಲ್ಲಿ ಹೇಳಿ."

'ನಾನು ನಾನು ನಾನು ನಾನು' ಎಂದು ನಾಲ್ವರೂ ಉದ್ಗರಿಸಿದರು. ಹೆಣ್ಣಿನ ಪಾತ್ರದ ಹೆಣ್ಣಿನ ಮುಖದ ಮಂಜುನಾಥನಿಗೆ ನಾಗರಾಜ "ಛೆಛೇ, ನೀನು ಸದಾರಮೆ, ನೀನು ಶಕುಂತಳೆ" ಎಂದು ಮುತ್ತು ಕೊಟ್ಟ.

"ನೀವು ಗಂಡಸರಾದರೆ ನನ್ನದೊಂದು ಮಾತು. ಒಪ್ಪಿದರೆ 'ಭೇಷ್' ಎನ್ನುವೆ. ಗೊತ್ತಾಯ್ತು. ನಮ್ಮ ಗೆಳೆಯ ಅವ. ಅವನು ಕೊಟ್ಟಿದ್ದಕ್ಕೆ ನಾವೇನು ಅವನಿಗೆ ಕೊಟ್ಟಿದ್ದೇವೆ? ಆ ಶವಾನ್ನ ಪತ್ತೆಯಾಗದಂತೆ ಸಾಗಿಸಿ ಸುಟ್ಟುಬಿಡುವ. ಏನೆನ್ನುತ್ತೀರಿ? ಏಳಿ" ಎಂದು ಶ್ರೀಪತಿ ಹುರಿದುಂಬಿಸಿ ಮಾತನ್ನಾಡಿ ಎಲ್ಲರ ಗ್ಲಾಸಿಗೂ ಸರಾಯಿ ತುಂಬಿಸಿದ. ಎಲ್ಲರೂ ಅದನ್ನು ಗಟಗಟನೆ ಕುಡಿದು, ಯೋಚಿಸದೆ, ಬ್ಯಾಟರಿಯ ಬೆಳಕನ್ನು ಚೆಲ್ಲುತ್ತ ನಡೆದ ಶ್ರೀಪತಿಯ ನೇತೃತ್ವದಲ್ಲಿ ಓಲಾಡುತ್ತ ಓಲಾಡುತ್ತ ಹೊಳೆ ದಾಟಿದರು.

ಕದ್ದಿಂಗಳಿನಲ್ಲಿ ಒಂದು ಪಿಳ್ಳೆಯೂ ಕಾಣಲಿಲ್ಲ. ಕುಡಿದ ಸರಾಯಿ ನೆತ್ತಿಗೇರಿ, ಉನ್ಮಾದದಿಂದ ಅಗ್ರಹಾರವನ್ನು ಹೊಕ್ಕು ನಾರಣಪ್ಪನ ಮನೆಗೆ ಹೋಗಿ ಬಾಗಿಲು ದೂಡಿದರು. ನೇರ ನಿರ್ಭಯ ಒಳಕ್ಕೆ ಹೋದರು. ಸರಾಯಿಯ ಪ್ರಭಾವದಲ್ಲಿ ದುರ್ನಾತ ಲೆಕ್ಕಕ್ಕೆ ಬರದೆ ಸೀದ ಮಹಡಿ ಹತ್ತಿದರು. ಶ್ರೀಪತಿ ಬ್ಯಾಟರಿ ಬಿಟ್ಟ. ಎಲ್ಲಿ? ಎಲ್ಲಿ? ನಾರಣಪ್ಪನ ಶವವೇ ಪತ್ತೆಯಿಲ್ಲ. ಐವರಿಗೂ ಇದ್ದಕ್ಕಿದ್ದಂತೆ ಪ್ರಾಣಭಯವಾಯಿತು. "ಹಾ! ನಾರಣಪ್ಪ ಪ್ರೇತವಾಗಿ ನಡೆದುಬಿಟ್ಟ' ಎಂದ ನಾಗರಾಜ. ಅವನು ಅಂದದ್ದೆ ತಡ ಸರಾಯಿ ಸೀಸೆಯ ಚೀಲವನ್ನಲ್ಲೇ ಎಸೆದು, ಬಿದ್ದೆವೋ ಕೆಟ್ಟೆವೋ ಎನ್ನುತ್ತ ಐವರೂ ಹೊರಗೆ ಓಡಿಬಿಟ್ಟರು.

ನಿದ್ದೆ ಬಾರದೆ 'ಫರ್ರ'ನ್ನುವ ಬಾಗಿಲು ತೆರೆದು ಶಪಿಸಲೆಂದು ಅಗ್ರಹಾರದ ಬೀದಿಗೆ ಬಂದಿದ್ದ ಅರೆಮರಳು ಲಕ್ಷ್ಮೀದೇವಮ್ಮ "ಪ್ರೇತಗಳನ್ನು ನೋಡಿರೋ ನೋಡಿರೋ" ಎಂದು ಕಿರುಚಿ "ಹೇಯ್" ಎಂದು ತೇಗಿದಳು.

## ಅಧ್ಯಾಯ : ಮೂರು

ರಾತ್ರೆ ಬಹಳ ಹೊತ್ತಾದಮೇಲೂ ಪ್ರಾಣೇಶಾಚಾರ್ಯರು ಬರದಿದ್ದುದನ್ನು ಕಂಡು ಕಂಗಾಲಾದ ಬ್ರಾಹ್ಮಣರು ಬಾಗಿಲು ಕಿಟಕಿಗಳನ್ನೆಲ್ಲ ಭದ್ರವಾಗಿ ಮುಚ್ಚಿ, ಕರುಳನ್ನು ಕಿತ್ತು ಬಾಯಿಗೆ ತರುವ ನಾತದಲ್ಲಿ ಮೂಗು ಮುಚ್ಚಿಕೊಂಡು ಮಲಗಿದರು, ನಿದ್ದೆ ಬರಲಿಲ್ಲ. ಹಸಿವಿನಲ್ಲಿ, ಭೀತಿಯಲ್ಲಿ ತಣ್ಣನೆಯ ನೆಲದ ಮೇಲೆ ಹೊರಳಿದರು. ಇನ್ನೊಂದು ಲೋಕದಿಂದೆಂಬಂತೆ ರಾತ್ರೋರಾತ್ರಿ ಹೆಜ್ಜೆಗಳ ಸಪ್ಪಳ, ಗಾಡಿಯ ಗಾಲಿಯ ಶಬ್ದ, ಲಕ್ಷ್ಮೀದೇವಮ್ಮನ ಊಳಿಡುವ ನಾಯಿಯ ಹಾಗಿನ ದಾರುಣವಾದ ಕೂಗು, ತೇಗು—ಪ್ರಾಣ ಕಂಪಿಸಿದಂತೆ, ಅಗ್ರಹಾರ ನಿರ್ಜನ ಅರಣ್ಯವಾದಂತೆ, ಕಾಯುವ ದೈವ ಕೈ ಬಿಟ್ಟ ಹಾಗೆ ಎಂದೆಲ್ಲ ಅನ್ನಿಸಿ ಮನೆಮನೆಯಲ್ಲೂ ಮಕ್ಕಳು, ತಾಯಿ, ತಂದೆಯವರು ಒಂದೊಂದು ಮುದ್ದೆಯಾಗಿ ಒಬ್ಬರನ್ನೊಬ್ಬರು ತಬ್ಬಿಕೊಂಡು ಕತ್ತಲಲ್ಲಿ ನಡುಗಿದರು. ಕತ್ತಲು ಕಳೆದು ಸೂರ್ಯರಶ್ಮಿ ಸೂರಿನ ತೂತುಗಳಿಂದ ಇಳಿದು, ಕತ್ತಲಿನ ಮನೆಗಳಲ್ಲಿ ಬೆಳಕಿನ ಪುಟ್ಟಪುಟ್ಟ ವೃತ್ತಗಳಾಗಿ ಧೈರ್ಯವನ್ನು ತಂದಮೇಲೆ ಎಲ್ಲರೂ ಮೆತ್ತಗೆ ಎದ್ದು, ಅಗಳಿ ಸರಿಸಿ ಬಾಗಿಲುಗಳಿಂದ ಇಣುಕಿ

ದರು. ಹದ್ದು, ರಣಹದ್ದು. ಮತ್ತೆ ಮನೆಮನೆಯ ಮೇಲೂ ಕಾಗೆಗಳನ್ನು ಅಟ್ಟುತ್ತ ಪಟ್ಟುಹಿಡಿದು ಕೂತ ಹದ್ದು. ಉಸ್ಸೆಂದರು. ಚಪ್ಪಾಳೆ ತಟ್ಟಿದರು. ಏನು ಮಾಡಿದರೂ ಜಗ್ಗದಿದ್ದುದನ್ನು ಕಂಡು ಹತಾಶರಾಗಿ ಶಂಖಗಳನ್ನೂದಿ ಕಂಚಿನ ಗಂಟೆ ಬಾರಿಸಿದರು. ದ್ವಾದಶಿಯ ಹಾಗೆ ಬೆಳಗಿನ ಜಾವ ಮಂಗಳ ಸ್ವರ ಕೇಳಿ ಪ್ರಾಣೇಶಾಚಾರ್ಯ ಹೊರಗೆ ಬಂದು ನೋಡಿ ವಿಹ್ವಲಿತರಾದರು: ತನಗೆ ಪತ್ತೆಯಾಗದ ಗಡಿಬಿಡಿಯಲ್ಲಿ, ಏನು ಮಾಡಲಿ ಏನು ಮಾಡಲಿ ಎಂದು ಬೆರಳುಗಳನ್ನು ಮುರಿಯುತ್ತ ಒಳಗಿನಿಂದ ಹೊರಕ್ಕೆ, ಹೊರಗಿನಿಂದ ಒಳಕ್ಕೆ ಸಂಚರಿಸಿದರು. ಊಟದ ಮನೆಯಲ್ಲಿ ನರಳುತ್ತಿದ್ದ ಹೆಂಡತಿಗೆ ಯಥಾ ರೀತಿ ಔಷಧಿಯನ್ನು ಕೊಡುವಾಗ ಕೈ ನಡುಗಿ ಔಷಧಿ ಚೆಲ್ಲಿತು. ಸ್ವಪ್ನದಲ್ಲಿ ರುಯ್ಯನೆ ತಳವಿಲ್ಲದ ಪಾತಾಳಕ್ಕೆ ಕಂತುತ್ತಿದ್ದೇನೆ ಎನ್ನುವ ಅನುಭವವಾದಾಗ ಸರಕ್ಕನೆ ನಿದ್ದೆಯಲ್ಲಿ ಕಾಲುಗಳನ್ನು ಮೇಲಕ್ಕೆಳೆದುಕೊಂಡು ಮುದುಚಿಕೊಳ್ಳುವಂತಹ ಅನುಭವವಾಯಿತು. ತನ್ನ ಕರ್ತವ್ಯದ, ಗೃಹಸ್ಥಧರ್ಮದ, ಆತ್ಮತ್ಯಾಗದ ಸಂಕೇತವಾಗಿದ್ದ ಜರ್ಜರಳಾದ ಹೆಂಡತಿಯ ಗುಳಬಿದ್ದ ಕಣ್ಣುಗಳ ದೃಷ್ಟಿ, ದಿಕ್ಕಿಲ್ಲದ ನೋಟವನ್ನು, ಅವಳ ತುಟಿಗೆ ಮದ್ದನ್ನು ಹಿಡಿದಾಗ ಕಂಡು ಕಾಲು ಶತಮಾನದ ರೋಗಿ–ವೈದ್ಯಬಾಂಧವ್ಯದ ಪಶ್ಚಾತ್ತಾಪದ ಸವೆದ ಹಾದಿಯ ಕೊನೆಯಲ್ಲೊಂದು ಪಾತಾಳ ಕಂಡಂತಾಯಿತು. ಹೇಸಿಗೆಯಲ್ಲಿ ಕಂಪಿಸಿದರು. ಮೂಗಿಗಡರಿದ್ದ ದುರ್ನಾತವೆಲ್ಲ ಈ ಮೂಲದಿಂದಲೇ ಬರುತ್ತಿದೆಯೇನೋ ಎಂದು ಭ್ರಮಿಸಿದರು. ಅವಚಿಕೊಂಡಿದ್ದ ತಾಯಿಯ ಹೊಟ್ಟೆಯಿಂದ ಟೊಂಗೆಯಿಂದ ಟೊಂಗೆಗೆ ಹಾರುವಾಗ ಕೈತಪ್ಪಿದ ಮಂಗನ ಮರಿಯಂತೆ—ತಾನು ಇಷ್ಟರವರೆಗೆ ಅವಚಿಕೊಂಡಿದ್ದ ಸಂಸ್ಕಾರ ಕರ್ಮಗಳಿಂದ ಕಳಚಿಬಿದ್ದೆ ಎನ್ನಿಸಿತು. ನಿರ್ಜೀವಿಯಾಗಿ, ದೈನ್ಯದ ಭಿಕ್ಷುಕಿಯಾಗಿ ಅಲ್ಲಿ ಹಾಸಿಗೆ ಹಿಡಿದು ಮಲಗಿದ್ದ ಹೆಂಡತಿಯನ್ನು ರಕ್ಷಿಸುವುದಕ್ಕೆಂದು ಧರ್ಮವನ್ನು ನಾನಾಗಿ ಅವಚಿಕೊಂಡೆನೋ ಅಥವಾ ಸಂಸ್ಕಾರದಿಂದ ಕರ್ಮದಿಂದ ಬಂದ ಧರ್ಮ ಕೈಹಿಡಿದು ನನ್ನನ್ನು ಈ ದಾರಿಯಲ್ಲಿ ನಡೆಸಿತೋ ಎಂದು ಅನುಮಾನವಾಯಿತು. ಇವಳನ್ನು ಮದುವೆಯಾದಾಗ ನನಗೆ ಹದಿನಾರು, ಅವಳಿಗೆ ಹನ್ನೆರಡು ವರ್ಷ. ಸನ್ಯಾಸಿಯಾಗಬೇಕು. ಇಲ್ಲವೆ ತ್ಯಾಗದ ಬಾಳನ್ನು ನಡೆಸಬೇಕೆಂಬ ಹುಳಿ ಛಲದ ಬಾಲಕ ಬೇಕೆಂದೇ ಹುಟ್ಟಿನಿಂದ ರೋಗಿಯಾಗಿದ್ದ ಅವಳನ್ನು ಮದುವೆಯಾದೆ. ಕೃತಜ್ಞರಾದ ಮಾವನ ಮನೆಯಲ್ಲೆ ಅವಳನ್ನು ಬಿಟ್ಟು, ಕಾಶಿಗೆ ಹೋಗಿ ವೇದಾಂತಶಿರೋಮಣಿಯಾಗಿ

ಹಿಂದಕ್ಕೆ ಬಂದೆ. ನಿಷ್ಕಾಮಕರ್ಮದ ಜೀವನಾನ್ನ ನಡೆಸಲಿಕ್ಕೆ ತನಗೆ ತಾಕತ್ತುಂಟೋ ಇಲ್ಲವೋ ಎಂದು ಪರೀಕ್ಷಿಸಲಿಕ್ಕೆಂದು ಭಗವಂತ ಇಲ್ಲಿ ಇವಳನ್ನು ರೋಗಿಯಾಗಿ ಮಾಡಿ ನನ್ನ ಕೈಯಲ್ಲಿಟ್ಟಿದ್ದಾನೆಂದು ತಿಳಿದು ಹರ್ಷದಿಂದ ಅವಳ ಸೇವೆಯಲ್ಲಿ ತೊಡಗಿದೆ. ತಾನೇ ಅಡಿಗೆ ಮಾಡಿ, ಅವಳಿಗೆ ರವೆ ಗಂಜಿ ಮಾಡಿ ಕುಡಿಸಿ, ದೇವರ ಪೂಜೆ ಇತ್ಯಾದಿಗಳನ್ನು ಸಾಂಗವಾಗಿ ನಡೆಸಿ, ನಿತ್ಯ ಸಾಯಂಕಾಲ ರಾಮಾಯಣ, ಭಾರತ–ಭಾಗವತಾದಿಗಳನ್ನು ಬ್ರಾಹ್ಮಣರಿಗೆ ಓದಿ ವಿವರಿಸಿ ತನ್ನ ತಪಸ್ಸನ್ನು ಜಿಪುಣನಂತೆ ಕೂಡಿಸುತ್ತ ಬಂದೆ. ಈ ತಿಂಗಳು ಲಕ್ಷ ಗಾಯತ್ರಿ, ಮುಂದಿನ ತಿಂಗಳು ಇನ್ನೊಂದು ಲಕ್ಷ ಗಾಯತ್ರಿ, ಏಕಾದಶಿ ಇನ್ನೆರಡು ಲಕ್ಷ–ಕೋಟಿಕೋಟಿ ಹೀಗೆ ತುಳಸಿಮಣಿ ಸರದಲ್ಲಿ ಮಣಿಮಣಿಗೆ ತಪಸ್ಸಿನ ಲೆಖ್ಖ ಮಾಡಿದೆ. ಒಬ್ಬ ಸ್ಮಾರ್ತ ಪಂಡಿತ ಒಮ್ಮೆ ಬಂದು ವಾದಿಸಿದ್ದ : ಸಾತ್ವಿಕರಿಗೆ ಮಾತ್ರ ಮೋಕ್ಷಪ್ರಾಪ್ತಿ ಎನ್ನುವ ಭೇದಭಾವದ ನಿಮ್ಮ ಮತ ನಿರಾಶಾವಾದವಲ್ಲವೆ ? ಅದಕ್ಕೆ ಆಚಾರ್ಯರು ತರ್ಕಮಾಡಿದ್ದರು : ನಿರಾಶಾ ಎಂದರೆ ಏನು ? ಯಾವುದಕ್ಕಾದರೂ ಆಸೆ ಪಟ್ಟು ಅದು ಸಿಗದೇ ಹೋಗೋದು ತಾನೆ ? ತಾಮಸಪ್ರವೃತ್ತಿಗೆ ಮೋಕ್ಷದ ಆಸೆಯೇ ಇಲ್ಲದ್ದರಿಂದ ಅವನಿಗೆ ಮೋಕ್ಷಪ್ರಾಪ್ತಿಯಾಗದೇ ಹೋಗೋದು ನಿರಾಶಾ ಅಲ್ಲ. ನಾನು ಸಾತ್ವಿಕ ಆಗುತ್ತೇನೆ ಎಂಬೋದು ಸುಳ್ಳು ; ನಾನು ಸಾತ್ವಿಕ ಆಗಿದ್ದೇನೆ ಎಂಬೋದು ಮಾತ್ರ ನಿಜ. ಪರಮಾತ್ಮನ ದಯಾಕ್ಕೆ ಹಲುಬೋರು ಈ ಸಾತ್ವಿಕ ಸ್ವಭಾವದವರು ಮಾತ್ರ.

ಹಾಗೇ ತಾನು ಸಾತ್ವಿಕನಾಗಿ ಹುಟ್ಟಿದ್ದೇನೆ, ಈ ರೋಗಗ್ರಸ್ತ ಹೆಂಡತಿ ತನ್ನ ಸಾತ್ವಿಕತೆಯ ಯಜ್ಞಭೂಮಿ ಎಂದು ತಿಳಿದು ಅವರು ಮೋಕ್ಷದ ಕೃಷಿಯಲ್ಲಿ ತೊಡಗಿದ್ದರು. ಹಾಗೇ ನಾರಣಪ್ಪ ತಮ್ಮ ಸಾತ್ವಿಕತೆಗೊಂದು ಪರೀಕ್ಷೆ ಎಂದು ತಿಳಿದಿದ್ದರು. ಈಗ ಅವರಿಗೆ ತನ್ನ ಸರ್ವಸ್ವ ನಂಬಿಕೆಗಳು ಬುಡಮೇಲಾಗಿ ಹದಿನಾರನೇ ವಯಸ್ಸಿನಲ್ಲಿ ತಾನು ಹೊರಟಲ್ಲಿಗೇ ಹಿಂದಕ್ಕೆ ಬಂದಂತೆ ಅನ್ನಿಸುತ್ತಿದೆ. ಎಲ್ಲಿ ದಾರಿ ?

ಪಾತಾಳದ ಅಂಚಿಗೆ ಒಯ್ಯುದಂತಹ ದಾರಿ ಎಲ್ಲಿ ? ಕಸಿವಿಸಿಯಾಗಿ ಹೆಂಡತಿಯ ಪಕ್ಕದಲ್ಲಿ ಕೂತು ಸ್ನಾನ ಮಾಡಿಸಲೆ ಎಂದು ನಿತ್ಯದಂತೆ ಎತ್ತಿ, ಶಂಖ ಜಾಗಟೆಗಳ ಅಪದ್ಧ ಕ್ರಿಯೆಯಿಂದ ಬಾಧಿತರಾಗಿ, ಬಚ್ಚಲಿಗೆ ತೆಗೆದುಕೊಂಡು ಹೋಗಿ ನೀರನ್ನು ಹೊಯ್ಯುವಾಗ ಅವಳ ಬತ್ತಿದ ಎದೆ, ಗುಜ್ಜು-ಮೂಗು, ಮೋಟು-ಜಡೆ ಕಂಡು ಅಸಹ್ಯವಾಯಿತು. ಹದ್ದುಗಳನ್ನು

ಅಟ್ಟಲೆಂದು ಶಂಖಜಾಗಟೆಗಳ ಮಂಗಳ ಶಬ್ದಮಾಡುತ್ತಿದ್ದ ಬ್ರಾಹ್ಮಣರಿಗೆ 'ನಿಲ್ಲಿಸಿ ನಿಲ್ಲಿಸಿ' ಎಂದು ಕಿರುಚಿಬಿಡಬೇಕೆನ್ನಿಸಿತು. ಪ್ರಥಮ ಬಾರಿಗೆ ತನ್ನ ಕಣ್ಣಿಗೆ ಸುಂದರ-ಅಸುಂದರದ ಕಲ್ಪನೆ ಬರಹತ್ತಿದೆ. ಈ ತನಕ ಕಾವ್ಯದಲ್ಲಿ ಓದಿದ್ದ ಸೌಂದರ್ಯವನ್ನ ಅವರು ಜೀವನದಲ್ಲಿ ಅಪೇಕ್ಷಿಸಿದ್ದಿಲ್ಲ. ಸುಗಂಧವೆಲ್ಲ ದೇವರ ಮುಡಿಯನ್ನು ಸೇರುವ ಹೂವಿನದ್ದು, ಸ್ತ್ರೀಸೌಂದರ್ಯವೆಲ್ಲ ನಾರಾಯಣನ ಪಾದಸೇವೆಯನ್ನು ಮಾಡುವ ಲಕ್ಷ್ಮಿಯದ್ದು, ರತಿಯೆಲ್ಲ ವಸ್ತ್ರಾಪಹರಣದ ಕೃಷ್ಣನದ್ದು ಎಂದುಕೊಂಡಿದ್ದರು. ಅವೆಲ್ಲದರಲ್ಲಿ ಒಂದು ಪಾಲು ಈಗ ತನಗೂ ಬೇಕೆನ್ನಿಸುತ್ತಿದೆ. ಹೆಂಡತಿಯ ಮೈಯನ್ನು ಒರೆಸಿ, ಹಾಸಿಗೆ ಮಾಡಿ ಮಲಗಿಸಿ ಮತ್ತೆ ಚಿಟ್ಟಿಗೆ ಬಂದರು. ಶಂಖ ಜಾಗಟೆಗಳ ಶಬ್ದ ಗಕ್ಕನೆ ನಿಂತು ಕಿವಿ ಗೊಯ್ಯೆಂದು ಮೌನದ ಮಡುವಿಗೆ ಇಳಿದಂತಾಯಿತು. ಇಲ್ಲಿಗೆ ಯಾಕೆ ಬಂದೆ? ಚಂದ್ರಿ ಇಲ್ಲಿದ್ದಾಳೋ ಎಂದು ಬಯಸಿ ಬಂದೆನೆ? ಆದರೆ ಚಂದ್ರಿ ಅಲ್ಲಿ ಇರಲಿಲ್ಲ. ಹಾಸಿಗೆ ಹಿಡಿದವಳು, ಕಾಡಿನಲ್ಲಿ ಗಕ್ಕನೆ ನನ್ನ ಕೈಯನ್ನು ಮೊಲೆಗೊತ್ತಿಕೊಂಡವಳು—ಇಬ್ಬರೂ ನನ್ನನ್ನು ಬಿಟ್ಟುಹೋದರೆ? ಪ್ರಥಮ ಬಾರಿಗೆ, ಅತಂತ್ರ ಅನಾಥಭಾವ ಅವರ ಅಂತರಂಗವನ್ನು ಹೊಕ್ಕಿತು.

ಹದ್ದುಗಳನ್ನು ಓಡಿಸಿದ ಬ್ರಾಹ್ಮಣರು ಪ್ರೇತಕಳೆಯ ತಮ್ಮ ಮುಖಗಳನ್ನು ಎತ್ತಿ, ಒಟ್ಟಾಗಿ ಬಂದು ಚಿಟ್ಟಿಯನ್ನು ಹತ್ತಿ ಪ್ರಶ್ನಾರ್ಥಕವಾಗಿ ಪ್ರಾಣೇಶಾಚಾರ್ಯರ ಮುಖ ನೋಡಿದರು. ಆಚಾರ್ಯರು ಉತ್ತರಿಸದೆ ವಿಲಂಬ ಮಾಡುತ್ತಿದ್ದುದು ಕಂಡು ಅವರಿಗೆ ದಿಗಿಲಾಯಿತು. ತನ್ನಿಂದ ಮಾರ್ಗದರ್ಶನವನ್ನು ಬಯಸಿ, ತಮ್ಮ ಬ್ರಾಹ್ಮಣ್ಯವನ್ನೆಲ್ಲ ಗಂಟುಕಟ್ಟಿ ತನ್ನ ತಲೆಯ ಮೇಲೆ ಹೊರೆಸಿ—ಅನಾಥರಂತೆ ತನ್ನನ್ನು ನೋಡುತ್ತಿದ್ದ ಕಣ್ಣುಗಳನ್ನು ಕಂಡು ಆಚಾರ್ಯರಿಗೆ ಪಶ್ಚಾತ್ತಾಪದ ಜೊತೆಗೆ ಮಾರ್ಗದರ್ಶನ ಮಾಡಬೇಕಾದ ತನ್ನ ಜವಾಬ್ದಾರಿ, ಅಧಿಕಾರ ನಾಶವಾಗಿ ತಾನು ಸ್ವತಂತ್ರನಾದೆ ಎಂದು ಹಗುರೆನ್ನಿಸಿತು. ನಾನು ಯಾತರವ? ನಿಮ್ಮ ಹಾಗೇ ಒಬ್ಬ ಕೇವಲ ಮನುಷ್ಯ—ರಾಗದ್ವೇಷಯುಕ್ತವಾದ ಪ್ರಾಣಿ—ಎನ್ನಿಸಿ ಹರ್ಷವಾಯಿತು. ಇದು ವಿನಯವೇ, ಅಹಂಕಾರಭಂಗವಾದ ಲಕ್ಷಣವೇ, ತನ್ನ ಮೊದಲನೆಯ ಪಾತವೇ—ಆಶೋದಯವಾದಂತಾಯಿತು, 'ಚಂದ್ರೀ—ಇಲ್ಲಿ ಬಾ, ಹೇಳು. ನನ್ನನ್ನು ಸಂಕೋಲೆಗಳಿಂದ ಪಾರುಮಾಡು. ಗುರುತ್ವದ ಹೊರೆ ಇಳಿಸು' ಎಂದು ಮನಸ್ಸಿನಲ್ಲೇ ಅಂದುಕೊಂಡು ಸುತ್ತ ಹುಡುಕಿದರು. ಇಲ್ಲ—ಅವಳು ಇಲ್ಲ. ಇಲ್ಲಿ ಎಲ್ಲೂ ಇಲ್ಲ. ಊರ್ವಶಿಯ ಹಾಗೆ ನಡೆದುಬಿಟ್ಟಳು.

ತಾನಾಗಿ ಬಾಯಿಬಿಟ್ಟು ಹೇಳಲು, ನಾರಣಪ್ಪ ಪಟ್ಟ ಸುಖದಲ್ಲಿ ನಾನೂ ಪಾಲು ಪಡೆದೆ ಎಂದು ಬಾಯಾರೆ ಅಂದುಬಿಡಲು ದಿಗಿಲಾಯಿತು. ಕೈ ಬೆವತು ತಣ್ಣಗಾಯಿತು. ಮನುಷ್ಯಮಾತ್ರದವನಿಗೆ ಸಹಜವಾದ ಸುಳ್ಳು ಹೇಳಬೇಕು, ಮುಚ್ಚಿಟ್ಟುಕೊಳ್ಳಬೇಕು, ಸ್ವಕ್ಷೇಮಚಿಂತನೆ ಮಾಡಿಕೊಳ್ಳ ಬೇಕು ಎಂಬ ಆಸೆ ಪ್ರಥಮ ಬಾರಿಗೆ ಉತ್ಪನ್ನವಾಯಿತು. ಇವರು ನನ್ನಲ್ಲಿ ಇಟ್ಟ ನಂಬಿಕೆ, ಗೌರವಗಳನ್ನು ಆಘಾತಗೊಳಿಸುವ ಧೈರ್ಯ ಒಳಗೆ ಇಲ್ಲ. ಇದು ಪಶ್ಚಾತ್ತಾಪವೋ, ಸ್ವಕ್ಷೇಮಚಿಂತನೆಯೋ, ರೂಢಿಯೋ, ತಮಸ್ಸೋ, ದಗವೋ—ಹೃದ್ಗತವಾದ ಅಭ್ಯಾಸಬಿದ್ದ ಮಂತ್ರ ಮನಸ್ಸನ್ನು ಸುಳಿಯಿತು : 'ಪಾಪೋಽಹಂ, ಪಾಪಕರ್ಮೋಽಹಂ, ಪಾಪಾತ್ಮಾ, ಪಾಪ ಸಂಭವಃ.' ಇಲ್ಲ ಇಲ್ಲ, ಅದು ಕೂಡ ಸುಳ್ಳು. ಮೊದಲು ಹೃದ್ಗತವಾದ ಮಂತ್ರಗಳನ್ನೆಲ್ಲ ಮರೆಯಬೇಕು ; ಬಾಲಕನಂತೆ ಜಳಜಳ ಮನಸ್ಸಿನವನಾಗ ಬೇಕು. ಚಂದ್ರಿಯ ಮೊಲೆಗಳನ್ನು ಹಿಸುಕುವಾಗ ಪಾಪೋಽಹಂ ಎಂದು ಅನಿಸಲಿಲ್ಲ. ಈಗ ಚಂದ್ರಿ ಇಲ್ಲಿ ತನ್ನ ಮಾನ ತೆಗೆಯಲು ಇಲ್ಲವೆಂದು ಸಂತೋಷವೇ ಆಗುತ್ತಿದೆ. ಎಚ್ಚೆತ್ತಮೇಲೆ ಬರುವ ಭಾವನೆ ಬೇರೆ, ಎಚ್ಚರ ತಪ್ಪಿದಾಗ ಅನ್ನಿಸುವುದು ಬೇರೆ. ಇಬ್ಬಂದಿ ಈ ಬಾಳೆಂದು ಅರಿವಾಯಿತು. ಈಗ ನಾನು ನಿಜವಾಗಿ ಕರ್ಮಚಕ್ರದಲ್ಲಿ ತೊಡಗಿದ್ದೇನೆ ಎನ್ನಿಸಿತು. ಈ ಸಂಕಟ ನಿವಾರಣೆಗೆ ಮತ್ತೆ ಅರಿವುಗೆಟ್ಟು ಅವಳನ್ನು ಅವುಚಿಕೊಬೇಕು, ಸಂಕಟದಲ್ಲಿ ಎಚ್ಚರವಾಗಬೇಕು, ನಿವಾರಣೆಗೆ ಅವಳ ಬಳಿಯೇ ಹೋಗ ಬೇಕು. ಚಕ್ರ, ಕರ್ಮಚಕ್ರ. ಇದು ರಜಸ್ಸು. ಕಾಮವನ್ನು ನಾನು ಬಿಟ್ಟರೂ ಕಾಮ ನನ್ನನ್ನು ಬಿಡಲಿಲ್ಲ.

ಕಸಿವಿಸಿಯಾಗಿ ಬಾಯಲ್ಲಿ ಮಾತು ಹೊರಡದೆ, ಕೂತ ಬ್ರಾಹ್ಮಣರನ್ನೆಲ್ಲ ಬಿಟ್ಟು, ದೇವರ ಕೋಣೆಗೆ ಹೋದರು. ನಾಮಸ್ಮರಣೆ ಮಾಡಿದರು—ಅಭ್ಯಾಸದಂತೆ. ನಿಜ ಹೇಳದಿದ್ದರೆ—ಮಡಿಲಿನಲ್ಲಿ ಕಟ್ಟಿಕೊಂಡ ಕೆಂಡದಂತುರಿ ದರೆ....ಇನ್ನುಮುಂದೆ ನಾನೆಂದೂ ಮಾರುತಿಯ ಮುಖ ನೋಡಲಾರೆ, ನಿಷ್ಕಲ್ಮಷ ಮನಸ್ಸಿನಿಂದ ರೋಗಗ್ರಸ್ತಳನ್ನು ಉಪಚರಿಸಲಾರೆ, ದೇವರೇ, ಈ ತಳಮಳದಿಂದ ಪಾರುಮಾಡಪ್ಪ, ಚಂದ್ರಿ ಬಂದಿದ್ದಾಳೋ, ಹೇಳಬಿಡು ತ್ತಾಳೋ—ಎಂದು ಕಾತರದಿಂದ, ಭಯದಿಂದ ಹೊರಗೆ ಬಂದರು. ಬ್ರಾಹ್ಮ ಣರು ಕಾದೇ ಇದ್ದರು. ಮತ್ತೆ ರಣಹದ್ದುಗಳು ಬಂದು ಮನೆಗಳ ಮೇಲೆ ಕೂತಿದ್ದವು. ಆಚಾರ್ಯರು ಕಣ್ಣು ಮುಚ್ಚಿ ಉಸಿರೆಳೆದು ಧೈರ್ಯ ತಂದು

ಕೊಂಡರು. ಆದರೆ ಹೊರಟ ಮಾತು ಮಾತ್ರ :

"ನಾನು ಸೋತೆ, ಮಾರುತಿಯ ಅಪ್ಪಣೆ ದೊರೆಯಲಿಲ್ಲ. ನನಗೆ ಏನೂ ತಿಳಿಯದು. ಈಗ ನೀವು ನಿಮ್ಮ ಮನಸ್ಸಿಗೆ ಅನ್ನಿಸಿದಂತೆ ಮಾಡಿ."

ಬ್ರಾಹ್ಮಣರೆಲ್ಲರೂ ಅವಾಕ್ಕಾಗಿ 'ಹಾ' ಎಂದರು. 'ಛೆ ಛೆ' ಎಂದ ಗರುಡಾಚಾರ್ಯ. ಹಿಂದಿನ ದಿನ ಹೊಟ್ಟೆ ತುಂಬ ಉಂಡಿದ್ದರಿಂದ ಸ್ವಲ್ಪ ಜೀವವಿದ್ದ ದಾಸಾಚಾರ್ಯ ಹೇಳಿದ :

"ಏನು ಮಾಡೋಣ ಹಾಗಾದರೆ ? ಕೈಮರದ ಅಗ್ರಹಾರಕ್ಕೆ ಹೋಗುವ. ಅಲ್ಲಿ ಪಂಡಿತ ಸುಬ್ಬಣ್ಣಾಚಾರ್ಯರನ್ನು ಕೇಳಿ ನೋಡುವ. ನಮ್ಮ ಆಚಾರ್ಯರಿಗೆ ತಿಳಿಯದಿದ್ದುದು ಅವರಿಗೆ ತಿಳಿಯುತ್ತೆ ಎಂದಲ್ಲ. ಅವರಿಗೂ ತಿಳಿಯದೇ ಹೋದ ಪಕ್ಷದಲ್ಲಿ ನಡೆದು ಸೀದ ಮಠಕ್ಕೆ ಹೋಗಿ ಸ್ವಾಮಿಗಳನ್ನೇ ಕೇಳಿಬಿಡುವ. ಈ ದುರ್ಜಾತದಲ್ಲಿ ಶವಾನ್ನ ಇಟ್ಟುಕೊಂಡು ಊಟ-ಉಪಾಹಾರವಿಲ್ಲದೆ ಅಗ್ರಹಾರದಲ್ಲಿ ಬಿದ್ದಿರಲಿಕ್ಕಾಗುತ್ತದ? ಗುರುದರ್ಶನವಾದ ಹಾಗೂ ಆಯಿತು. ಅಲ್ಲದೆ ತ್ರಯೋದಶಿ ದಿನ ಮಠದಲ್ಲಿ ಆರಾಧನೆ ಬೇರೆ ಇದೆ. ಏನೊಂತೀರ ? ಕೈಮರಕ್ಕೆ ನಡೆದು ಯಜ್ಞೋಪವೀತ ಬದಲಾಯಿಸುವ. ಅಲ್ಲಿ ಬ್ರಾಹ್ಮಣರು ಊಟಕ್ಕೇಳಿ ಎನ್ನದೇ ಇರುತ್ತಾರ? ಹೆಣವಿರುವ ಅಗ್ರಹಾರದಲ್ಲಿ ಊಟಮಾಡಬಾರದೆಂದು ನಿಯಮವೇ ಹೊರತು ಕೈಮರದಲ್ಲಿ ಏನು ದೋಷ ? ಏನೊಂತೀರ ?"

ಎಲ್ಲ ಬ್ರಾಹ್ಮಣರೂ ಸರಿ ಸರಿ ಎಂದು ಒಪ್ಪಿದರು. ಲಕ್ಷ್ಮಣಾಚಾರ್ಯ ನೆನೆಸಿಕೊಂಡ : ಕೈಮರದಲ್ಲಿ ವೆಂಕಣ್ಣಾಚಾರ್ಯ ಒಂದು ನೂರು ದೊನ್ನೆ ಒಂದು ಸಾವಿರ ಒಣಗಿದೆಲೆ ಬೇಕು ಎಂದಿದ್ದ. ತೆಗೆದುಕೊಂಡು ಹೋಗಿ ಕೊಟ್ಟ ಹಾಗೂ ಆಯಿತು. ಗರುಡಾಚಾರ್ಯನಿಗೂ ಶ್ರೀಗುರುಗಳ ಹತ್ತಿರ ಸ್ವಲ್ಪ ವ್ಯವಹಾರದ ಮಾತೂ ಇತ್ತು. ಪ್ರಾಣೇಶಾಚಾರ್ಯರಿಗೆ ಈ ಸೂಚನೆಯಿಂದ ದೊಡ್ಡದೊಂದು ಭಾರ ಇಳಿದು ಆಯಾಸ ಪರಿಹಾರವಾದಂತಾಯಿತು.

ದಾಸಾಚಾರ್ಯ ತನ್ನ ಮಾತನ್ನು ಎಲ್ಲರೂ ಒಪ್ಪಿದ್ದು ಕಂಡು ಪರಮ ಹರ್ಷಿತನಾಗಿ ಎಂದ :

"ಮೂರು ದಿನವಾದರೂ ನಾವು ಅಗ್ರಹಾರ ಬಿಟ್ಟಿರಬೇಕಾಗುತ್ತೆ. ಹೆಂಗಸರು ಮಕ್ಕಳ ಗತಿ ಏನು. ಸದ್ಯಕ್ಕೆ ಅವರನ್ನು ತೌರಿಗೆ ಕಳಿಸುವ ?"

ಇದಕ್ಕೆ ಎಲ್ಲರೂ ಒಪ್ಪಿದರು.

# ಅಧ್ಯಾಯ : ನಾಲ್ಕು

ಪುನೆಗೆ ಮರಳಿದ ದುರ್ಗಾಭಟ್ಟ ಈ ಮಾಧ್ವ ಮುಂಡೇಗಂಡರ ಸಹವಾಸ ದಲ್ಲಿ ಕೆಟ್ಟೆನೆಂದುಕೊಂಡು, ಗಾಡಿ ಕಟ್ಟಿಸಿ, ಹೆಂಡತಿಮಕ್ಕಳ ಜೊತೆ ಅವನ ಅತ್ತೆಯ ಊರಿಗೆ ಹೋಗಿಬಿಟ್ಟ. ಲಕ್ಷ್ಮಣಾಚಾರ್ಯ ಬಾಳೆಲೆ ದೊನ್ನೆ ಗಳನ್ನು ಕಟ್ಟಿಕೊಂಡು, ದಾಸಾಚಾರ್ಯ ದಾರಿಗೆಂದು ಅರಳು ಕಟ್ಟಿಕೊಂಡು, ಹೆಂಗಸರು ಮಕ್ಕಳನ್ನು ತೌರಿಗೆಂದು ಎಬ್ಬಿಸಿ, ಲಕ್ಷ್ಮೀದೇವಮ್ಮನನ್ನು ಲಕ್ಷ್ಮಣನ ಅತ್ತೆಯ ಮನೆಗೆ ಹೊರಡಿಸಿ, ಬ್ರಾಹ್ಮಣರೆಲ್ಲರೂ ಪ್ರಾಣೇಶಾ ಚಾರ್ಯರ ಜಗುಲಿ ಸೇರುವ ವೇಳೆಗೆ ಆಚಾರ್ಯರ ಹೆಂಡತಿ ಮುಟ್ಟಾಗಿ ಬಿಟ್ಟಿದ್ದಳು. "ಹಾಸಿಗೆ ಹಿಡಿದವಳನ್ನು ನಾನು ಬಿಟ್ಟು ಬರುವಂತಿಲ್ಲ, ನೀವು ಹೋಗಿ" ಎಂದರು ಆಚಾರ್ಯರು. ಸರಿ ಎಂದು ಬ್ರಾಹ್ಮಣರು ಹೊರಬಂದು, ಮನೆಗಳ ಮೇಲೆ ಕೂತ ಹದ್ದುಗಳನ್ನು ಲೆಕ್ಕಿಸದೆ ಆತುರವಾಗಿ ಕೈಮರದ ಮಾರ್ಗದಲ್ಲಿ ನಡೆದುಬಿಟ್ಟರು.

ಕೈಮರ ಸೇರುವಾಗ ಮಧ್ಯಾಹ್ನದ ಧಗೆ ಆರಿ ಸಂಜೆಯಾಗಿತ್ತು. ಸ್ನಾನ ಮಾಡಿ, ಯಜ್ಞೋಪವೀತ ಬದಲಾಯಿಸಿ, ಗೋಪಿಚಂದನಗಳನ್ನು ಧರಿಸಿ ಸುಬ್ಬಣ್ಣಾಚಾರ್ಯರ ಜಗುಲಿಯ ಮೇಲೆ ಕೂತರು. ಮೊದಲು ಊಟ ವಾಗಲಿ ಎಂದರು ಪಂಡಿತರು. ಅದೇ ಸೂಚನೆಗೆಂದು ಕಾದ ಬ್ರಾಹ್ಮಣರು ಬಿಸಿ ಬಿಸಿ ಅನ್ನಸಾರನ್ನು ಒಳಗಿನ ಪರಮಾತ್ಮನಿಗೆ ತಾಗುವಂತೆ ಸುರಿದು, ಹಿತವಾದ ಆಯಾಸದಲ್ಲಿ ಸುಬ್ಬಣ್ಣಾಚಾರ್ಯರ ಸುತ್ತ ನೆರೆದರು. ಸುಬ್ಬ ಣ್ಣಾಚಾರ್ಯರು ಜ್ಯೋತಿಷಿಗಳಾದ್ದರಿಂದ ನಾರಣಪ್ಪ ಸತ್ತ ವೇಳೆ ಅಮೃ ತವೋ ವಿಷವೋ ಎಂದು ತಿಳಿದರೆ ಸಂಸ್ಕಾರದ ಅರ್ಹತೆ ಅನರ್ಹತೆಯ ಬಗ್ಗೆ ಹೊಳೆಯಬಹುದೆಂದು, ಕನ್ನಡಕ ಧರಿಸಿ ಪಂಚಾಂಗ ನೋಡಿ, ಕವಡೆಗಳನ್ನು ಎಣಿಸಿ—"ವಿಷ" ಎಂದರು, 'ಪ್ರಾಣೇಶಾಚಾರ್ಯರಿಗೆ ತಿಳಿಯದಿದ್ದನ್ನು ನಾನು ಹೇಗೆ ಹೇಳಲಿ' ಎಂದು ತಲೆಯಾಡಿಸಿದರು. ದಾಸಾಚಾರ್ಯನಿಗೆ ಇದರಿಂದ ಸಂತೋಷವೇ ಆಯಿತು ; ಹೊರಟವರು ಹಾಗೆ, ಮಠಕ್ಕೂ ಹೋಗಿ ಆರಾಧನೆಯ ಪ್ರಸಾದ ಸ್ವೀಕರಿಸಿ ಬಂದುಬಿಡಬಹುದಲ್ಲ ಎಂದು.

"ಕತ್ತಲೆಯಾಯಿತಲ್ಲ. ಇವತ್ತು ರಾತ್ರೆ ಇಲ್ಲೇ ತಂಗಿ, ನಸುಕಿನಲ್ಲೆದ್ದು ಮುಂದೆ ಹೊರಡಿ—" ಎಂದು ಕೈಮರದವರು ಮಾಡಿದ ಉಪಚಾರಕ್ಕೆ ಬ್ರಾಹ್ಮಣರು ಬೇಡವೆನ್ನಲಿಲ್ಲ. ಆದರೆ ನಸುಕಿನಲ್ಲೆದ್ದಾಗ ದಾಸಾಚಾರ್ಯ ಜ್ವರ

ಬಂದು ಹಾಸಿಗೆ ಹಿಡಿದಿದ್ದ. ಎಚ್ಚಿಸಹೋದರೆ ಅವನಿಗೆ ಧ್ಯಾಸವೇ ಇರಲಿಲ್ಲ. ತುಂಬ ಉಂಡು ಅಜೀರ್ಣವಾಗಿರಬೇಕೆಂದು ಗರುಡಾಚಾರ್ಯ ಸಮಾಧಾನ ಹೇಳಿದ. ಪಾಪ! ಅವನಿಗೆ ಆರಾಧನೆಯ ಊಟ ತಪ್ಪಿತಲ್ಲ ಎಂದು ಬಡ ಬ್ರಾಹ್ಮಣರು ಕೊರಗಿದರು. ಅವಸರವಾಗಿ ಎದ್ದು ಮುಖ ತೊಳೆದು ಅವಲಕ್ಕಿ –ಮೊಸರು ತಿಂದು, ನಿಧಾನವಾಗಿ ಇಪ್ಪತ್ತು ಮೈಲಿ ನಡೆದು ಕತ್ತಲಾಗುವ ಹೊತ್ತಿಗೆ ಇನ್ನೊಂದು ಅಗ್ರಹಾರವನ್ನು ತಲ್ಪಿದರು. ಅವತ್ತು ರಾತ್ರಿ ಅಲ್ಲೇ ಊಟಮಾಡಿ ನಸುಕಿನಲ್ಲೆದ್ದಾಗ ಪದ್ಮನಾಭಾಚಾರ್ಯ ಜ್ವರ ಏರಿ ಮಲಗಿದ್ದ. ನಡೆದ ಆಯಾಸವಿರಬೇಕೆಂದು ಅವನನ್ನು ಅಲ್ಲೇ ಬಿಟ್ಟು ಮತ್ತೆ ಹತ್ತು ಮೈಲಿ ನಡೆದು ಮಠವನ್ನು ತಲ್ಪುವಾಗ ಮಧ್ಯಾಹ್ನದ ಪೂಜೆಗೆ ನಗಾರಿ ಬಾರಿಸುತ್ತಿತ್ತು.

## ಅಧ್ಯಾಯ : ಐದು

ಹಾಸಿಗೆ ಹಿಡಿದು ಜ್ವರ ಬಂದು ಬಹಿಷ್ಕೃಯಾದ ಹೆಂಡತಿಯನ್ನು ಬಿಟ್ಟರೆ, ಹದ್ದು, ಕಾಗೆಗಳನ್ನುಳಿದು ನರಪ್ರಾಣಿ ಕಣ್ಣಿಗೆ ಬೀಳದಿದ್ದ ಅಗ್ರಹಾರದಲ್ಲಿ ಪ್ರಾಣೇಶಾಚಾರ್ಯರು ಒಬ್ಬರೇ ಉಳಿದರು. ಪೂಜೆಪುನಸ್ಕಾರಾದಿ ಕರ್ಮ ಗಳು ನಿಂತು ಭಣಗುಟ್ಟುವ ಭಯಂಕರ ಶೂನ್ಯ ಕವಿದುಬಿಟ್ಟಿತ್ತು. ಮೂಗಿಗೆ ಅಡರಿ ಪ್ರಾಣಸ್ಥವಾಗಿ ನಿಂತ ದುರ್ವಾಸನೆ, ಮನೆಮನೆಗೂ ಕೂತ ಹದ್ದುಗಳು ನಾರಣಪ್ಪನ ಶವವನ್ನು ಮರೆಯಲು ಬಿಡದಂತೆ ಕಾಡಿದವು. ದೇವರ ಕೋಣೆಗೆ ಹೋದ ಪ್ರಾಣೇಶಾಚಾರ್ಯರು—ಇಲಿಯೊಂದು ಬಂದು ಅಪ್ರದಕ್ಷಿಣೆ ಸುತ್ತಿ ಅಂಗಾತ್ತನೆ ಬಿದ್ದು ನಿಶ್ಚೇಷ್ಟಿತವಾದ್ದನ್ನು ಕಂಡು, ಹೇಸಿ, ಬಾಲದಿಂದೆತ್ತಿ ಹದ್ದಿಗೆ ಹಾಕಿ ಬಂದರು. ಒಳಗೆ ಬಂದರೆ ಕಾಗೆಹದ್ದುಗಳ ಕರ್ಕಶ ಗದ್ದಲಕ್ಕೆ ಭೀತರಾಗಿ ಹೊರಬಂದರು. ಮಧ್ಯಾಹ್ನದ ಯಮುಸಪೌಸದ ಬಿಸಿಲಿಗೆ ಕಣ್ಣನ್ನು ಮೇಲೆತ್ತಲಾರದೆ 'ಹುಶ್' 'ಹುಶ್' ಎಂದು ಬರಿದೇ ಕೂಗಿಕೊಂಡರು. ಹೊಟ್ಟೆಯ ಸಂಕಟ ತಡೆಯಲಾರದೆ ಪೇಚಾಡಿ, ಧೋತ್ರದಲ್ಲಷ್ಟು ರಸಬಾಳೆ ಹಣ್ಣುಗಳನ್ನು ಕಟ್ಟಿಕೊಂಡು, ಸ್ನಾನಮಾಡಿ, ಹೊಳೆ ದಾಟಿ, ಮರದ ನೆರಳಿನಲ್ಲಿ ಕೂತು ತಿಂದರು. ನೆಮ್ಮದಿಯಾಯಿತು. ಚಂದ್ರಿ ತನ್ನ ಮಡಿಲಿನ ಹಣ್ಣನ್ನು ತಿನ್ನಿಸಿದ ಕತ್ತಲಿನ ನೆನಪಾಯಿತು.

ಆಗ ತಾನು ಅವಳನ್ನು ಮುಟ್ಟಿದ್ದು ಪಶ್ಚಾತ್ತಾಪದಿಂದಲೋ ?—ಅನುಮಾನವಾಯಿತು. ಪಶ್ಚಾತ್ತಾಪದ, ಮರುಕದ ರೂಪತಾಳಿ ನನ್ನನ್ನು ಇಷ್ಟು ದಿನ ನಡೆಸಿಕೊಂಡು ಬಂದಿದ್ದ ಧರ್ಮ, ಪಳಗಿಸಿಟ್ಟ ಹುಲಿಯಂತಹ ಕಾಮ ಇದ್ದಿರಬೇಕು–ಅಷ್ಟೆ. ಚಂದ್ರಿಯ ಮೊಲೆ ತಾಗಿದಾಕ್ಷಣ ಚಂಗನೆ ಸ್ವಧರ್ಮಕ್ಕೆ ನೆಗೆದು ಹಲ್ಲು ತೋರಿಸಿಬಿಟ್ಟಿತು. ನಾರಣಪ್ಪ ಹೇಳಿದ ಮಾತು ನೆನಪಾಯಿತು: 'ಗೆಲ್ಲುವುದು ನಾನೊ ನೀವೊ ನೋಡುವ....ಮತ್ಸ್ಯಗಂಧೀನ್ನ ತಬ್ಬಿಕೊಂಡು ಮಲಗಿ'....ನಮ್ಮ ಕರ್ಮಕ್ಕೆಲ್ಲ ತದ್ವಿರುದ್ಧ ಫಲ ದೊರೆಯುತ್ತದೆಂಬುದಕ್ಕೊಂದು ಕತೆ ಹೇಳಿದ್ದ. ನಾನು ಶಾಕುಂತಳ ಓದಿದಾಗ ಅವನು ಅಂದ ಹಾಗೇ ಆಗಿರಬೇಕು. ನಾರಣಪ್ಪನಿಂದಲ್ಲ—ನನ್ನ ಹಟದಿಂದ, ನನ್ನ ಕರ್ಮದಿಂದ ಈ ಅಗ್ರಹಾರದ ಬಾಳು ಬುಡಮೇಲಾಗಿಬಿಟ್ಟಿರಬಹುದು. ಯಾವ ಯುವಕ ಹಾಗೆ ನದಿಗೆ ಹೋಗಿ ಹೊಲತಿಯೊಬ್ಬಳನ್ನು ತಬ್ಬಿಕೊಂಡಿದ್ದಿರಬಹುದು ? ನನ್ನ ವರ್ಣನೆ ಕೇಳಿ ? ಶಕುಂತಳೆಯನ್ನು ಮನಸ್ಸಿಗೆ ತರುವಂತಹ ಹೊಲೆಯರ ಹುಡುಗಿ ಯಾರಿದ್ದಿರಬಹುದು ? ಆಚಾರ್ಯರ ಕಲ್ಪನೆ—ಮೊದಲ ಬಾರಿಗೆ—ತಾನೆಂದೂ ಗಮನಿಸದಿದ್ದ ಅಸ್ಪೃಶ್ಯ ಹುಡುಗಿಯರನ್ನೆಲ್ಲ ಎಳೆದು ತಂದು ನಿರ್ವಸ್ತ್ರಗೊಳಿಸಿ ನೋಡಿತು. ಯಾರು ? ಯಾರು ?—ಬೆಳ್ಳಿ ? ಹೌದು ಬೆಳ್ಳಿ. ತಾನು ಹಿಂದೆಂದೂ ಲೆಖ್ಖಕ್ಕೆ ತಾರದ ಅವಳ ಮಣ್ಣಿನ ಬಣ್ಣದ ಮೊಲೆಗಳ ಕಲ್ಪನೆಯಾಗಿ ಮೈ ಜುಮ್ಮೆಂದಿತು. ತನ್ನ ಕಲ್ಪನೆಗೆ ತಾನೇ ಕಂಗಾಲಾದರು. ನಾರಣಪ್ಪ ಗೇಲಿಗೆ ಹೇಳಿದ್ದ : ಬ್ರಾಹ್ಮಣ್ಯ ಉಳಿಯಲು ವೇದ ಪುರಾಣಗಳನ್ನು ಅರ್ಥ ತಿಳಿಯದೆ ಓದಬೇಕು ಅಂತ. ತನ್ನಲ್ಲಿದ್ದ ಮರುಕದಲ್ಲಿ, ಜ್ಞಾನದಲ್ಲಿ ಉಳಿದ ಬ್ರಾಹ್ಮಣರ ಮೌಢ್ಯದಲ್ಲಿರದಂತಹ ಒಂದು ಸಿಡಿಯುವ ಕಿಡಿ ಹುದುಗಿದ್ದಿರಬೇಕು. ಈಗ ಚಂಗನೆ ಪಳಗಿಸಿಟ್ಟ ಹುಲಿ ನೆಗೆದು ಹಲ್ಲು ತೋರಿಸುತ್ತಿದೆ—

ಬೆಳ್ಳಿಯ ಮೊಲೆಗಳನ್ನೂ ಹೋಗಿ ಮೃದುವಾಗಿ ಅಮುಕಬೇಕೆನ್ನಿಸುತ್ತಿದೆ. ಅನುಭವಕ್ಕಾಗಿ ದಾಹವಾಗುತ್ತಿದೆ. ಇಷ್ಟು ದಿನ ತಾನು ಬದುಕಲೇ ಇಲ್ಲ: ಮಾಡಿದ್ದನ್ನೆ ಮಾಡಿಕೊಂಡಿದ್ದು, ಹೇಳಿದ ಗಾಯತ್ರಿಯನ್ನೆ ಹೇಳಿಕೊಂಡಿದ್ದು, ನಿರನುಭವಿಯಾಗಿ ಉಳಿದುಬಿಟ್ಟೆ. ಅನುಭವ ಎಂದರೆ ಆಘಾತ. ಇರದೇ ಇದ್ದುದೊಂದು ಕತ್ತಲಿನಲ್ಲಿ, ಕಾಡಿನಲ್ಲಿ ನಿರಪೇಕ್ಷಿತವಾಗಿ ಬಂದು ಸೇರಿಕೊಳ್ಳೋದು. ಬಯಸಿದ್ದು ಕೈಗೂಡೋದು ಪರಮ ಅನುಭವಾಂತ ತಿಳಿದಿದ್ದೆ : ನಾವು ಕಾಣದಿದ್ದುದು ನಮ್ಮ ಜೀವಕ್ಕೆ ಮೊಲೆಗಳಂತೆ ಒಡ್ಡಿ ಬಂದು ಹೊಕ್ಕು

ಬಿಡೋದು ಅನುಭವಾಂತ ಈಗ ಅನ್ನಿಸುತ್ತೆ. ನನಗೆ ಹೆಣ್ಣಿನ ಸ್ಪರ್ಶವಾದಂತೆ ನಾರಣಪ್ಪನಿಗೆ ಕತ್ತಲಿನಲ್ಲಿ ನಿರಪೇಕ್ಷಿತವಾಗಿ ಪರಮಾತ್ಮಸ್ಪರ್ಶವಾಗಿದ್ದರೆ— ಬಿದ್ದ ಮಳೆಗೆ ಮೃದುವಾಗಿ, ಒತ್ತಿದ ಮಣ್ಣಿಗೆ ಪುಳಕಿತವಾಗಿ ಒಟೆ ಒಡೆದು ಸಸಿಯಾಗುತ್ತದೆ: ಹಟ ಮಾಡಿದರೆ ಗೊರಟವಾಗಿ ಒಣಗುತ್ತದೆ. ನಾರಣಪ್ಪ ಹಟದ ಗೊರಟವಾಗಿದ್ದು ಈಗ ಸತ್ತು ನಾರುತ್ತಿದ್ದಾನೆ. ಚಂದ್ರಿಯನ್ನು ಮುಟ್ಟುವ ವರೆಗೆ ನಾನು ಅವನಿಗೆ 'ಪ್ರತಿಹಟ'ದ ಗೊರಟವಾಗಿ ಉಳಿದೆ.... ನಾನು ಕಾಮನ್ನ ಬಿಟ್ಟರೂ ಕಾಮ ನನ್ನನ್ನು ಬಿಡದಷ್ಟೇ ಸಹಜವಾಗಿ ಯಾಕೆ ಪರಮಾತ್ಮ ನಮ್ಮನ್ನು ಬಂದು ಮುಟ್ಟಬಿಡಬಾರದು?

ಈಗ ಚಂದ್ರಿ ಎಲ್ಲಿ? ನನಗೆ ಕಷ್ಟವಾಗಬಾರದೆಂದು ಶವದ ಜೊತೆ ಹೋಗಿ ಕೂತುಬಿಟ್ಟಳೋ, ಆ ದುರ್ನಾತವನ್ನು ಹೇಗೆ ಸಹಿಸುವಳೋ—ಕಳವಳ ವಾಯಿತು. ಹೊಳೆಯ ನೀರಿಗೆ ಬಿದ್ದು ಈಜಿದರು. ಇಲ್ಲೇ, ಹೀಗೆ, ಈಜುತ್ತ' ಇದ್ದುಬಿಡುವ ಎನ್ನಿಸಿತು. ತಾಯಿಯ ಕಣ್ಣು ತಪ್ಪಿಸಿ ಹೊಳೆಯಲ್ಲೀಜಲು ತಾನು ಬಾಲಕನಾಗಿದ್ದಾಗ ಓಡುತ್ತಿದ್ದ ದಿನಗಳು ನೆನಪಾದುವು. ಎಷ್ಟು ವರ್ಷಗಳನಂತರ ನನ್ನ ಬಾಲ್ಯದ ಆಸೆ ಹೀಗೆ ಮರುಕಳಿಸಿಬಿಟ್ಟಿತಲ್ಲ ಎಂದು ಆಶ್ಚರ್ಯವಾಯಿತು. ತಾಯಿಗೆ ತಿಳಿಯದಿರಲೆಂದು ಈಜಿ, ಮರಳಿನಲ್ಲಿ ಮಲಗಿ ಮೈಯೊಣಗಿಸಿಕೊಂಡು ಹೋಗುತ್ತಿದ್ದೆ. ತಣ್ಣೀರಿನಲ್ಲಿ ಈಸಿದನಂತರ ಕಾದ ಮರಳಿನಲ್ಲಿ ಹೊರಳುವುದಕ್ಕೆ ಸಮನಾದ ಸುಖ ಇನ್ನೆಲ್ಲಿದೆ? ಅಗ್ರಹಾರಕ್ಕೆ ಮರಳಲು ಮನಸ್ಸಾಗಲಿಲ್ಲ. ದಡಕ್ಕೆದ್ದು ಬಂದು ಮರಳಿನಲ್ಲಿ ಮಲಗಿದರು. ಮಧ್ಯಾಹ್ನದ ಧಗೆಗೆ ಕ್ಷಣದಲ್ಲಿ ಮೈ ಆರಿ ಬೆನ್ನು ಸುಡಹತ್ತಿತು.

ಥಟ್ಟನೊಂದು ಹೊಳೆದು ಎದ್ದರು. ಮಣ್ಣಿಗೆ ಮೂಗಿಟ್ಟು ನಡೆಯುವ ಮೃಗದಂತೆ ತಾನು ಚಂದ್ರಿಯನ್ನು ಕೂಡಿದ ಕಾಡು ಹೊಕ್ಕರು. ಹಾಡು ಹಗಲಿನಲ್ಲೂ ಮಬ್ಬು ಮಬ್ಬು. ಜೀರ್‍ರೆನುವ ಕತ್ತಲು ಮೊಟ್ಟುಪೊದೆಗಳಲ್ಲಿ. ತನ್ನ ಬಾಳು ಹೊರಳಿಕೊಂಡ ಜಾಗದಲ್ಲಿ—ಅಂತಃಪ್ರೇರಣೆಯಿಂದೆಂಬಂತೆ— ಬಂದು ನಿಂತರು. ಹಸಿರಾದ ಹುಲ್ಲಿನ ಮೇಲೆ ಒತ್ತಿದ ಮೈಯ ಆಕಾರ ಇನ್ನೂ ಉಳಿದಿತ್ತು. ಕೂತರು. ಮಂಕಾದವರಂತೆ ಹುಲ್ಲಿನ ಗರಿಕೆಗಳನ್ನು ಕಿತ್ತು ಮೂಸಿನೋಡಿದರು. ಅಸಹ್ಯವಾಗಿ ನಾರುವ ಅಗ್ರಹಾರದಿಂದ ಬಂದವರಿಗೆ ಮೃದು ಹಸಿಮಣ್ಣು ಹತ್ತಿಕೊಂಡ ಹುಲ್ಲಿನ ಬೇರಿನ ವಾಸನೆ ಚಟದಂತೆ ಕಾಡಿತು. ನೆಲವನ್ನು ಹೆಕ್ಕುವ ಕೋಳಿಯಂತೆ ಕೈಗೆ ಸಿಕ್ಕಿದ್ದನ್ನು ಕಿತ್ತು ಕಿತ್ತು ಮೂಸಿದರು. ಹೀಗೆ ಮರದ ನೆರಳಿನಲ್ಲಿ ತಂಪಾಗಿ ಕೂತಿರುವುದೇ ಒಂದು

ಪುರುಷಾರ್ಥವೆನ್ನಿಸಿತು. ಇದ್ದು ಬಿಡುವುದು. ಹುಲ್ಲಿಗೆ, ಹಸಿರಿಗೆ, ಹೂವಿಗೆ, ನೋವಿಗೆ, ಬಿಸಿಲಿಗೆ, ತಂಪಿಗೆ ಚುರುಕಾಗಿ ಇದ್ದು ಬಿಡುವುದು. ಕಾಮ ಪುರುಷಾರ್ಥಗಳೆರಡನ್ನೂ ಸರಿಸಿಬಿಟ್ಟು—ಉದ್ವಾಹುವಿನಂತೆ ನೆಗೆಯುತ್ತಿರದೆ—ಬರಿದೇ ಇದ್ದು ಬಿಡುವುದು. 'ಇಕೊ' ಎಂದು ಅವ್ಯಕ್ತದಿಂದ ಬಂದದ್ದನ್ನ ಕೃತಜ್ಞತೆಯಿಂದ ಸ್ವೀಕರಿಸುವುದು. ಧರೆ ಹತ್ತುವ ಪರದಾಟ ಬೇಡ. ಕೈಗೊಂದು ಸುಗಂಧಿ ಸಸಿ ತಾಗಿತು. ಎಳೆದರು. ಭದ್ರವಾಗಿ ಬೇರು ನೆಟ್ಟಿ ನೀಳಬಳ್ಳಿಯಾದ ಸುಗಂಧಿ ಜಗ್ಗಲಿಲ್ಲ. ಹುಲ್ಲಿನಂತಲ್ಲದೆ, ಹುದುಲು ಹಸಿ ಮಣ್ಣಿನಾಚೆ ಗಟ್ಟಿನೆಲದಲ್ಲಿ ಅದರ ಚೂಪು ಚುರುಕು ಬೇರು ನೆಟ್ಟಿತ್ತು. ಎದ್ದು ಕೂತು ಎರಡು ಕೈಯಲ್ಲೂ ಜಗ್ಗಿದರು. ತಾಯಿಬೇರು ಅರ್ಧ ಕಡಿದು ಕೊಂಡು ಬಳ್ಳಿಯಾಗಿ ಬೆಳೆದ ಸುಗಂಧಿ ಕೈಗೆ ಬಂತು. ಮೂಸಿದರು. ದೀರ್ಘ ವಾಗಿ ಉಸಿರನ್ನೆಳೆದುಕೊಳ್ಳುತ್ತ ಬೇರನ್ನು ಮೂಸಿದರು. ಮಣ್ಣು ಮತ್ತು ಆಕಾಶದ, ತಂಪು ಮತ್ತು ಬಿಸಿಲಿನ ಎಣೆಯಾಗಿ, ಗಂಟಾಗಿ, ನೆಂಟಾಗಿ ಸುಗಂಧಿಯ ಬೇರು ಪಡೆದ ವಾಸನೆ ಪಂಚಪ್ರಾಣಕ್ಕಿಳಿಯಿತು. ಆಸೆಬುರುಕ ನಂತೆ ಮೂಸುತ್ತಲೇ ಕೂತರು. ಸುಗಂಧ ಮೂಗಿನಲ್ಲಿ ನಿಂತು, ಸುವಾಸನೆ ಪ್ರಾಣಗತವಾಗಿ, ಪರಿಮಳದ ಅನುಭವ ಮಾಯವಾಗಿ ಅತೃಪ್ತಿಯಾಯಿತು. ಬೇರನ್ನು ಮೂಗಿನಿಂದ ದೂರವಿಟ್ಟು, ಕಾಡಿನ ವಾಸನೆಯನ್ನು ಆಘ್ರಾಣಿಸು ತ್ತಿದ್ದು, ಮತ್ತೆ ನವ್ಯವಾದ ಸುಗಂಧಿಯನ್ನು ಮೂಸಿದರು. ಎದ್ದು ಕಾಡು ಬಿಟ್ಟು, ಹೊರಗೆ ಬಂದು, ನೆರಳಿನಲ್ಲಿ ನೀಲಮಣಿಗಳಾದ ವಿಷ್ಣುಕಾಂತಿಯ ತುಣುಕುಮಿಣುಕುಗಳನ್ನು—ನೋಡುವುದೇ ಪರಮೈಶ್ವರ್ಯವೆನ್ನುವಂತೆ—ನೋಡುತ್ತಾ ನಿಂತರು. ತಿರುಗಿ ಹೊಳೆಯಲ್ಲಿಳಿದು ಈಜಿದರು. ಕಂಠದವರೆಗೆ ನೀರಿರುವ ಮಡುವಿನಲ್ಲಿ ಬಂದು ನಿಂತರು. ಮೀನುಗಳು ಮುತ್ತಿ ಕಚಕುಳಿಯ ಅವರ ಕಾಲುಬೆರಳಿನ ಸಂದಿಗಳನ್ನು, ಕಂಕುಳನ್ನು ಪಕ್ಕೆಗಳನ್ನು ಚುಚ್ಚಿದುವು. ಪ್ರಾಣೇಶಾಚಾರ್ಯರು ಅಹಹಾ ಎನ್ನುತ್ತ ಕಚಕುಳಿಗೆ ಓಡುವ ಬಾಲಕನಂತೆ ನೀರಿಗೆ ಈಸುಬಿದ್ದು, ದಡ ಸೇರಿ, ಬಿಸಿಲಿನಲ್ಲಿ ನಿಂತು ಒಣಗಿಸಿಕೊಂಡರು. ಹೆಂಡತಿಗೆ ಗಂಜಿ ಕೊಡುವ ಹೊತ್ತಾಯಿತೆಂದು ಅರಿವಾಗಿ ಬೇಗ ಬೇಗ ನಡೆದು ಅಗ್ರಹಾರಕ್ಕೆ ಬಂದರು.

ಥಟ್ಟನೆ ಕಾಗೆ ರಣಹದ್ದುಗಳನ್ನು ಕಂಡು ಕಪಾಳಕ್ಕೆ ಫಟೇರನೆ ಏಟು ಬಿದ್ದಂತಾಯಿತು. ಮನೆಗೆ ಬಂದು ನೋಡಿದರೆ ಹೆಂಡತಿಯ ಮುಖ ಕೆಂಪಾಗಿ ಕುದಿಯುತ್ತಿತ್ತು. 'ಇವಳೇ ಇವಳೇ' ಎಂದು ಕೂಗಿದರು. ಉತ್ತರವಿಲ್ಲ.

ಜ್ವರ ಏರಿರಬಹುದೆ? ಬಹಿಷ್ಠೆಯಾದವಳನ್ನು ಮುಟ್ಟುವುದು ಹೇಗೆ? 'ಛೆ' ಎಂದು ತಮ್ಮ ಜಾಡು ಹಿಡಿದ ಸಂಕೋಚಕ್ಕೆ ಹೇಸಿ, ಅವಳ ಹಣೆ ಮುಟ್ಟಿದವರು ಸರಕ್ಕನೆ ಕೈಯೆಳೆದುಕೊಂಡರು. ದಿಕ್ಕುತೋಚದಂತಾಗಿ ಹಣೆಗೆ ಒದ್ದೆಬಟ್ಟೆ ಹಾಕಿ, ಅನುಮಾನದಿಂದ ಅವಳ ಹೊದ್ದಿಕೆ ಎಳೆದು ಮೈಯನ್ನು ಪರೀಕ್ಷಿಸಿದರು. ಪಕ್ಕದಲ್ಲಿ ಗಡ್ಡೆ. ನಾರಣಪ್ಪನನ್ನು ನುಂಗಿದ ಜ್ವರವೆ? ಗೊತ್ತಿದ್ದ ಮೂಲಿಕೆಗಳನ್ನೆಲ್ಲ ತೇದು, ಅವಳ ಬಾಯನ್ನು ಬಿಡಿಸಿ ಹೊಯ್ದರು. ಯಾವ ಔಷಧವೂ ಗಂಟಲನ್ನಿಳಿಯಲಿಲ್ಲ. ಇದು ಯಾವ ರೀತಿಯ ಪರೀಕ್ಷೆಯೆಂದು ಹಂಬಲಿಸುತ್ತ ಅತ್ತಿಂದಿತ್ತ ಅಲೆದರು. ಕಾಗೆ ಹದ್ದುಗಳ ಕಿರುಚಾಟ ಅತಿಯಾಗಿ, ದುರ್ನಾತದಲ್ಲಿ ಬುದ್ಧಿಭ್ರಮಣೆಯಾದಂತಾಗಿ ಹಿತ್ತಿಲಿಗೆ ಓಡಿದರು. ಮಂಕಾಗಿ ನಿಂತರು. ಕಾಲ ಹೋದದ್ದು ತಿಳಿಯಲೇ ಇಲ್ಲ. ಸಂಜೆಯಾಯಿತು. ಕಾಗೆ ಹದ್ದುಗಳೆಲ್ಲ ಹಾರಿಹೋದದ್ದನ್ನು ಕಂಡು ಸಮಾಧಾನವಾಗಿ—ಜ್ವರದಲ್ಲಿರುವ ಹೆಂಡತಿಯನ್ನು ಹೀಗೆ ಬಿಟ್ಟುಬಂದೆನಲ್ಲ ಎಂದು ಕಸಿವಿಸಿಯಾಗಿ—ಮನೆಯ ಹಿಂದಕ್ಕೆ ಬಂದರು. ದಿಗಿಲಾಯಿತು. ದೀಪ ಹತ್ತಿಸಿ 'ಇವಳೇ ಇವಳೇ' ಎಂದರು. ಉತ್ತರವಿಲ್ಲ. ಬಿಕೋ ಎನ್ನತೊಡಗಿತು. ನಂತರ ಅವಾಕ್ಕಾಗುವಂತೆ ಹೆಂಡತಿ ಕಿಟಾರನೆ ಕಿರುಚಿಕೊಂಡಳು. ದೀರ್ಘ ದಾರುಣ ಕರ್ಕಶಸ್ವರ ಅವಳ ಗಂಟಲಿನಿಂದ ಬಂದದ್ದು ಕೇಳಿ ಹಸಿಹಸಿ ಪ್ರಾಣವನ್ನು ಮುಟ್ಟಿದಂತಾಗಿ ಆಚಾರ್ಯರು ಥತ್ತರ ನಡುಗಿದರು. ಊಳಿದಂತಹ ಧ್ವನಿ ನಿಂತೊಡನೆ ಮಿಂಚು ಥಳಿಸಿ ಕತ್ತಲಾದಂತಾಯಿತು. ಇಲ್ಲಿ ನಾನೊಬ್ಬನೆ ಇರಲಾರೆ ಎನ್ನಿಸಿತು. ತಾನೇನು ಮಾಡುತ್ತಿದ್ದೇನೆಂದು ತಿಳಿಯುವುದರೊಳಗೆ 'ಚಂದ್ರೀ' ಎಂದು ಕರೆಯುತ್ತ ನಾರಣಪ್ಪನ ಮನೆಗೆ ಓಡಿದರು. 'ಚಂದ್ರೀ ಚಂದ್ರೀ' ಎಂದು ಕರೆದರೆ ಉತ್ತರವಿಲ್ಲ. ಒಳಗೆ ಹೋದರು. ಕತ್ತಲು. ನಡುಮನೆ, ಅಡಿಗೆಮನೆ ಹುಡುಕಿದರು. ಇಲ್ಲ. ಮಹಡಿ ಮೆಟ್ಟಲನ್ನು ಇನ್ನೇನು ಹತ್ತಬೇಕು ಎನ್ನುವುದರೊಳಗೆ, ಅಲ್ಲಿ ಶವವಿದೆ ಎನ್ನಿಸಿ, ತಾನು ಹುಡುಗನಾಗಿದ್ದಾಗ ಕತ್ತಲಿನ ಕೋಣೆಯೊಳಕ್ಕೆ ಹೋಗುವ ಮುನ್ನ ಗುಮ್ಮನಿದ್ದಾನೆಂಬ ಭಯವಾಗುತ್ತಿದ್ದಂತಹ ದಿಗಿಲು ಮರುಕಳಿಸಿ ಓಡುತ್ತೋಡುತ್ತ ತಮ್ಮ ಮನೆಗೆ ಬಂದರು. ಹೆಂಡತಿಯ ಹಣೆ ಮುಟ್ಟಿ ನೋಡಿದರು: ತಣ್ಣಗೆ ಕೊರೆಯುತ್ತಿತ್ತು.

ರಾತ್ರಾನುರಾತ್ರೆ ಲಾಟೀನು ಹಿಡಿದು ನಡೆದು ಕೈಮರಕ್ಕೆ ಹೋಗಿ ಸುಬ್ಬಣ್ಣಾಚಾರ್ಯರ ಮನೆ ಹೊಗುತ್ತಿದ್ದಂತೆ, ಅವರ ಬೆನ್ನ ಹಿಂದೆಯೇ

ದಾಸಾಚಾರ್ಯನನ್ನು ಸುಟ್ಟು ಹಿಂದಿರುಗಿದ ನಾಲ್ಕು ಬ್ರಾಹ್ಮಣರು ಒದ್ದೆ ಪಾಣಿಪಂಚೆಯನ್ನು ತಲೆಯ ಮೇಲೆ ಧರಿಸಿ 'ನಾರಾಯಣ ನಾರಾಯಣ' ಎಂದರು. ಆ ಬ್ರಾಹ್ಮಣರನ್ನೆ ಜೊತೆಗೆ ಕರೆದುಕೊಂಡು ಬಂದು, ಹೆಂಡತಿಯ ಹೆಣ ಸಾಗಿಸಿ, ನಸುಕಾಗುವುದರೊಳಗೆ ಬೆಂಕಿ ಕೊಟ್ಟದ್ದಾಯ್ತು. ಬ್ರಾಹ್ಮಣರ ಹತ್ತಿರ 'ಅಗ್ರಹಾರದಲ್ಲಿ ಸಂಸ್ಕಾರವಾಗಬೇಕಾದ ಇನ್ನೊಂದು ಹೆಣವಿದೆ' ಎಂದು ತನ್ನೊಳಗೆ ಆಡಿಕೊಂಡವರಂತೆ ಅಂದರು. 'ನಾಳೆ ಆ ಬಗ್ಗೆ ಗುರುಗಳ ಹತ್ತಿರ ಇತ್ಯರ್ಥವಾಗುತ್ತದಲ್ಲ' ಎಂದು ನುಡಿದ ಬ್ರಾಹ್ಮಣರಿಗೆ 'ನೀವಿನ್ನು ಹೊರಡಿ' ಎಂದರು. ತನ್ನ ತಪೋಭೂಮಿಯಾಗಿದ್ದ ಒಂದು ಹಿಡಿಜೀವದ ಹೆಂಡತಿ ಧಗಧಗನೆ ಉರಿಯುವುದನ್ನು ನೋಡುತ್ತ, ಬಂದ ಕಣ್ಣೀರನ್ನು ತಡೆದುಕೊಳ್ಳಲು ಪ್ರಯತ್ನಿಸದೆ, ಆಯಾಸವೆಲ್ಲ ಪರಿಹಾರವಾಗುವಷ್ಟು ಅತ್ತು ಬಿಟ್ಟರು.

## ಅಧ್ಯಾಯ : ಆರು

ಆರಾಧನೆಯ ಊಟವಾಗುವ ತನಕ ಅನುಗಳವನ್ನು ಆಡಕೂಡದೆಂದು ಬ್ರಾಹ್ಮಣರು ಮೌನವಾಗಿದ್ದು ಸ್ವಾಮಿಗಳಿಂದ ತೀರ್ಥ ಪಡೆದು, ಭಕ್ಷ್ಯ-ಭೋಜ್ಯ ಪಾಯಸದ ಊಟವನ್ನು ಮಾಡಿ ಮುಗಿಸಿದರು. ಬರೀ ಒಂದೊಂದಾಣೆ ದಕ್ಷಿಣೆಯನ್ನು ಗುರುಗಳು ಕೊಟ್ಟದ್ದರಿಂದ ಲಕ್ಷ್ಮಣಾಚಾರ್ಯನಿಗೆ ನಿರಾಶೆಯಾಯಿತು—ಏನು ಜಿಪುಣರು ಈ ಯತಿ ಎಂದು ಗೊಣಗಿಕೊಳ್ಳುತ್ತ ಸೊಂಟಕ್ಕೆ ಸಿಕ್ಕಿಸಿಕೊಂಡ. ಮಕ್ಕಳಿಲ್ಲ, ಮರಿಯಿಲ್ಲ; ಆದರೂ ದುಡ್ಡೆಂದರೆ ಪ್ರಾಣಬಿಡುತ್ತಾರೆ. ಊಟ ಮುಗಿದಮೇಲೆ ಮಠದ ಪ್ರಾಂಗಣದಲ್ಲಿ ತಂಪಾದ ಸಿಮೆಂಟು ನೆಲದ ಮೇಲೆ ಕೂತ ಬ್ರಾಹ್ಮಣರ ನಡುವೆ ಕುರ್ಚಿಯ ಮೇಲೆ ಸ್ವಾಮಿಗಳು ಕಾವಿಶಾಟಿಯುಟ್ಟು, ತುಳಸಿಮಣಿಸರ ಧರಿಸಿ, ಅಂಗಾರ ಅಕ್ಷತೆಯಿಟ್ಟು ರಕ್ತದಲ್ಲಿ ಪುಟಿಯುವ ಗುಂಡಗಿನ ಗೊಂಬೆಯಂತೆ ಕೂತು, ತಮ್ಮ ಪುಟ್ಟ ಪುಟ್ಟ ಪಾದಗಳನ್ನು ಉಜ್ಜಿಕೊಳ್ಳುತ್ತ ಕುಶಲಪ್ರಶ್ನೆ ಮಾಡಿದರು : "ಪ್ರಾಣೇಶಾಚಾರ್ಯರು ಯಾಕೆ ಬರಲಿಲ್ಲ ? ಹೇಗಿದ್ದಾರೆ ? ಆರೋಗ್ಯವೇ ? ಏನು, ಹೇಳಿಕೆ ತಪ್ಪಿಲಿಲ್ಲವೆ ಅವರಿಗೆ ?"

ಗರುಡಾಚಾರ್ಯ ಗಂಟಲನ್ನು ಸರಿಮಾಡಿಕೊಂಡು ಆಮೂಲಾಗ್ರ ವಿಷಯವನ್ನು ನಿವೇದಿಸಿದ.

ಗುರುಗಳು ಸಮಾಧಾನದಿಂದ ಎಲ್ಲವನ್ನೂ ಕೇಳಿಸಿಕೊಂಡು ಅನುಮಾನವೇ ಇಲ್ಲವೆಂಬಂತೆ ಅಂದರು :

"ಅವನು ಬ್ರಾಹ್ಮಣ್ಯ ಬಿಟ್ಟರೂ ಬ್ರಾಹ್ಮಣ್ಯ ಅವನನ್ನು ಬಿಟ್ಟಂತಲ್ಲ. ಅರ್ಥಾತ್ ಶವಸಂಸ್ಕಾರ ಮಾಡೋದು ಉಚಿತವಾದ ಯೋಗ್ಯವಾದ ಕರ್ತವ್ಯ. ಆದರೆ ದೋಷಪರಿಹಾರಾನೂ ಆಗಬೇಕು. ತತ್ಕಾರಣವಾಗಿ ಅವನ ಆಸ್ತಿಪಾಸ್ತಿ ಬೆಳ್ಳಿಬಂಗಾರಗಳೆಲ್ಲ ಶ್ರೀಮಠದ ಕೃಷ್ಣದೇವರಿಗೆ ಸೇರಬೇಕು."

ಗರುಡ ಧೈರ್ಯಮಾಡಿ ಥೋತ್ರದಿಂದ ಮುಖವನ್ನೊರಸಿಕೊಂಡ :

"ಬುದ್ಧಿ, ನನಗೂ ಅವನ ತಂದೆಗೂ ಇದ್ದ ವ್ಯಾಜ್ಯದ ವಿಷಯ ತಮಗೆ ಗೊತ್ತುಂಟಲ್ಲ. ಅವನ ತೋಟದ ಮುನ್ನೂರು ಅಡಿಕೆಮರ ಹಾಗೆ ನ್ಯಾಯ ವಾಗಿ ನನಗೇ...."

ಲಕ್ಷ್ಮಣಾಚಾರ್ಯ 'ಹ್ಞ' ಎಂದು ನಡುವೆ ಬಾಯಿ ಹಾಕಿದ :

"ಬುದ್ಧಿ, ಇದರಲ್ಲೊಂದು ನ್ಯಾಯಧರ್ಮ ಬೇಡವ? ತಮಗೆ ತಿಳಿದಂತೆ ನಾರಣಪ್ಪನ ಹೆಂಡತಿಯೂ ನನ್ನ ಮನೆಯವಳೂ ಅಕ್ಕತಂಗಿಯರು...."

ಕೆಂಪಗೆ ದುಂಡಗೆ ಇದ್ದ ಸ್ವಾಮಿಗಳ ಮುಖದಲ್ಲಿ ಸಟ್ಟನೆ ಕೋಪ ಕಾಣಿಸಿಕೊಂಡಿತು :

"ಎಂತಹ ನೀಚರಯ್ಯ ನೀವು. ದೇವರ ಸೇವೆಗೆ ಅನಾಥರ ಆಸ್ತಿಯೆಲ್ಲ ಸೇರಬೇಕಾದ್ದೆಂದು ಹಿಂದಿನಿಂದ ಬಂದ ನೇಮ. ಅವನ ಶವಸಂಸ್ಕಾರಕ್ಕೆ ನಾವು ನಿಮಗೆ ಅಪ್ಪಣೆ ಕೊಡದಿದ್ದರೆ ನೀವು ಅಗ್ರಹಾರಾನ್ನೇ ಬಿಡಬೇಕಾಗುತ್ತೆಂದು ನೆನಪಿಟ್ಟುಕೊಳ್ಳಿ" ಎಂದು ಗುಡುಗಿದರು.

ತಪ್ಪಾಯಿತೆಂದು ಕ್ಷಮಾ ಯಾಚಿಸಿ ಇಬ್ಬರು ಬ್ರಾಹ್ಮಣರೂ ಉಳಿದವರ ಜೊತೆ ಸ್ವಾಮಿಗಳಿಗೆ ಅಡ್ಡಬಿದ್ದು ನಿಂತು, ತಮ್ಮೊಡನಿದ್ದ ಗುಂಡಾಚಾರ್ಯನ ಮುಖ ಕಾಣಿಸದೆ ಹುಡುಕಿದರು. ನೋಡುವಾಗ ಅವನು ಊಟ ಸಹ ಮಾಡದೆ ಜ್ವರ ಬಂದು ಮಠದ ಅಟ್ಟದ ಮೇಲೆ ಮಲಗಿಬಿಟ್ಟಿದ್ದಾನೆಂದು ತಿಳಿಯಿತು. ಶವಸಂಸ್ಕಾರದ ಅವಸರವಿದ್ದುದರಿಂದ ಊರಿನ ಮಾರ್ಗ ಹಿಡಿದು —ಗುಂಡಾಚಾರ್ಯನನ್ನು ಅಲ್ಲೇ ಬಿಟ್ಟು—ಬ್ರಾಹ್ಮಣರು ನಡೆದುಬಿಟ್ಟರು.

* * *

ಹೆಂಡತಿಯ ಶವಸಂಸ್ಕಾರವಾದ ಮೇಲೆ ಅಗ್ರಹಾರಕ್ಕೆ ಆಚಾರ್ಯರು ಮರಳಲಿಲ್ಲ. ತಮ್ಮ ಪೆಟ್ಟಿಗೆಯಲ್ಲಿದ್ದ ಹದಿನೈದು ಜರಿಯ ಶಾಲಾಗಲಿ, ಕೂಡಿಟ್ಟ ಇನ್ನೂರು ರೂಪಾಯಿಗಳಾಗಲಿ, ಮಠದಲ್ಲಿ ಕೊಟ್ಟ ಬಂಗಾರದಲ್ಲಿ ಕಟ್ಟಿಸಿದ ತುಳಸಿಮಣಿಸರವಾಗಲಿ ಅವರ ಧ್ಯಾನಕ್ಕೇ ಬರಲಿಲ್ಲ.

ಕಾಲು ಕೊಂಡಲ್ಲಿಗೆ ನಡೆದುಬಿಡುವುದೆಂದು ಉಟ್ಟ ವಸ್ತ್ರದಲ್ಲೆ ಪೂರ್ವಾಭಿಮುಖವಾಗಿ ನಡೆದುಬಿಟ್ಟರು.

ಪ್ರಾತಃಕಾಲದ ಸೂರ್ಯನ ಬಿಸಿಲು ಕಾಡಿನಲ್ಲಿ ರಂಗವಲ್ಲಿಗಳಾಗಿ ನೆಲಕ್ಕಿಳಿದಿದ್ದುವು. ಆಯಾಸದಿಂದ ಕಾಲುಗಳನ್ನು ಎಳೆಯುತ್ತ ನಡೆಯುತ್ತಿದ್ದ ಪ್ರಾಣೇಶಾಚಾರ್ಯರಿಗೆ ಬಹಳ ಹೊತ್ತು ತನ್ನ ದಿಕ್ಕು-ದಿವಾಣಿ ಲೆಖ್ಖಕ್ಕೇ ಬರಲಿಲ್ಲ. ಸುಟ್ಟುಹೋಗದೆ ಉಳಿದ ಹೆಂಡತಿಯ ದೇಹದ ಅವಶೇಷಗಳನ್ನು, ಎಲುಬುಗಳ ಚೂರುಗಳನ್ನು ನಾಯಿ ನರಿಗಳೆಲ್ಲ ಬಂದು ಹೆಕ್ಕುತ್ತಾವೊ ಎಂದು ಆತಂಕವಾಗಿ, ಕಾದಿದ್ದು ಅವುಗಳನ್ನು ನೀರಿಗೆ ಚೆಲ್ಲುವಷ್ಟು ವ್ಯವಧಾನ ನನಗೆ ಇಲ್ಲದೇ ಹೋಯಿತಲ್ಲ ಎಂದು ಒಂದು ಕ್ಷಣ ವ್ಯಥೆಯಾಯಿತು. ಎಲ್ಲವನ್ನೂ ಹಿಂದಕ್ಕೆ ಬಿಟ್ಟು ಕೈಬೀಸಿ ಹೊರಟ ನನಗೆ ಯಾವ ಋಣದ ಬಾಧೆಯೂ ಇನ್ನಿಲ್ಲವೆಂದು ಸಮಾಧಾನ ತಂದುಕೊಂಡರು. ಕಾಲು ಕೊಂಡಲ್ಲಿಗೆ ನಡೆದುಬಿಡುವುದೆಂದುಕೊಂಡೆ ; ಆ ನಿಶ್ಚಯಕ್ಕೆ ಸರಿಯಾಗಿ ನಡೆದುಬಿಡುವೆ ಎಂದು ಮನಸ್ಸನ್ನು ಸಮಸ್ಥಿತಿಗೆ ತರಲು ಯತ್ನಿಸುತ್ತ ನಡೆದರು.

ಹಿಂದೆ ಮನಸ್ಸು ಜಾಗೃತವಾಗಿದ್ದಾಗಲೆಲ್ಲ ಹರಿಯುವ ಚಿತ್ತವನ್ನು ಏಕಾಗ್ರಗೊಳಿಸಿಕೊಳ್ಳಲು 'ಅಚ್ಯುತಾನಂತಗೋವಿಂದ' ಎಂದು ನಾಮೋಚ್ಚಾರ ಮಾಡುತ್ತಿದ್ದಂತೆ ಮಾಡುವ ಮನಸ್ಸಾಯಿತು. 'ಯೋಗೋ ಚಿತ್ತವೃತ್ತಿನಿರೋಧಃ' ಎಂದು ಸ್ಮರಿಸಿದರು. ಮತ್ತೆ 'ಛೀ' ಎಂದುಕೊಂಡರು. ನಾಮಸ್ಮರಣೆಯ ನೆಮ್ಮದಿಯನ್ನೂ ವರ್ಜಿಸಿ ನಿಲ್ಲು ಎಂದು ಎಚ್ಚರ ಹೇಳಿಕೊಂಡರು. ಮರಗಳ ಕೊಂಬೆಗಳು ಕೊಟ್ಟ ರೂಪಕ್ಕೆ ಬಿಸಿಲು ಪಡೆಯುವ ರಂಗವಲ್ಲಿಯಂತೆಯೇ ಸದ್ಯಕ್ಕೆ ಇರಲಿ ಮನಸ್ಸು, ನಿರಂಬಳ ತೆರೆದುಬಿಡಲಿ. ಗಗನದಲ್ಲಿ ಬೆಳಕು, ಮರದ ಕೆಳಗೆ ನೆರಳು, ನೆಲದ ಮೇಲೆ ರಂಗವಲ್ಲಿ. ಭಾಗ್ಯವಿದ್ದು ತುಂತುರಿನ ಸ್ಪರ್ಶವಾದರೆ ಕಾಮನಬಿಲ್ಲು. ಜೀವ ಬಿಸಿಲಿನಂತಿದ್ದುಬಿಡಬೇಕು. ಬರಿಯ ಒಂದು ಎಚ್ಚರವಾಗಿ, ಬರಿಯ ಒಂದು ಅಚ್ಚರಿಯಾಗಿ. ಆಕಾಶದಲ್ಲಿ ರೆಕ್ಕೆಗಳನ್ನು ಹರಡಿ ಸ್ತಬ್ಧ, ತೃಪ್ತ ತೇಲುವ ಗರುಡನಂತೆ. ಕಾಲು ನಡೆಯುತ್ತಿದೆ, ಕಣ್ಣು ನೋಡುತ್ತಿದೆ, ಕಿವಿ ಆಲಿಸುತ್ತಿದೆ—ಅಪೇಕ್ಷೆಯಿಲ್ಲದೆ ಇದ್ದುಬಿಡಬೇಕು. ಆಗ ಜೀವ ಸ್ವೀಕರಿಸುವ ಸ್ಥಿತಿಯನ್ನು ಮುಟ್ಟುತ್ತದೆ. ಇಲ್ಲದಿದ್ದರೆ ಅಪೇಕ್ಷೆಯಲ್ಲಿ ಗೊರಟವಾಗುತ್ತದೆ, ಮುರುಟುತ್ತದೆ, ಕಲಿತ ಮಗ್ಗಿಯಾಗಿಬಿಡುತ್ತದೆ. ಕನಕನ ಮನಸ್ಸು ಬರಿಯ ಒಂದು ಎಚ್ಚರ, ಅಚ್ಚರಿಯಾದ್ದರಿಂದ ಗುರುಗಳ ಎದುರು ಬಂದು ಹೇಳಿದ: ಗುಟ್ಟಾಗಿ ಎಲ್ಲೆಂದು ತಿನ್ನಲಿ ಈ ಬಾಳೆಹಣ್ಣನ್ನ? ದೇವರು ಎಲ್ಲ

ಎಡೆಗೂ ಇದ್ದಾನಲ್ಲ! ದೇವರು ನನಗೆ ಬಾಯಿಗೆ ಕಲಿತ ಮಗ್ಗಿಯಾಗಿ ಬಿಟ್ಟ; ಕನಕನಿಗಿದ್ದಂತೆ ಅಚ್ಚರಿ, ಎಚ್ಚರವಾಗಲಿಲ್ಲ—ಆದ್ದರಿಂದ ಈ ಮುಂದೆ ದೇವರು ವರ್ಜ್ಯ ನನಗೆ.

ದೇವರನ್ನು ಬಿಟ್ಟಮೇಲೆ ಗುರುಋಣ, ಪಿತೃಋಣ, ದೇವಋಣದ ಬಗ್ಗೆ ಇರುವ ಆತಂಕವನ್ನೂ ಬಿಡಬೇಕು. ಅಂದರೆ ಸಮಾಜವನ್ನು ಬಿಟ್ಟು ನಿಲ್ಲಬೇಕು. ಆ ಕಾರಣಕ್ಕಾಗಿಯೇ ಕಾಲು ಕೊಂಡಲ್ಲಿಗೆ ನಡೆದುಬಿಡುವುದೆಂದು ಮನಸ್ಸುಮಾಡಿ ಹೊರಟುಬಿಟ್ಟ ನಿಶ್ಚಯ ಸರಿ. ದಾರಿಯಿಲ್ಲದ ಈ ಅರಣ್ಯದಲ್ಲಿ ಹೀಗೇ ನಡೆಯುತ್ತಲೇ ಇರಬೇಕು. ಆಯಾಸವಾದರೆ, ಹಸಿವಾದರೆ, ತೃಷೆಯಾದರೆ—ಪ್ರಾಣೇಶಾಚಾರ್ಯರ ಯೋಚನೆಯ ಸರಣಿ ಥಟ್ಟನೆ ನಿಂತಿತು. ಇನ್ನೊಂದು ಆತ್ಮವಂಚನೆಯ ಗುಹೆಯನ್ನು ಹೊಗುತ್ತಿದ್ದೇನೆ ನಾನು. ಕಾಲು ಕೊಂಡಲ್ಲಿಗೆ ನಡೆದುಬಿಡುವುದೆಂದು ನಿಶ್ಚಯಿಸಿದ್ದರೂ ದೂರದಲ್ಲೆಲ್ಲೋ ದನಕಾಯುವ ಹುಡುಗನ ಕೊಳಲಿನಿಂದ, ಹಸುಗಳ ಕೊರಳಿನ ಬಿದಿರು-ಗಂಟೆಗಳ ನಾದದಿಂದ ಯಾಕೆ ನಾನು ಅತಿ ದೂರ ಸಾಗದಂತೆ ನಡೆದೆ? ನನ್ನ ನಿಶ್ಚಯವೇನಿದ್ದರೂ ಕಾಲು ಮಾತ್ರ ಜನವಸತಿಗೆ ಹತ್ತಿರವಾಗಿಯೇ ನನ್ನನ್ನು ನಡೆಸಿತು. ನನ್ನ ಲೋಕದ ಪರಿಮಿತಿ ಇದು. ನನ್ನ ಸ್ವಾತಂತ್ರ್ಯದ ಪರಿಮಿತಿ ಇದು. ಮನುಷ್ಯಸಂಸರ್ಗ ಬಿಟ್ಟು ಇರಲಾರೆ. ಸಂನ್ಯಾಸಿಯ ಕೌಪೀನದ ಕಥೆಯ ಹಾಗೆ: ಲಂಗೋಟಿಯನ್ನು ಇಲಿಗಳು ಕಡಿಯುತ್ತವೆಂದು ಬೆಕ್ಕು ಸಾಕಿದ, ಬೆಕ್ಕಿಗೆ ಹಾಲು ಎಂದು ಹಸು ಸಾಕಿದ, ಹಸುವನ್ನು ನೋಡಿಕೊಳ್ಳಲೆಂದು ಮದುವೆಯಾದ.

ಪ್ರಾಣೇಶಾಚಾರ್ಯರು ಹಲಸಿನ ಮರ ಒಂದರ ಬುಡದಲ್ಲಿ ಕೂತರು. ಮೊದಲು ಈ ವಿಷಯವನ್ನು ನೆಟ್ಟಗೆ ನೋಡಬೇಕು. ಕಿಂಚಿತ್ತೂ ವಂಚಿಸಿಕೊಳ್ಳದೆ ನನ್ನ ಮುಂದಿನ ಜೀವನವನ್ನು ನಡೆಸಬೇಕು. ಸ್ಪಷ್ಟವಾಗಿ ಪರೀಕ್ಷಿಸುವ: ಯಾಕೆ ಹೆಂಡತಿಯನ್ನು ಸುಟ್ಟಮೇಲೆ ನಡೆದುಬಿಟ್ಟೆ? ಅಗ್ರಹಾರ ನಾರುತ್ತಿದೆಯೆಂದು ಅಲ್ಲಿಗೆ ಮರಳಲು ಅಸಹ್ಯವಾಯಿತು. ಇದು ನನ್ನ ಇಡೀ ಜೀವವೇ ಒಪ್ಪುವಂತಹ ಕಾರಣ: ಮೂಗಿಗೆ ಆದ ಅಸಹ್ಯ, ಅಶುಚಿಯ ಭಾವನೆ ಸರಿ. ಮುಂದೆ? ನನ್ನನ್ನು ಮಾರ್ಗದರ್ಶನಕ್ಕಾಗಿ ಆಶ್ರಯಿಸಿದ ಬ್ರಾಹ್ಮಣರನ್ನು ಪುನಃ ಸಂಧಿಸಲು ಇಷ್ಟವಾಗದೆ ಹೋಯಿತು. ಇದಕ್ಕೆ ಕಾರಣ? ಪ್ರಾಣೇಶಾಚಾರ್ಯರು ಕಾಲುಗಳನ್ನು ಚಾಚಿ ಆಯಾಸವನ್ನು ಕಳೆದುಕೊಳ್ಳಲು ಯತ್ನಿಸುತ್ತ ತನ್ನ ಮನಸ್ಸು ಸ್ಪಷ್ಟವಾಗಲು

ಕಾದರು. ಅವರಿಗೆ ಕಾಣಿಸದಂತೆ ಅವರ ಪಕ್ಕದಲ್ಲಿ ಒಂದು ಕರು ಬಂದು ನಿಂತಿತು. ಅವರ ಕತ್ತನ್ನು ಮೂತಿಯೆತ್ತಿ ಮೂಸಿ, ಉಸಿರಾಡಿತು. ಪ್ರಾಣೇಶಾಚಾರ್ಯರಿಗೆ ಮೈ ಜುಮ್ಮೆಂದು—ತಿರುಗಿದರು. ಪ್ರಾಯಕ್ಕೆ ಬಂದ ಕರುವಿನ ಆರ್ತ ಸ್ನೇಹಪರ ಕಣ್ಣುಗಳನ್ನು ನೋಡಿ ಒಳಗಿನಿಂದ ಉಕ್ಕಿದಂತಾಯಿತು. ಕರುವಿನ ಕತ್ತನ್ನು ತುರಿಸಿದರು. ಕೊರಳನ್ನೆತ್ತಿ, ಹತ್ತಿರ ಹತ್ತಿರ ಸರಿದು, ತುರಿಸುವ ಕೈಗೆ ತನ್ನ ರೋಮಾಂಚಿತ ದೇಹವನ್ನೆಲ್ಲ ಒಡ್ಡುತ್ತ ಕರು ಪುಳಕಿತವಾಗಿ ಅವರ ಕಿವಿಗಳನ್ನು ಕೆನ್ನೆಗಳನ್ನು ತನ್ನ ಹಿತವಾದ ದರುಗು-ನಾಲಗೆಯಿಂದ ನೆಕ್ಕಲು ಪ್ರಾರಂಭಿಸಿತು. ಕಚಕುಳಿಯಾಗಿ ಪ್ರಾಣೇಶಾಚಾರ್ಯರು ಎದ್ದು ನಿಂತು ಕರುವಿನ ಜೊತೆ ಚೇಷ್ಟೆ ಮಾಡುವ ಆಸೆಯಿಂದ ಅದರ ಕೊರಳಿನ ಕೆಳಗೆ ಕೈಯಿಟ್ಟು ಉಪ್ಪುಪ್ಪುಪ್ಪು ಎಂದರು. ಕರು ಎರಡೂ ಕಾಲುಗಳನ್ನು ಎತ್ತಿ ಏರಿಬಂದು ಚಂಗನೆ ನೆಗೆದು, ಬಿಸಿಲಿನಲ್ಲಿ ಕುಣಿಯುತ್ತ ಕಣ್ಮರೆಯಾಯಿತು. ಪ್ರಾಣೇಶಾಚಾರ್ಯರು ಏನು ಯೋಚಿಸುತ್ತಿದ್ದೆ ಎಂದು ನೆನಪುಮಾಡಿಕೊಳ್ಳಲು ಯತ್ನಿಸಿದರು. ಅದೇ ಹಿಂದಕ್ಕೆ ನಾನು ಯಾಕೆ ಹೋಗಿ ಬ್ರಾಹ್ಮಣರನ್ನು ನೋಡಲಿಲ್ಲ ಎನ್ನುವ ಪ್ರಶ್ನೆಯಲ್ಲವೇ ?—ಆದರೆ ಮನಸ್ಸು ಕೂರಲಿಲ್ಲ. ಹಸಿವಾಗುತ್ತಿದೆ, ಇಲ್ಲೇ ಹತ್ತಿರದಲ್ಲಿರುವ ಗ್ರಾಮದಲ್ಲಾದರೂ ಹೋಗಿ ಹಸಿವನ್ನು ಕಳೆದುಕೊಳ್ಳಬೇಕೆನ್ನಿಸಿ ನಡೆದರು. ದನಗಳ ಸೆಗಣಿ ಗೊರಸಿನ ಗುರುತುಗಳನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಒಂದು ಗಂಟೆ ಕಾಡಿನಲ್ಲಿ ಸುತ್ತಿ ನಡೆಯುವಾಗ ಒಂದು ಮಾರಿಗುಡಿ ಕಾಣಿಸಿತು. ಬ್ರಾಹ್ಮಣರಿರುವ ಅಗ್ರಹಾರವಲ್ಲವಲ್ಲ ಎಂದುಕೊಂಡರು. ಒಂದಷ್ಟು ದೂರ ಹೋಗಿ ಗ್ರಾಮದ ಒಂದು ತುದಿಗಿದ್ದ ಮರದ ಬುಡದಲ್ಲಿ ಕೂತರು.

ಬಿಸಿಲೇರಲು ಹತ್ತಿದ್ದರಿಂದ ಮರದ ನೆರಳಿನಲ್ಲೂ ಸೆಖೆಯಾಗಿ ತೃಷೆಯಾಯಿತು. ಯಾರಾದರೂ ಗೌಡನೊಬ್ಬನ ಕಣ್ಣಿಗೆ ತಾನು ಬಿದ್ದರೆ ಹಾಲು ಹಣ್ಣನ್ನು ತಂದುಕೊಟ್ಟಾನೆಂದು ಆಶಿಸಿದರು. ಎಮ್ಮೆಗಳನ್ನು ಕೆರೆಗೆ ಅಟ್ಟುತ್ತ ಬರುತ್ತಿದ್ದ ಒಬ್ಬ ಗೌಡ ಹಣೆಗೆ ಕೈಮಾಡಿ ನೋಡಿ ಹತ್ತಿರ ಬಂದು ನಿಂತ. ಬಾಯಿ ತುಂಬ ಕವಳ ತುಂಬಿ, ಭರ್ಜರಿ ಮೀಸೆ ಬಿಟ್ಟು, ತಲೆಗೆ ಚೌಕುಳಿಬಟ್ಟೆಯ ಮುಂಡಾಸು ಸುತ್ತಿದ್ದವ ಗ್ರಾಮದ ಹಿರಿಯ ಗೌಡನಿರಬೇಕೆಂದು ಪ್ರಾಣೇಶಾಚಾರ್ಯರು ಊಹಿಸಿದರು. ತಾನು ಕಂಡು ಅರಿಯದ ಒಬ್ಬಾತ ಸಿಕ್ಕಿದ್ದರಿಂದ ಅವರಿಗೆ ಸಮಾಧಾನವೆನ್ನಿಸಿತು. ಕವಳ

ತುಂಬಿದ್ದರಿಂದ ಬಾಯನ್ನು ಎತ್ತಿ ಗೌಡ ಕೈಸನ್ನೆ ಮಾಡಿ ಎಲ್ಲಿಂದ ಬಂದವರೆಂದು ಕೇಳಿದ. ತಾನು ಪ್ರಾಣೇಶಾಚಾರ್ಯನೆಂದು ಈ ಗೌಡ ತಿಳಿದಿದ್ದರೆ ಕವಳ ತುಂಬಿದ ಬಾಯಲ್ಲಿ ಹೀಗೆ ಎಗ್ಗಿಲ್ಲದೆ ಎದುರು ನಿಂತು ಪ್ರಶ್ನಿಸುತ್ತಿರಲಿಲ್ಲ. ಸಂಸ್ಕಾರವನ್ನೂ, ಭೂತವನ್ನು ತೊರೆದು ನಿಂತರೆ ಲೋಕ ತನ್ನನ್ನು ಇವನಿನ್ನೊಬ್ಬ ಹಾರುವ ಎಂದು ಬಗೆಯುತ್ತದೆ. ಇದ ರಿಂದಾಗಿ ಅವರಿಗೆ ಕೊಂಚ ಕಸಿವಿಸಿಯಾಯಿತು. ತನ್ನಿಂದ ಉತ್ತರ ಬರದೇ ಇದ್ದುದು ನೋಡಿ ಗೌಡ ಬಾಯಲ್ಲಿನ ಕವಳವನ್ನು ಉಗಿದು ಬಂದು ಸ್ವಲ್ಪ ವಿನೀತನಾಗಿ, ಮೀಸೆಗೆ ಹತ್ತಿದ ಕೆಂಪು ಕವಳವನ್ನು ವಸ್ತ್ರದಿಂದ ಒರೆಸಿ ಕೊಳ್ಳುತ್ತ :

"ಎತ್ತ ಮುಖ ಹೊಂಟವರೊ ?" ಎಂದು ಪ್ರಶ್ನಾರ್ಥವಾಗಿ ನೋಡಿ ಕೇಳಿದ. ಬ್ರಾಹ್ಮಣನನ್ನು 'ಎಲ್ಲಿಗೆ ?' ಎಂದು ಕೇಳುವುದು ಅಶುಭವೆಂದು ಮರ್ಯಾದೆ ತೋರಿಸಿದನಲ್ಲ ಎಂದು ಪ್ರಾಣೇಶಾಚಾರ್ಯರಿಗೆ ಸಮಾಧಾನ ವಾಯಿತು. ಆದರೆ ಏನುತ್ತರ ಕೊಡಬೇಕೆಂಬುದು ತಿಳಿಯದೆ, "ಹೀಗೇ...." ಎಂದು ಕೈಬೀಸಿ ತೋರಿಸಿ ಬೆವರೊರಸಿಕೊಂಡರು. ದೇವರ ದಯೆಯಿಂದ ಗೌಡನಿಗೆ ತನ್ನ ಗುರುತು ಹತ್ತಲಿಲ್ಲವಲ್ಲ ಎಂದು ನೆಮ್ಮದಿ ಎನ್ನಿಸಿತು.

"ಘಟ್ಟದ ಕೆಳಗಿನವರೊ ಹೇಗೆ ?" ಎಂದು ಗೌಡ ಕುತೂಹಲದಿಂದ ಇನ್ನೊಂದು ಪ್ರಶ್ನೆ ಹಾಕಿದ; ಸುಳ್ಳು ಸುಲಭವಾಗಿ ಬಾರದ ಪ್ರಾಣೇಶಾ ಚಾರ್ಯರ ಬಾಯಿ 'ಹಾ' ಎಂದಿತು.

"ಸಂಭಾವನೆಗೆ ಹೊಂಟವರು ಇರಬೇಕು."

ಪ್ರಾಣೇಶಾಚಾರ್ಯರಿಗೆ ಥಟ್ಟನೆ ತಲೆತಗ್ಗಿಸುವಂತಾಯಿತು. ತನ್ನನ್ನು ಒಬ್ಬ ಭಿಕ್ಷೆ ಎತ್ತುವ ಸಂಭಾವನೆಯ ಬ್ರಾಹ್ಮಣ ಎಂದು ಈ ಗೌಡ ಬಗೆದುಬಿಟ್ಟನಲ್ಲ. ಎಲ್ಲ ತೇಜಸ್ಸು, ವರ್ಚಸ್ಸು ಕಳೆದು ಈಗ ನಾನು ಸಂಭಾ ವನೆ ಎತ್ತುವ ಹಾರುವನಂತೆಯೋ ಕಾಣಿಸುತ್ತಿರಬೇಕು. ವಿನಯದ ಪಾಠ ಪ್ರಾರಂಭವಾಗಿದೆ, ಬಗ್ಗಿ ಬಿಡು, ತಗ್ಗಿ ಬಿಡು ಎಂದುಕೊಂಡು 'ಹಾ' ಎಂದರು ಮತ್ತೆ. ಅಪರಿಚಿತನೊಬ್ಬನ ಕಣ್ಣುಗಳ ಎದುರಿಗೆ ತಾನು ಇಚ್ಛಿಸಿದ ರೂಪ ವನ್ನು, ವ್ಯಕ್ತಿತ್ವವನ್ನು ತಾಳಬಹುದೆಂಬುದು ತನ್ನ ಸ್ವಾತಂತ್ರ್ಯದ ಮಿತಿ ಯನ್ನು ಹಿಗ್ಗಿಸಿದಂತೆನ್ನಿಸಿತು.

"ಆಸುಪಾಸಲ್ಲೆಲ್ಲೂ ಬ್ರಾಂಬ್ರ ಮನೆಯಿಲ್ಲ" ಎಂದ ಗೌಡ, ಎನ್ಮೆಗೆ ಆತುಕೊಂಡು ನಿಂತು.

"ಹೌದ ?" ಎಂದರು ಪ್ರಾಣೇಶಾಚಾರ್ಯರು ಉದಾಸೀನ ಧ್ವನಿಯಲ್ಲಿ.

"ಸುಮಾರು ಹತ್ತನ್ನೆರಡು ಮೈಲಾಚೆ ಒಂದು ಬ್ರಾಂಬ್ರ ಅಗ್ರಹಾರ ಐತೆ."

"ಓಹೊ...."

"ಗಾಡಿ-ದಾರೀಂದ ಇನ್ನಷ್ಟು ದೂರ ಆತೈತೆ. ಒಳದಾರೀಂದ ಸಮೀಪ ಆತೈತೆ...."

"ಸರಿ."

"ಇಲ್ಲೆ ಬಾವಿ ಐತೆ. ಕೊಡ ಕೊಡ್ತೀನಿ, ನೀರು ಸೇದಿ ಸ್ನಾನಮಾಡಿ. ಅಕ್ಕಿ ಬೇಳೆ ಕೊಡ್ತೀನಿ. ಒಲೆ ಹೂಡಿ ಬೇಯಿಸಿ ಉಣ್ಣಿ. ಆಯಾಸ ಆಗಿರ ಬೇಕು, ಪಾಪ. ಅಗ್ರಹಾರಕ್ಕೆ ಹೋಗಬೇಕೂಂತಿದ್ದರೆ ಹೇಳಿ, ಗಾಡಿ-ಶೇಷಪ್ಪ ಇಲ್ಲೊಬ್ಬ ನೆಂಟರ ಮನೆಗೆ ಬಂದವ್ನೆ. ಅವ್ನ ಗಾಡಿ ಖಾಲಿ ಹೋತೈತೆ. ಅಗ್ರಹಾರಕ್ಕೆ ಹತ್ತಿರ ಅವ ಇರೋದು....ಆದರೆ ಅವ ಅಂದದ್ದು ನೋಡಿದ್ರೆ ನೀವು ಆ ಅಗ್ರಹಾರಕ್ಕೆ ಹೋಗಕ್ಕೆ ಇಷ್ಟಪಡ್ತೀರೊ ಇಲ್ಲೊ ನಾ ಕಾಣೆ. ಒಂದು ಹೆಣಾ ಅಲ್ಲಿ ಮೂರು ರಾತ್ರೆ ಮೂರು ಹಗಲು ಕೊಳೀತಾ ಬಿದ್ದೈತಂತೆ. ಬ್ರಾಂಬ್ರ ಹೆಣ, ಉಶ್....ಶೇಷಪ್ಪ ಅಂದ: ರಾತ್ರೋರಾತ್ರೆ ಆ ಹೆಣಾನ್ನ ಸುಡಕ್ಕೇಂತ ಕೇಳಲಿಕ್ಕೆ ಆ ಪುಣ್ಯಾತ್ಮನ ಸೂಳೆ ಶೇಷಪ್ಪನ ಮನೆಗೆ ಬಂತಂತೆ. ದಾತಾರರೇ ಇಲ್ಲವಂತೆ ಆ ಹೆಣಕ್ಕೆ. ಉಶ್....ಬ್ರಾಂಬ್ರ ಹೆಣ ಹೀಗೆ ಕೊಳೆಯೋದೂಂದ್ರೇನು? ಶೇಷಪ್ಪ ಆ ಮಾರ್ಗ ಬೆಳಿಗ್ಗೆ ಗಾಡೀಲಿ ಬರೋವಾಗ ರಣಹದ್ದುಗಳು ಅಗ್ರಹಾರದ ಮನೆಗಳ ಮ್ಯಾಲೆ ಬಂದು ಕೂತಿದ್ವಂತೆ...."

ಗೌಡ ಹೊಗೆಸೊಪ್ಪನ್ನು ತಿಕ್ಕುತ್ತ ಮಾತಾಡುತ್ತ ಕೂತುಬಿಟ್ಟ.

ಪ್ರಾಣೇಶಾಚಾರ್ಯರಿಗೆ ಇಲ್ಲಿಗೆ ಶೇಷಪ್ಪ ಬಂದ ಸುದ್ದಿ ಕೇಳಿ ಎದೆ ಜಗ್ಗೆಂದಿತು. ಅವನು ತನ್ನನ್ನು ಈ ಸ್ಥಿತಿಯಲ್ಲಿ ನೋಡುವುದು ಅವರಿಗೆ ಇಷ್ಟವಾಗಲಿಲ್ಲ. ಇಲ್ಲಿ ಇನ್ನು ಹೆಚ್ಚು ಹೊತ್ತು ಕಳೆದರೆ ಕೇಡು.

"ಒಂದಿಷ್ಟು ಬಾಳೆಹಣ್ಣು ಹಾಲು ಕೊಟ್ಟರೆ ಮುಂದೆ ನಡೆದುಬಿಡುವೆ" ಎಂದರು ಗೌಡನ ಕಡೆ ನೋಡಿ.

"ಅದಕ್ಕೇನಾಗಬೇಕು ಸ್ವಾಮಿ. ಈ ಚಣವೇ ತರುವೆ. ಹಸಿದ ಬ್ರಾಂಬ್ರು ಒಬ್ಬರು ಗ್ರಾಮದಲ್ಲಿ ಕೂತಿದ್ದಾಗ ನಾವು ಊಟ ಮಾಡೋದು ಶಕ್ಯ ಅಲ್ಲಾಂತ ಅಕ್ಕಿ ಕೊಡುವೆ ಎಂದೆ"

ಎಂದು ಸೀದ ಹೊರಟು ಹೋದ. ಪ್ರಾಣೇಶಾಚಾರ್ಯರಿಗೆ ಅಲ್ಲಿ ಮುಳ್ಳಿನ ಮೇಲೆ ಕೂತಿದ್ದಂತೆನಿಸಿತು. ಶೇಷಪ್ಪನ ಕಣ್ಣಿಗೆಲ್ಲಾದರೂ ತಾನು ಬಿದ್ದುಬಿಟ್ಟರೆ? ಸುತ್ತುಮುತ್ತ ನೋಡುತ್ತ ಭಯದಲ್ಲಿ ಸಣ್ಣಗಾಗಿ ಮುದುರಿ ಕೂತರು. ಎಲ್ಲ ಬಿಟ್ಟು ನಡೆದುಬಿಟ್ಟ ನನ್ನಲ್ಲೇಕೆ ಈ ಭಯ ಉತ್ಪತ್ತಿಯಾಯಿತೆಂದು ಕಸಿವಿಸಿಪಡುತ್ತ ಏರಿಬಂದ ದಿಗಿಲನ್ನು ಹತ್ತಿಕ್ಕ ಲಾರದೆ ಚಡಪಡಿಸಿದರು. ಗೌಡ ಬಟ್ಟಲಿನ ತುಂಬ ತಂಬಾಲನ್ನು, ಒಂದು ಚಿಪ್ಪು ಬಾಳೆಯ ಹಣ್ಣನ್ನು ತಂದು ಆಚಾರ್ಯರ ಎದುರಿಟ್ಟು—

"ಒಳ್ಳೇ ಹೊತ್ತಿಗೆ ಗ್ರಾಮಕ್ಕೊಬ್ಬರು ಬ್ರಾಂಬ್ರು ಬಂದ್ಹಂಗಾಯ್ತು. ಒಂದು ನಿಮಿತ್ಯ ಹೇಳ್ತೀರಾಂತ? ನನ್ನ ಮಗಾಗೆ ನೂರು ರೂಪಾಯಿ ತೆರ ತೆತ್ತು ಒಂದು ಹೆಣ್ಣನ್ನು ತಂದೆ. ಅದು ಬಂದಾಗಿಂದ ಒಂದು ಥರಾ ಮಂಕಾಗಿ ಕೂತುಬಿಟ್ಟಿದೆ, ಜಕಣಿ ಹಿಡಿದು. ತಾವು ಮಂತ್ರಿಸಿಕೊಟ್ಟರೆ...."

ಅಭ್ಯಾಸಬಲದ ಮೇಲೆ ಥಟ್ಟನೆ ತನ್ನ ಬ್ರಾಹ್ಮಣಧರ್ಮದ ಉದ್ಯೋಗ ವನ್ನು ನೆರವೇರಿಸಲು ಉದ್ಯುಕ್ತರಾದ ಪ್ರಾಣೇಶಾಚಾರ್ಯರು ಮನಸ್ಸಿಗೆ ಲಗಾಮು ಹಾಕಿ ನಿಲ್ಲಿಸಿದರು. ತಾನು ಎಲ್ಲವನ್ನು ಬಿಟ್ಟರೂ ಸಮಾಜ ಮಾತ್ರ ಬ್ರಾಹ್ಮಣಸಹಜವಾದ ಕರ್ತವ್ಯಗಳನ್ನೆಲ್ಲ ನೆರವೇರಿಸೆಂದು ತನಗೆ ದುಂಬಾಲು ಬೀಳುತ್ತಿದೆ. ಇದರಿಂದ ಬಿಡುಗಡೆ ಸುಲಭವಲ್ಲ. ಹಾಲು ಹಣ್ಣನ್ನು ಇಷ್ಟು ಶ್ರದ್ಧೆಯಿಂದ ಅಪರಿಚಿತನೊಬ್ಬನಿಗೆ ತಂದುಕೊಟ್ಟ ಗೌಡ ನಿಗೆ ಈಗ ತಾನೇನು ಹೇಳಬೇಕು? ತಾನು ತಪೋಭ್ರಷ್ಟನಾದವನೆಂದೆ? ತಾನು ಬ್ರಾಹ್ಮಣನಲ್ಲವೆಂದೆ? ಅಥವಾ ಸತ್ಯವನ್ನೆ?

"ನಾನಿವತ್ತು ಮಂತ್ರಿಸಿಕೊಡುವಂತಿಲ್ಲಪ್ಪ. ನನ್ನ ಜ್ಞಾತಿಗಳೊಬ್ಬರು ತೀರಿಹೋದದ್ದರ ಸೂತಕ ನನಗೆ" ಎಂದು ಥಟ್ಟನೆ ಹೊಳೆದ ಉತ್ತರಕ್ಕೆ ಹಿಗ್ಗಿ ಹೇಳಿದರು. ಹಾಲನ್ನು ಕುಡಿದು, ಬಟ್ಟಲನ್ನು ಹಿಂದಕ್ಕೆ ಕೊಟ್ಟು, ಬಾಳೆಹಣ್ಣನ್ನು ವಸ್ತ್ರದಲ್ಲಿ ಕಟ್ಟಿಕೊಂಡು ಎದ್ದುನಿಂತರು.

"ಈ ಮುಖ ಒಂದ್ಹತ್ತು ಮೈಲಿ ನಡೆದರೆ ಮೇಳಿಗೆ ಎಂಬೊ ಊರು ಸಿಗುತ್ತೆ. ಅಲ್ಲಿ ಇವತ್ತು, ನಾಳೆ, ನಾಡಿದ್ದು ರಥೋತ್ಸವ. ನಿಮಗೆ ಅಲ್ಲಿ ಚೆನ್ನಾಗಿ ಸಂಭಾವ್ನೆ ಆತ್ಯೆತೆ ಹ್ವಾದರೆ...." ಎಂದು ಗೌಡ ಎಲೆಯಡಿಕೆ ಜಗಿಯುತ್ತ ಎಮ್ಮೆಗಳನ್ನು ನಡೆಸಿಕೊಂಡು ಹೋದ.

ಗೌಡ ಕಣ್ಮರೆಯಾಗುತ್ತಿದ್ದಂತೆ ಪ್ರಾಣೇಶಾಚಾರ್ಯರು ಮತ್ತೆ ಕಾಡು ಹೊಕ್ಕು ಕಾಲುದಾರಿಯನ್ನು ಹಿಡಿದು ನಡೆದರು. ತನ್ನ ಸಮಸ್ಯೆ ಇನ್ನಷ್ಟು

ಬಿಕ್ಕಟ್ಟಾಗಿಬಿಟ್ಟಿತೆಂದುಕೊಂಡು ಚಿಂತಿಸಿದರು. ಇಂತಹ ದಿಗಿಲನ್ನು ನಾನು ಹಿಂದೆ ಎಂದೂ ಅನುಭವಿಸಿರಲಿಲ್ಲ, ಏನೋ ಪತ್ತೆಯಾಗಿಬಿಡುತ್ತದೆಂಬ ದಿಗಿಲು. ಯಾರ ಕಣ್ಣಿಂದಲೂ ಏನನ್ನೂ ಗುಪ್ತವಾಗಿ ಇಟ್ಟುಕೊಳ್ಳಲಾರೆ ನೆಂಬ ದಿಗಿಲು. ನನ್ನ ಮೊದಲಿನ ನಿರ್ಭಯವನ್ನು ಕಳೆದುಕೊಂಡೆ. ಹೇಗೆ? ಯಾಕೆ? ನಾನು ಅಗ್ರಹಾರಕ್ಕೆ ಮರಳದೇ ಇರಲು ಮುಖ್ಯ ಕಾರಣ ಆ ಬ್ರಾಹ್ಮಣರ ಕಣ್ಣುಗಳ ಎದಿರು ಬದುಕಲಾರದ ದಿಗಿಲು. ಸುಳ್ಳನ್ನು ಮಡಿಲಿ ನಲ್ಲಿ ಕಟ್ಟಿಕೊಂಡು ಬದುಕಲಾರೆ ಎನ್ನುವ ಆತಂಕ.

ಕಾಡಿನ ಮೌನ ಗಾಢವಾಗಿ ಕವಿದಂತೆ ಅವರ ಮನಸ್ಸು ತಿಳಿಯಾಗ ತೊಡಗಿತು. ಬಾಳೆಹಣ್ಣುಗಳನ್ನು ಸುಲಿದು ತಿನ್ನುತ್ತ ನಿಧಾನವಾಗಿ ಕಾಲು ಹಾಕಿ ನಡೆದರು. ಗೌಡನನ್ನು ನೋಡಿದಾಗಿನಿಂದ ಸಮಸ್ಯೆ ಇನ್ನಷ್ಟು ಗಹನವಾಗಿದೆ. ಜುಟ್ಟು ಹಿಡಿದು ಎತ್ತಿ ಮುಖಕ್ಕೆ ಮುಖಕೊಟ್ಟು ನೋಡ ಬೇಕು. ಮೂಲದಲ್ಲಿದ್ದುದು ಸುಡಬೇಕಾದ ಒಂದು ವಸ್ತು. ಆ ವಸ್ತು ಬ್ರಾಹ್ಮಣ್ಯವನ್ನು ಕಾಲಿನಿಂದೊದ್ದು ಬದುಕಿದ ನಾರಣಪ್ಪ. ಸುಡಬೇಕಾದ ಒಂದು ವಸ್ತು ಕೊನೆಗೊಂದು ದಿನ ಸುಟ್ಟುಹೋಗುವ ವಸ್ತುಗಳ ಮಧ್ಯೆ ಸಮಸ್ಯೆಯಾಯಿತು. ಈ ಸಮಸ್ಯೆ ಧರ್ಮಕ್ಕೆ ಸೇರಿದ್ದು ಎಂದು ಶಾಸ್ತ್ರದ ಮೊರೆಹೊಕ್ಕೆ. ದೇವರ ಮೊರೆಹೊಕ್ಕೆ. ಕೊನೆಗೆ ಕಾಡಿನಲ್ಲಿ ಕತ್ತಲಿನಲ್ಲಿ....

ನಿಂತರು. ಖಚಿತವಾಗಿ ಅರಿಯಲೆಂದು ಮನಸ್ಸಿನಲ್ಲಿ ತೂಗುತ್ತ ಕಾದರು.

....ಆದದ್ದು ಖಚಿತವಾಗಿ ಏನು, ಹೇಗೆ ಎಂಬುದನ್ನು ಪುನಃ ಸೃಷ್ಟಿಸಿ ಕೊಳ್ಳಲು ಹೋದಾಗ ಸ್ವಪ್ನದ ಬೆನ್ನುಹತ್ತಿ ನಡೆದ ಭಾವವಾಗುತ್ತದೆ.

ಅವಳ ಮೊಲೆಗಳ ಅಕಸ್ಮಾತ್ ಸ್ಪರ್ಶದಿಂದ ಪುಳಕಿತನಾದೆ, ಮತ್ತೆ ಅವಳು ಮಡಿಲಿನಿಂದ ತೆಗೆದು ತಿನ್ನಿಸಿದ ಬಾಳೆಹಣ್ಣುಗಳನ್ನು ತಿಂದೆ. ಹಸಿವು, ದಣಿವು, ಮಾರುತಿಯಿಂದ ಆದ ನಿರಾಶೆ—ಕಾರಣ. ನಿರಪೇಕ್ಷಿತವಾಗಿ, ದೈವ ಸಂಕಲ್ಪವೆಂಬಂತೆ ಒದಗಿ ಬಂದ ಆ ಮುಹೂರ್ತವೇ ಅದಕ್ಕೆ ಕಾರಣ. ಅದೊಂದು ಮುಹೂರ್ತ—ಅದರ ಆಚೆಗೆ ಏನೂ ಇರಲಿಲ್ಲ—ಈಚೆಗೆ ಏನೂ ಇಲ್ಲ. ಇಲ್ಲದಿದ್ದೊಂದು ಆಗಿ ಮತ್ತೆ ಇಲ್ಲವಾದ ಮುಹೂರ್ತ. ಆಚೆಗೆ ನಿರಾಕಾರ. ಈಚೆಗೆ ನಿರಾಕಾರ. ಮಧ್ಯೆ ಮೈಪಡೆದು ಬಂದ ಮುಹೂರ್ತ. ಅಂದು ನಾನು ಅವಳನ್ನು ಸಂಭೋಗಿಸಿದ್ದಕ್ಕೆ ಸರ್ವಥಾ ಜವಾಬ್ದಾರನಲ್ಲ. ಅಂದರೆ ಆ ಘಳಿಗೆಗೆ ಜವಾಬ್ದಾರನಲ್ಲ. ಆದರೆ ಆ ಘಳಿಗೆ ನನ್ನನ್ನು ಬದಲುಮಾಡಿಬಿಟ್ಟಿತಲ್ಲ —ಯಾಕೆ? ಬದಲಾದ ವ್ಯಕ್ತಿಗೆ ನಾನು ಜವಾಬ್ದಾರ ಎಂದು ತಾನೇ ಈಗಿನ

ಕಸಿವಿಸಿ? ಮುಹೂರ್ತ ಸ್ಮೃತಿಯಾಗಿಬಿಟ್ಟದ್ದರಿಂದ ತಾನೆ? ಅಪೇಕ್ಷೆ ಯಿಲ್ಲದೆ ಒದಗಿತು. ಈಗ ಸ್ಮೃತಿಯಾಯಿತು—ಆ ಸ್ಮೃತಿಯನ್ನು ಕೆದಕುತ್ತಿದ್ದಂತೆ ಮತ್ತೆ ಅಪೇಕ್ಷೆಯಾಗತೊಡಗಿದೆ. ಮತ್ತೊಮ್ಮೆ ಚಂದ್ರಿಯನ್ನು ಅವಚಿಕೊಳ್ಳಬೇಕೆನ್ನಿಸುತ್ತಿದೆ.

ಅಪೇಕ್ಷೆಯ ಸಂಚಾರವಾಗಿ ಆಚಾರ್ಯರ ದೇಹ ಸ್ಪರ್ಶ ಕಾತರವಾಯಿತು. ಕಣ್ಣುಗಳು ಮಂಜಾದವು. ಚಂದ್ರಿಯನ್ನರಸಿಕೊಂಡು ಕುಂದಾಪುರಕ್ಕೆ ಹೋಗಿಬಿಡಬೇಕೆನ್ನಿಸಿತು. ತರ್ಕಶುದ್ಧವಾಗಿ ತನ್ನನ್ನು ಪರೀಕ್ಷಿಸಿಕೊಳ್ಳುವ ಚಿತ್ತವೃತ್ತಿಗೆ ಭಂಗಬಂದಂತಾಯಿತು. ಈಗ ನಾನು ಅವಳನ್ನು ಹುಡುಕಿಕೊಂಡು ಹೋಗಿ ಅವಳ ಸಂಗ ಮಾಡಿದರೆ ನನ್ನ ಕ್ರಿಯೆಗೆ ನಾನೇ ಸಂಪೂರ್ಣ ಜವಾಬ್ದಾರನಾಗಿಬಿಟ್ಟಂತಲ್ಲವೆ ಎನ್ನಿಸಿತು. ಆಗಲಾದರೂ ಹೀಗೆ ಅಕಸ್ಮಾತ್ ಹೊರಳಿಬಿಟ್ಟದ್ದರ ಸ್ಮೃತಿಯ ಸಂಕಟದಿಂದ ಪಾರಾಗಬಹುದು. ಇದು ನಾನು, ನನ್ನದು, ನನ್ನಿಂದ ಸೃಷ್ಟಿತವಾದ ನನ್ನ ಹೊಸ ಸತ್ಯ, ಹೊಸ ವ್ಯಕ್ತಿತ್ವ ಎಂದು ಧೈರ್ಯವನ್ನು ಗಟ್ಟಿಯಾಗಿ ನೋಡಬಹುದು. ಈಗ ನನ್ನ ವ್ಯಕ್ತಿತ್ವ ರೂಪಭ್ರಷ್ಟವಾಗಿ, ಹೊಸ ರೂಪ ಪಡೆಯದೆ, ಗರ್ಭಕೋಶದಿಂದ ಅವಸರದಲ್ಲಿ ಹೊರಗೆ ತೆಗೆದ ರಾಕ್ಷಸ-ಪಿಂಡದಂತಾಗಿದೆ. ಕಾಡಿನಲ್ಲಿ ಕತ್ತಲಿನಲ್ಲಿ ಆ ಮುಹೂರ್ತ ಅಕಸ್ಮಾತ್ತಾಗಿ ಒದಗಿಬಂತೆಂಬ ನನ್ನ ನಂಬಿಕೆಯನ್ನೂ ನಾನು ನಿಚ್ಚಳವಾಗಿ ಪರೀಕ್ಷಿಸಬೇಕು. ಅಕಸ್ಮಾತ್ತಾಗಿ ಒದಗಿಬಂತೆಂಬುದು ನಿಜ. ನಾನಾಗಿ ಬಯಸಿ ಅದನ್ನು ಪಡೆಯಲಿಲ್ಲೆಂಬುದು ನಿಜ. ಚಾಚಿದ ಕೈಗಳು ಮೊಲೆಗಳನ್ನು ಮುಟ್ಟಿದುವು—ಮತ್ತೆ, ಆಸೆ ಹುಟ್ಟಿತು, ಮತ್ತೆ—ಅಲ್ಲಿದೆ ಗುಟ್ಟು. ನನ್ನ ಬಾಳು ಅತ್ತಲಿಗೋ, ಇತ್ತಲಿಗೋ ಎಂದು ನಿರ್ಧರಿತವಾಗಬೇಕಾಗಿದ್ದ ಗಳಿಗೆಯದು. ಅಲ್ಲ—ನಾನು ನಿರ್ಧಾರಮಾಡಬಹುದಾಗಿದ್ದ ಗಳಿಗೆಯದು. ನನ್ನ ದೇಹ ಅದಕ್ಕೆ ಒಪ್ಪಿತು ಎಂಬೋದು ಸಮಾಧಾನವಲ್ಲ, ಕತ್ತಲಿನಲ್ಲಿ ಅವಸರದ ಕೈಗಳು ಹುಡುಕಿದುವು; ಚಂದ್ರಿಯ ಮೃದುವಾದ ತೊಡೆ ನಿತಂಬಗಳನ್ನೆಲ್ಲ—ಯಾವ ಧರ್ಮವನ್ನೂ ನಾನು ಹುಡುಕಾಡದ ಬಗೆಯಲ್ಲಿ—ಹುಡುಕಿದುವು. ನನ್ನ ಬಾಳು ಅತ್ತಲಿಗೋ ಇತ್ತಲಿಗೋ ಎಂದು ನಿರ್ಧರಿತವಾಗಬೇಕಾಗಿದ್ದ ಗಳಿಗೆಯಲ್ಲಿ ಚಂದ್ರಿಯ ಜೊತೆ ಸಂಭೋಗಿಸುವ ನಿಶ್ಚಯ ಆಗಿಬಿಟ್ಟಿತು. ಸ್ವಾಧೀನ ತಪ್ಪಿದರೂ ನಿಶ್ಚಯ ಮಾಡುವ ಜವಾಬ್ದಾರಿ ನನ್ನ ಮೇಲೇ ಇತ್ತು. ಮನುಷ್ಯನ ನಿಶ್ಚಯಕ್ಕೆ ಬೆಲೆಯಿರುವುದು ಹೀಗೆ ಸ್ವಾಧೀನ ತಪ್ಪುವುದು ಸಾಧ್ಯವಿರುವುದರಿಂದಲೇ ಹೊರತಾಗಿ ನಿಶ್ಚಯ ನೀರು

ಕುಡಿದಷ್ಟು ಸರಾಗವಾದ್ದರಿಂದಲ್ಲ. ನಮ್ಮ ನಿಶ್ಚಯದ ಮೂಲಕ ನಮ್ಮನ್ನು ನಾವು ರೂಪಿಸಿಕೊಳ್ಳುತ್ತೇವೆ, ಈ ಘಟಕ್ಕೊಂದು ವ್ಯಕ್ತಿತ್ವದ ರೂಪುರೇಷೆ ತರುತ್ತೇವೆ. ಹೇಗಾಗಬೇಕೆಂದು ನಾರಣಪ್ಪ ನಿಶ್ಚಯಿಸಿ ಬದುಕಿದನೋ ಅಂತಹ ವ್ಯಕ್ತಿ ಅವನಾದ. ನಾನೂ ಇನ್ನೊಂದಾಗಬೇಕೆಂದು ನಿಶ್ಚಯಿಸಿ ಬದುಕಿದೆ. ಥಟ್ಟನೊಂದು ತಿರುವಿನಲ್ಲಿ ತಿರುಗಿಬಿಟ್ಟೆ. ತಿರುಗಿಬಿಟ್ಟದ್ದರ ಜವಾಬ್ದಾರಿಯೂ ನನ್ನದು ಎಂಬುದು ನನಗೆ ಸ್ಪಷ್ಟವಾಗುವ ತನಕ ಸ್ವಾತಂತ್ರ್ಯವಿಲ್ಲ. ತಿರುಗಿ ಬಿಟ್ಟದ್ದರಿಂದ ಏನಾಯಿತು? ದ್ವಂದ್ವ ಜೀವನಕ್ಕೆ ನುಗ್ಗಿ ಬಂತು. ಎರಡು ಸತ್ಯಗಳ ನಡುವೆ ತ್ರಿಶಂಕುವಾದೆ. ಋಷಿಗಳು ಜೀವನದ ಇಂತಹ ಅನುಭವ ಗಳನ್ನು ಹೇಗೆ ಎದುರಿಸಿದರು, ದ್ವಂದ್ವವಿಲ್ಲದೆ ಎದುರಿಸಿದರೇ—ಎಂದು ಅನು ಮಾನವಾಗುತ್ತದೆ. ಮತ್ಸ್ಯಗಂಧಿಯನ್ನು ದೋಣಿಯಲ್ಲಿ ಕೂಡಿ ವ್ಯಾಸನಿಗೆ ಜನ್ಮವಿತ್ತು ಹೊರಟುಬಿಟ್ಟ ಆ ಮಹಾನುಭಾವ ನನ್ನ ಹಾಗೆ ಸಂಕಟಪಟ್ಟನೆ! ತಪೋಭ್ರಷ್ಟನಾದ ವಿಶ್ವಾಮಿತ್ರ ಈ ಆತಂಕವನ್ನನುಭವಿಸಿದನೆ? ಇಡೀ ಜೀವನವನ್ನೇ ವಿಸರ್ಜನೆಯ ಅವಸರದ ಘಳಿಗೆಗಳಂತೆ ಕಂಡು ಸದಾ ಪರಮಾತ್ಮ ಪರರಾಗಿದ್ದು, ದ್ವಂದ್ವದಲ್ಲಿ ಬದುಕುವುದರ ಮೂಲಕವೇ ದ್ವಂದ್ವಾತೀತರಾಗಿ, ಭೂಮಿ ಕೊರೆದ ರೂಪಾಂತರಗಳನ್ನೆಲ್ಲ ತಳೆದು, ಹರಿದು ಕೊನೆಗೆ ಸಾಗರ ದಲ್ಲಿ ರೂಪಾತೀತವಾಗುವ ನದಿಯಂತೆ ಅವರು ಬಾಳಿದ್ದಿರಬಹುದೆ? ನನ್ನ ಮಟ್ಟಿಗೆ ಪರಮಾತ್ಮನೆಂದೂ ಅಂತಹ ಸದ್ಯದ ಅವಸರವಾಗಲೇ ಇಲ್ಲ. ಆಗಿ ದ್ದರೆ ಅದು ನನ್ನ ಪರಮಾಪ್ತ ಮಿತ್ರ ಮಹಾಬಲನಿಗೆ ಆಗಿದ್ದಿರಬೇಕು. ಬಾಲ್ಯದ ಗೆಳೆಯ ಅವನೊಬ್ಬನಲ್ಲಿ ಮಾತ್ರ ಪರಮಾತ್ಮ ಒಂದು ಹಂಬಲವಾಗಿ ಬಿಟ್ಟದ್ದ. ಇಬ್ಬರೂ ಕೂಡಿ ಕಾಶಿಗೆ ಹೋದೆವು. ಅವನು ಅಸಾಧ್ಯ ಜಾಣ. ತೆಳ್ಳಗೆ ಬೆಳ್ಳಗೆ ಉದ್ದಗೆ ಇದ್ದ ಅವನ ಮನಸ್ಸಿಗೆ ಮೀರಿದ ವಿಷಯವೇ ಇರ ಲಿಲ್ಲ. ಗುರುಗಳು ಈ ಪಾಠ ಹೇಳುವಾಗಲೇ ಮುಂದಿನದನ್ನು ಅವ ಊಹಿಸಿ ಬಿಡುವ. ಅವನೊಬ್ಬನ ಬಗ್ಗೆ ಮಾತ್ರ ತನಗೆ ಅಸಾಧ್ಯವಾದ ಅಸೂಯೆ, ಪ್ರೇಮ ಹುಟ್ಟಿತ್ತು. ಅವನಿಗೆ ಹೋಲಿಸಿಕೊಂಡರೆ ರೂಪದಲ್ಲಾಗಲೀ ಬುದ್ಧಿ ಯಲ್ಲಾಗಲೀ ತಾನು ಸ್ವಲ್ಪ ಸ್ಥೂಲವೆ. ತಾನು ಮಾಧ್ವ, ಅವನು ಸ್ಮಾರ್ತ ಎಂಬೋದು ಇಬ್ಬರ ನಡುವಿನ ಗಾಢವಾದ ಪ್ರೇಮಕ್ಕೆ ಅಡ್ಡಿಯಾಗಿರಲಿಲ್ಲ. ತಾನು ಸದಾ ಮಾಧ್ವಮತ ಪ್ರತಿಪಾದನೆ ಮಾಡಬೇಕೆಂದು ಹಟತೊಟ್ಟು ಕೊಂಡಿದ್ದರೆ ಅವನು ಮಾತ್ರ ಪರಮಾತ್ಮನ ಅನುಭವವೇ ನನಗೆ ಮುಖ್ಯ ವಾದದ್ದು, ಉಳಿದದ್ದೆಲ್ಲ ಅಮುಖ್ಯ ಎಂದು ಹೇಳುತ್ತಿದ್ದ. ಪರಮಾತ್ಮನ

SRI JAGADGURU VISHWARADHYA JNANAMANDIR
LIBRARY.
Jangamwadi Math, VARANASI,
Acc. No.

ಅನುಭವಕ್ಕೊಂದು ದಾರಿ ಬೇಡವೇ, ದ್ವೈತ ಅಂತಹ ದಾರಿ ಎಂದು ತಾನು ವಾದಿಸಿದರೆ ದಾರಿಯಲ್ಲಿ ನಡೆದು ಸಿಗಲು ವೈಕುಂಠವೇನೊಂದು ಊರೇ, ಗ್ರಾಮವೇ, ನಿಂತಲ್ಲೆ ಅದು ಸಿಕ್ಕಿಬಿಡಬೇಕೆಂದು ಅವನು ಅನ್ನುತ್ತಿದ್ದ. ತರ್ಕ ಮೀಮಾಂಸಕ್ಕಿಂತ ಅವನಿಗೆ ಪ್ರಿಯವಾದದ್ದು ಸಂಗೀತ. ಜಯದೇವ ಕವಿಯ ಗೀತಗೋವಿಂದವನ್ನು ಅವನು ಹಾಡತೊಡಗಿದನೆಂದರೆ ನಂದನದಲ್ಲಿದ್ದಂತಾಗಿ ಬಿಡುತ್ತಿತ್ತು. 'ಲಲಿತ ಲವಂಗ ಲತಾಪರಿಶೀಲನ ಕೋಮಲ ಮಲಯ ಸಮೀರೇ'—ಸ್ಮೃತಿಯು ಉಕ್ಕಿಬಂದು ಗೆಳೆಯನ ನೆನಪಾಗಿ ಪ್ರಾಣೇಶಾ ಚಾರ್ಯರು ಗದ್ಗದಿತರಾದರು. ಪರಮಾತ್ಮ—ಇಂತಹ ಪ್ರೇಮವನ್ನು ಬಹಳ ದಿನ ನಾನು ಪಟ್ಟೇ ಇರಲಿಲ್ಲ. ಏನಾಗಿಹೋದನೋ ಮಹಾಬಲ. ಕಾಶಿ ಯಲ್ಲಿದ್ದಾಗ ತನ್ನಿಂದ ಅವ ದೂರದೂರವಾದ. ಯಾಕೆಂದು ಹೊಳೆಯಲೇ ಇಲ್ಲ. ಅತ್ಯಂತ ದುಃಖಕ್ಕೊಳಗಾಗಿಬಿಟ್ಟೆ ಆಗ. ಓದು ವಿದ್ಯಾ ಏನೂ ಹತ್ತದೇ ಹೋಯಿತು. ಸದಾ ಜೊತೆಗಿರುತ್ತಿದ್ದವ ತಪ್ಪಿಸಿಕೊಂಡು ಅಲೆಯಲು ಪ್ರಾರಂಭಿಸಿದ. ಕಾರಣ ತಿಳಿಯಲೇ ಇಲ್ಲ. ಹಗಲು ರಾತ್ರೆ ಆಗ ತಾನು ಮಹಾಬಲನಿಗಾಗಿ ಹಲುಬಿದಂತೆ ಯಾರ ಬಗ್ಗೆಯೂ ಹಲುಬಿದ್ದಿಲ್ಲ. ಮೋಹವಶನಾಗಿಬಿಟ್ಟಿದ್ದೆ. ತಿರುಗಿ ಇಡೀ ಜೀವನವನ್ನೇ ನೋಡಿಕೊಂಡರೆ ಮಹಾಬಲನ ಮೇಲೆ ಪಟ್ಟ ಪ್ರೇಮ ಯಾರ ಮೇಲೂ ನಾನೂ ಪಟ್ಟಿಲ್ಲ. ಎಡ ಕೆಂಗೆನ್ನೆಯ ಮೇಲೆ ಕಪ್ಪುಮಚ್ಚೆಯಿದ್ದ ಅವನ ವ್ಯಾಕುಲಮುಖ ಒಂದೊಂದು ದಿನ ಕಣ್ಣಿಗೆ ಕಟ್ಟಿದಂತಾಗಿ ಅವನ ಸ್ನೇಹಕ್ಕೆ ಹಲುಬುವಂತಾಗಿ ಬಿಡುತ್ತಿತ್ತು. ಆದರೆ ಹತ್ತಿರ ಸುಳಿದರೆ ಏನಾದರೂ ನೆವ ಹೇಳಿ ಅವ ತಪ್ಪಿಸಿಕೊಂಡುಬಿಡುವ. ಒಂದು ದಿನ ಅವ ಇದ್ದಕ್ಕಿದ್ದಂತೆ ಕಣ್ಮರೆಯಾಗಿ ಬಿಟ್ಟ; ಪಾಠಕ್ಕೆ ಬರೋದನ್ನ ನಿಲ್ಲಿಸಿಬಿಟ್ಟ. ಹುಡುಕುತ್ತ ಕಾಶಿಯ ಬೀದಿ ಗಳನ್ನೆಲ್ಲ ಅಲೆದೆ. ಎಲ್ಲಿ ಯಾರು ಅವನನ್ನು ಬಲಿಕೊಟ್ಟುಬಿಟ್ಟರೊ ಎಂದು ಕಂಗಾಲಾದೆ. ಒಂದು ದಿನ ಮನೆಯೊಂದರ ಚಾವಡಿಯ ಮೇಲೆ ಕೂತಿದ್ದ. ಆಶ್ಚರ್ಯಪಟ್ಟು ನೋಡಿದೆ—ಗುಡುಗುಡಿ ಸೇದುತ್ತ ಒಂಟಿಯಾಗಿ ಕೂತಿದ್ದ. ತಡೆಯಲಾರದೆ ಓಡಿದೆ, ಕೈ ಹಿಡಿದು ಎಳೆದೆ. ಭಾರವಾದ ಕಣ್ಣುಗಳನ್ನು ಎತ್ತಿ "ಪ್ರಾಣೇಶ, ನಿನ್ನ ಪಾಡಿಗೆ ನೀನು ಹೋಗು" ಎಂದುಬಿಟ್ಟ. ಹಿಡಿದು ಜಗ್ಗಿದೆ. ರೇಗಿ ಎದ್ದುನಿಂತು ಅವ "ನಿನಗೆ ಸತ್ಯ ಬೇಕೇ ? ಕೇಳು. ನಾನು ನನ್ನ ವ್ಯಾಸಂಗಾನ್ನ ಬಿಟ್ಟುಬಿಟ್ಟೆ. ಈಗ ಯಾವುದಕ್ಕಾಗಿ ಬದುಕುವೆ ಗೊತ್ತೆ? ಒಳಗೆ ಬಾ. ತೋರಿಸುತ್ತೇನೆ" ಎಂದು ಒಳಗೆ ಎಳೆದುಕೊಂಡು ಹೋಗಿ

ಸುಪ್ಪತ್ತಿಗೆಯ ಮೇಲೆ ಮಲಗಿ ಹಗಲಿನಲ್ಲಿ ನಿದ್ದೆಹೋದ ಒಬ್ಬ ಹುಡುಗಿಯನ್ನು ತೋರಿಸಿದ. ಕೈಗಳನ್ನು ಚೆಲ್ಲಿ ಅವಳು ಮಲಗಿದ್ದಳು. ಅವಳ ವೇಷ ವಸ್ತ್ರದ ಬೆಡಗಿನಿಂದಲೇ ಅವಳು ವೇಶ್ಯೆ ಎಂದು ತಿಳಿಯುವಂತಿತ್ತು. ನಾನು ಭಯದಿಂದ, ಆಶ್ಚರ್ಯದಿಂದ ನಡುಗಿಬಿಟ್ಟೆ. ಮಹಾಬಲ "ತಿಳಿಯಿತಲ್ಲವೇ ಪ್ರಾಣೇಶ. ನನಗಾಗಿ ಇನ್ನು ಯೋಚಿಸಬೇಡ. ಹೋಗು" ಎಂದುಬಿಟ್ಟ. ಬುದ್ಧಿಭ್ರಮಣೆಯಾದಂತಾಗಿ ಏನೊಂದು ಅನ್ನುವುದೂ ತೋರದೆ ನಡೆದುಬಿಟ್ಟೆ. ಮತ್ತೆ ಮನಸ್ಸು ಕಲ್ಲಾಗಿಬಿಟ್ಟಿತು. ಭ್ರಷ್ಟನಾಗಿಹೋದ ಮಹಾಬಲನಿಗೆ ವಿರುದ್ಧ ದಿಕ್ಕಿನಲ್ಲಿ ಬಾಳನ್ನು ನಡೆಸಿಬಿಡುತ್ತೇನೆಂದು ಹಟತೊಟ್ಟು ಬಂದುಬಿಟ್ಟೆ. ಇಲ್ಲಿ ನಾರಣಪ್ಪನನ್ನು ಕಂಡಾಗಲೆಲ್ಲ ಮಹಾಬಲನ ಜ್ಞಾಪಕ. ಇಬ್ಬರ ನಡುವೆ ಅಜಗಜಾಂತರ ವ್ಯತ್ಯಾಸವಿದ್ದೂ ಕೂಡ.

ಈಗ ಅನ್ನಿಸುತ್ತಿದೆ; ಮಹಾಬಲನನ್ನು ನೋಡಬೇಕು. ಕೇಳಬೇಕು: ಯಾಕೆ ನೀನು ಸ್ವೇಚ್ಛೆಯಿಂದಲೇ ನಿನ್ನ ಜೀವನದ ಗತಿಯನ್ನೆ ಬದಲಾಯಿಸಿಬಿಟ್ಟೆ? ಯಾವ ಅನುಭವ, ಯಾವ ಆಕಾಂಕ್ಷೆ, ಯಾವ ಮೋಹ ನಿನ್ನನ್ನು ಹೀಗೆ ನಡೆಸಿತು? ಈಗ ನನಗೆ ನೀನು ಏನು ಮಾಡೆಂದು ಹೇಳುತ್ತಿ? ನಿನಗೆ ಸ್ತ್ರೀಸುಖದಿಂದಲೇ ಸರ್ವತೃಪ್ತಿಯೂ ಆಯಿತೆ? ಅಷ್ಟೊಂದು ಶ್ರೀಮಂತವಾಗಿದ್ದ ನಿನ್ನ ಬಾಳು ಹೆಣ್ಣೊಬ್ಬಳಿಂದಲೇ ತೃಪ್ತವಾಗುವುದು ಸಾಧ್ಯವೇ?

ಆಹಾ ಹೊಳೆದುಬಿಟ್ಟಿತು. ಪ್ರಾಣೇಶಾಚಾರ್ಯರು ಎದ್ದು ನಿಂತು ನಡೆಯತೊಡಗಿದರು. ಮೂಲ ಇರುವುದು ಅಲ್ಲಿ. ಮಹಾಬಲನಿಂದ ನನಗೆ ಆದ ನಿರಾಶೆ ಉಳಿದೇಬಿಟ್ಟದ್ದಿರಬೇಕು. ಅಪ್ರತ್ಯಕ್ಷವಾಗಿ ನಾರಣಪ್ಪನಲ್ಲಿ ನಾನು ಮಹಾಬಲನನ್ನ ಕಂಡಿರಬೇಕು. ಅಲ್ಲಿ ಆದ ಸೋಲಿಗೆ ಸಮಾಧಾನವಾಗಲೆಂದು ನಾರಣಪ್ಪನನ್ನು ಗೆಲ್ಲಲು ಪ್ರಯತ್ನಿಸಿರಬೇಕು. ಆದರೆ ಸೋತೆ, ಸೋತೆ—ಮೂಗಡಿಯಾಗಿ ಬಿದ್ದುಬಿಟ್ಟೆ. ಯಾವುದರ ವಿರುದ್ಧ ಹೋರಾಡುತ್ತ ಬಂದೆನೋ ಅದೇ ನಾನಾಗಿಬಿಟ್ಟೆ. ಯಾಕೆ? ಯಾಕೆ? ಎಲ್ಲಿ, ಹೇಗೆ, ಸೋತೆ? ಹುಡುಕಲು ಹೋದರೆ ಮತ್ತೆಲ್ಲ ಗಂಟುಕಟ್ಟಿಕೊಂಡುಬಿಡುತ್ತದೆ.

ನೋಡಹೋದರೆ ಒಂದಕ್ಕಿನ್ನೊಂದು ಗಂಟುಹಾಕಿಕೊಂಡಿದೆ. ಮಹಾಬಲನಿಂದ ನಾರಣಪ್ಪ, ನಾರಣಪ್ಪನಿಂದ ನನ್ನ ಹಠ, ನಾನು ಓದಿದ ಪುರಾಣ, ಅದರ ಪರಿಣಾಮ, ಕೊನೆಗೆ ನನಗೇ ಬೆಳ್ಳಿಯ ಮೊಲೆಗಳ ಮೇಲೆ ಬಂದ ಆಸೆ, ಈಗ ನಾನು ಪಡೆಯುತ್ತಿರುವ ರೂಪ, ಜೀವನದುದ್ದಕ್ಕೂ ತಯಾರಾಗುತ್ತಿತ್ತು—ಪರೋಕ್ಷವಾಗಿ. ಚಂದ್ರಿಯನ್ನು ಕೂಡಿದ ಮುಹೂರ್ತ ಹೀಗೆ

ನೋಡಿದಲ್ಲಿ ನಿರಪೇಕ್ಷಿತವಾಗಿ ಬಂದದ್ದೆಂದೂ ಅನುಮಾನವಾಗುತ್ತದೆ. ಒಳಗಿದ್ದುದೆಲ್ಲ ಹೊರಗೆ ಬಂದುಬಿಟ್ಟ ಕ್ಷಣವಿರಬೇಕು ಅದು—ಉಗ್ರಾಣದಿಂದ ಧುಮುಕಿದ ಇಲಿಗಳ ಹಾಗೆ. ಮತ್ತೆ ಅಗ್ರಹಾರ ನೆನಪಾಗಿ ಅಸಹ್ಯದ ಅನುಭವ ಮರುಕಳಿಸುತ್ತದೆ. ತಾನು ಎದುರಿಸುತ್ತಿರುವ ಸಂದಿಗ್ಧದ ಸ್ಪಷ್ಟ ರೂಪವಾಗಿ ಅಗ್ರಹಾರ ನಿಂತಿದೆ—ನನ್ನ ಇಡೀ ಬಾಳಿಗೊಂದು ವ್ಯಾಖ್ಯಾನ ಬರೆದು, ಅಲ್ಲಿಂದ ಓಡಿಬಿಡಬೇಕೆಂಬುದೊಂದೇ ಈಗ ನನಗೆ ಸ್ಪಷ್ಟ. ಪ್ರಾಯಶಃ ಚಂದ್ರಿಯಿದ್ದಲ್ಲಿಗೆ ಹೋಗಿಬಿಡುವುದು. ಮಹಾಬಲನಂತಾಗಿಬಿಡುವುದು. ಹಾಗೆ—ಸ್ಪಷ್ಟವಾದೊಂದು ರೂಪ ಪಡೆದುಬಿಡುವುದು. ತ್ರಿಶಂಕು ಅವಸ್ಥೆಯಿಂದ ಪಾರಾಗಿಬಿಡುವುದು. ಯಾರ ಕಣ್ಣಿಗೂ ಬೀಳದಂತೆ, ಸತ್ತೆಯಾಗದಂತೆ, ನಾನೀಗ ನಡೆದುಬಿಡಬೇಕು.

ನಡೆಯುತ್ತಿದ್ದಂತೆ ಪ್ರಾಣೇಶಾಚಾರ್ಯರಿಗೆ ಕಾಡಿನಲ್ಲಿ ತನ್ನ ಬೆನ್ನಿನ ಹಿಂದೆ ಯಾರೋ ಬರುತ್ತಿದ್ದಾರೆ ಎಂದು ಅನ್ನಿಸತೊಡಗಿತು. ಯಾವನೋ ಒಬ್ಬನ ಎರಡು ಕಣ್ಣುಗಳು ನೆಟ್ಟಗೆ ನನ್ನನ್ನು ನೋಡುತ್ತಿವೆ ಎನ್ನಿಸಿತು. ಬೆನ್ನನ್ನು ನೇರಮಾಡಿ ನಡೆಯತೊಡಗಿದರು. ಹಿಂದಕ್ಕೆ ತಿರುಗಿ ನೋಡಬೇಕೆನ್ನಿಸಿತು. ದಿಗಿಲಾಯಿತು, ಸಪ್ಪಳವಾದಂತಾಯಿತು, ತಿರುಗಿದರು. ದೂರದಲ್ಲೊಬ್ಬ ಪ್ರಾಯಕ್ಕೆ ಬಂದ ತರುಣ ವೇಗವೇಗವಾಗಿ ಹೆಜ್ಜೆಹಾಕಿ ಬರುವುದು ಕಾಣಿಸಿತು. ಪ್ರಾಣೇಶಾಚಾರ್ಯರೂ ವೇಗವಾಗಿ ಹೆಜ್ಜೆ ಹಾಕಿದರು. ತಿರುತಿರುಗಿ ನೋಡಿದರೆ ಅವನೂ ವೇಗವಾಗಿ ಹೆಜ್ಜೆಹಾಕುತ್ತಿದ್ದಾನೆ. ಅದೇ ವೇಗದಲ್ಲಿ ನಡೆಯತೊಡಗಿದರು. ಆದರೆ ಆತ ಜಗ್ಗಿದಂತೆ ಕಾಣಲಿಲ್ಲ. ತರುಣನಾದ್ದರಿಂದ ಇನ್ನಷ್ಟು ವೇಗವಾಗಿ ನಡೆದು ಹತ್ತಿರವಾಗತೊಡಗಿದ. ಎಲ್ಲಾದರೂ ಅವ ತನ್ನ ಪರಿಚಯವಿದ್ದವನಾಗಿ ಬಿಟ್ಟಿದ್ದರೆ ಎಂದು ದಿಗಿಲಾಯಿತು. ಎಷ್ಟು ವೇಗವಾಗಿ ನಡೆದರೂ ಅವ ಇನ್ನಷ್ಟು ಹತ್ತಿರವಾದ. ಪ್ರಾಣೇಶಾಚಾರ್ಯರಿಗೆ ಕಾಲು ನೋವಾಗಿ ನಡಿಗೆಯ ವೇಗ ಕಡಿಮೆಯಾಯಿತು. ಆತ ಜೊತೆಯಾಗಿಬಿಟ್ಟ. ಏದುಸಿರು ಬಿಡುತ್ತ ಮೆಲ್ಲಗೆ ತನ್ನ ಜೊತೆಗೇ ನಡೆಯಲು ತೊಡಗಿದ. ಯಾರಿರಬಹುದೋ ಎಂದು ನೋಡಿದರು. ಪರಿಚಯ ಹತ್ತದು—

"ನಾನು ಮಾಲೇರರ ಪುಟ್ಟ. ಮೇಳಿಗೆಯ ರಥೋತ್ಸವಕ್ಕೆ ಹೊರಟವ. ನಿಮ್ಮ ಕಡೆ ಎತ್ತಲೊ?"

ಎಂದು ಅವನಾಗಿಯೇ ಪ್ರಾರಂಭಿಸಿದ. ಪ್ರಾಣೇಶಾಚಾರ್ಯರಿಗೆ ಮಾತಾಡಲು ಇಷ್ಟವಾಗಲಿಲ್ಲ. ಏನು ಹೇಳಬೇಕೆಂದು ಹೊಳೆಯದೆ ಅವನ ಮುಖ

ವನ್ನೇ ನೋಡಿದರು. ಕಪ್ಪಗೆ ಬಾಡಿದ ಅವನ ಮುಖದಲ್ಲಿ ಬೆವರಿನ ಹನಿಗಳು ನಿಂತಿದ್ದುವು. ನೀಳವಾದ ದೀರ್ಘವಾದ ಮೂಗಿನಿಂದಾಗಿ ಅವನ ಮುಖಕ್ಕೊಂದು ಹಠವಾದಿಯ ಸ್ವರೂಪ ಬಂದಿತ್ತು. ಕಣ್ಣುಗಳು ಸಣ್ಣಗೆ ಹತ್ತಿರ ಹತ್ತಿರವಿದ್ದುದರಿಂದ ಅವನ ದೃಷ್ಟಿ ಚೂಪಾಗಿ ಅವನ ಕಣ್ಣಿಗೆ ಬಿದ್ದವರು ಕಸಿವಿಸಿಪಡುವಂತಿತ್ತು. ಕ್ರಾಪು ಬಿಟ್ಟು, ಅಂಗಿ ಪಂಚೆಯುಟ್ಟು ಪೇಟೆಯ ಯುವಕನಂತೆ ಕಾಣುತ್ತಿದ್ದ.

"ನಿಮ್ಮನ್ನು ಬೆನ್ನ ಹಿಂದಿಂದ ನೋಡಿ, ನಿಮ್ಮ ನಡಿಗೆಯ ಕ್ರಮದಿಂದ ಯಾರೋ ಪರಿಚಯದವರೆಂದುಕೊಂಡೆ. ಈಗ ನಿಮ್ಮ ಮುಖ ನೋಡಿದರೆ ಎಲ್ಲೋ ಕಂಡಂತೆ ಅನ್ನಿಸುತ್ತೆ...."

ಸಾಮಾನ್ಯವಾಗಿ ಹಳ್ಳಿಯವರೆಲ್ಲ ಮಾತಿನ ಪ್ರಾರಂಭದಲ್ಲಿ ಹೇಳುವ ಪ್ರಕಾರ ಪುಟ್ಟ ಅಂದಿದ್ದರೂ ಪ್ರಾಣೇಶಾಚಾರ್ಯರಿಗೆ ಕಸಿವಿಸಿಯಾಯಿತು.

"ಇಲ್ಲ, ನಾನು ಘಟ್ಟದ ಕೆಳಗಿನವ. ಸಂಭಾವನೆಗೆಂದು ಹೊರಟವ" ಎಂದು ಪ್ರಾಣೇಶಾಚಾರ್ಯರು ಮಾತನ್ನು ಮುಗಿಸಲು ಪ್ರಯತ್ನಿಸಿದರು.

"ಓಹೋ—ನನಗೂ ಘಟ್ಟದ ಕೆಳಗಿನ ಪರಿಚಯವಿದೆ. ಅಲ್ಲೇ ನನ್ನ ಮಾವನ ಮನೆ. ಆಗಾಗ್ಗೆ ಹೋಗಿಬರೋದು ಉಂಟು. ಘಟ್ಟದ ಕೆಳಗೆ ಎಲ್ಲಿಯಾಯಿತು ನಿಮ್ಮ ಊರು?"

"ಕುಂದಾಪುರ."

"ಓಹೋ ಕುಂದಾಪುರವೆ? ಅಲ್ಲಿ ನಿಮಗೆ ಶೀನಪ್ಪಯ್ಯನ ಪರಿಚಯವೆ?"

"ಇಲ್ಲ" ಎಂದು ಪ್ರಾಣೇಶಾಚಾರ್ಯರು ಸರಸರನೆ ನಡೆಯತೊಡಗಿದರು. ಆದರೆ ಮಾತನ್ನು ಬಯಸಿ ಬಂದ ಪುಟ್ಟ ಅಸ್ಟಿಷ್ಟಕ್ಕೆ ಸಮಾಧಾನವಾಗುವಂತೆ ಕಾಣಲಿಲ್ಲ.

"ಆ ಶೀನಪ್ಪಯ್ಯ ನಮಗೆ ತುಂಬ ಬೇಕಾದವರು. ನಮ್ಮ ಮಾವಂದಿರಿಗೂ ಅವರಿಗೂ ತುಂಬ ಕೇವಲ. ನಮ್ಮ ಇವಳ ತಂಗಿಯನ್ನೇ ಅವರ ಎರಡನೆಯ ಮಗನಿಗೆ ತಂದುಕೊಂಡಿದ್ದಾರೆ...."

'ಹೂ ಹೂ' ಎನ್ನುತ್ತ ಪ್ರಾಣೇಶಾಚಾರ್ಯರು ನಡೆದರು. ಬಿಟ್ಟುಕೊಟ್ಟು ನಡೆದರೂ ಬಿಡುವಂಥದಲ್ಲ ಇದು. ಅವನು ಅವಸರದಲ್ಲಿದ್ದರೆ ಮುಂದೆ ಹೋಗಿಬಿಡಲಿ ಎಂದು ಆಯಾಸವಾದವರಂತೆ ಮರ ಒಂದರ ಬುಡದಲ್ಲಿ ಕೂತರು. ಪುಟ್ಟನಿಗೆ ಅದರಿಂದ ಸಂತೋಷವಾದ ಹಾಗೆ ಕಂಡಿತು. ಅವನೂ

ಉಪ್ಪಿಟ್ಟು ಎಂದು ಕೂತು ಅಂಗಿಯ ಜೇಬಿನಿಂದ ಬೀಡಿ ಬೆಂಕಿಪೊಟ್ಟಣ ತೆರೆದು ಬೀಡಿಯನ್ನು ಒಡ್ಡಿದ. ಪ್ರಾಣೇಶಾಚಾರ್ಯರು ಬೇಡವೆಂದರು. ಅವನು ಬೀಡಿ ಹತ್ತಿಸಿದ. ಪ್ರಾಣೇಶಾಚಾರ್ಯರು ಇಷ್ಟಕ್ಕೇ ತನ್ನ ಆಯಾಸ ಪರಿಹಾರವಾದಂತೆ ನಟಿಸುತ್ತ ಎದ್ದು ನಿಂತು ಹೊರಟರು. ಪುಟ್ಟನೂ ಎದ್ದು ನಿಂತು ಹೊರಟುಬಿಟ್ಟ. "ದಾರಿಯಲ್ಲೊಬ್ಬರು ಮಾತಿಗೆ ಸಿಕ್ಕರೆ ದಾರಿ ಕಳೆದದ್ದು ಗೊತ್ತಾಗುವುದಿಲ್ಲ ಅಲ್ಲವೇ? ನನಗಂತೂ ಮಾತಿಗೊಂದು ಜನ ಬೇಕಪ್ಪ" ಎಂದು ಪುಟ್ಟ ಹಸನ್ಮುಖಿಯಾಗಿ ಪ್ರಾಣೇಶಾಚಾರ್ಯರನ್ನು ಕುತೂಹಲದಿಂದ ನೋಡುತ್ತ ನಡೆದ.

* * *

ಇತ್ತಲಾಗಿ ಪ್ರಾಣೇಶಾಚಾರ್ಯರು ತಮ್ಮ ಹೆಂಡತಿಯ ಶವಸಂಸ್ಕಾರ ಮಾಡಿ ಕಾಲು ಕೊಂಡಲ್ಲಿಗೆ ನಡೆದುಬಿಡುವುದೆಂದು ಹೊರಟುಬಿಟ್ಟ ಒಂದೆರಡು ಗಂಟೆಗಳೊಳಗೆ ಪಾರಿಜಾತಪುರದವರಿಗೆ ಎಲ್ಲ ವಿಷಯ ತಿಳಿದುಬಿಟ್ಟಿತು— ನಾರಣಪ್ಪನ ಶವವನ್ನು ಬ್ಯಾರಿಯೊಬ್ಬ ಸುಟ್ಟುಬಿಟ್ಟ ಎಂಬ ಸಂಗತಿಯೊಂದು ಹೊರತಾಗಿ. ಕುಡಿತದ ಅಮಲಿನಲ್ಲಿ ಮುಹೂರ್ತ ಮಾತ್ರವಾದರೂ ಧೀರರಾಗಿ ನಾರಣಪ್ಪನ ಶವಸಂಸ್ಕಾರದ ಮನಸ್ಸುಮಾಡಿ, ನಂತರ ಸತ್ತೆವೋ ಕೆಟ್ಟೆವೋ ಎಂದು ಓಡಿಬಿಟ್ಟಿದ್ದ ಪಾರಿಜಾತಪುರದ ತರುಣರು ಮಾತ್ರ ತಾವು ಕಂಡ ಸತ್ಯವನ್ನು ಯಾರಿಗೂ ಹೇಳಲಾರದೆ ಬಾಯಿ ಮುಚ್ಚಿಕೊಂಡುಬಿಟ್ಟಿದ್ದರು. ಮುಖ್ಯವಾಗಿ ಸಾಹುಕಾರ ಮಂಜಯ್ಯನವರಿಗೆ ಗಾಬರಿಯುಂಟು ಮಾಡಿದ ವಿಷಯವೆಂದರೆ ಒಂದರ ಹಿಂದೆ ಒಂದರಂತೆ ಬಂದ ಸಾವು. ನಾರಣಪ್ಪ, ಮತ್ತೆ ದಾಸಾಚಾರ್ಯ, ಮತ್ತೆ ಪ್ರಾಣೇಶಾಚಾರ್ಯರ ಹೆಂಡತಿ—ಅಂದರೆ ಒಂದೇ ಅರ್ಥ: ಇದು ಪಿಡುಗು. ಶಿವಮೊಗ್ಗೆಯ ಮಂಡಿಪೇಟೆ, ಕೋರ್ಟು, ಕಛೇರಿಗಳ ವ್ಯವಹಾರದಲ್ಲಿ ಪಳಗಿದ ಅವರು ತಮ್ಮ ಅಗ್ರಹಾರದ ಇತರ ಬ್ರಾಹ್ಮಣರ ವಿಚಾರಕ್ಕೆ ನಕ್ಕುಬಿಟ್ಟರು. ಎಲ್ಲರ ಮತ, ನಾರಣಪ್ಪನ ಅಪಮೃತ್ಯುವಿನಿಂದ ಮತ್ತು ಅವನ ಶವಸಂಸ್ಕಾರ ಮಾಡದೇ ಹೋದ ಕರ್ತವ್ಯ ಭಂಗದಿಂದಾಗಿ ಹೀಗಾಗುತ್ತಿದೆ ಅಂತ. ಮಂಜಯ್ಯನಿಗೆ, 'ಅಯ್ಯೊ ಮೊನ್ನೆ ತಾನೇ ನಮ್ಮಲ್ಲಿಂದ ಉಪ್ಪಿಟ್ಟು ತಿಂದು ಹೋದ ದಾಸಾಚಾರ್ಯ ಸತ್ತುಬಿಟ್ಟನಲ್ಲ' ಎಂದು ವ್ಯಥೆಯಾದರೂ—ಹಾಗೆ ಗಟ್ಟಿಯಾಗಿ ಅಂದರೂ—ಒಳಗೊಳಗೆ ಆ ಬ್ರಾಹ್ಮಣನನ್ನು ಒಳಗಡೆಗೆ ಬಿಟ್ಟುಕೊಂಡುಬಿಟ್ಟೆನಲ್ಲ ಎಂಬ

ಭಯ. ಅವತ್ತು ದೂರ್ವಾಸಪುರದ ಬ್ರಾಹ್ಮಣರೆಲ್ಲ ಬಂದು ಶಿವಮೊಗ್ಗೆ-ಯಿಂದ ಬಂದ ನಾರಣಪ್ಪ ಗೆಡ್ಡೆಯೆದ್ದು ಜ್ವರ ಬಂದು ಸತ್ತ ಎಂದು ಹೇಳಿದಾಗಲೆ ಅವರಿಗೆ ಅನುಮಾನವಾಗಿತ್ತು. ಆದರೆ ಬಾಯಾರ ಆ ಭಯಂಕರ ರೋಗದ ಹೆಸರನ್ನು ಹೇಳಲೂ ಹೆದರಿಕೆಯಾಗಿತ್ತು. ನನಗೇಕೆ ಅಧಿಕಪ್ರಸಂಗ ಎನ್ನಿಸಿತ್ತು. ಮತ್ತೀಗ ಇಲಿಗಳು ಬಿದ್ದು ಸಾಯುತ್ತಿವೆ, ಅಗ್ರಹಾರ ಬಿಟ್ಟು ಓಡಲಿಕ್ಕೆ ಹತ್ತಿದ್ದಾವೆ, ರಣಹದ್ದುಗಳು. ಅವುಗಳಿಗಾಗಿ ಬಂದಿದ್ದಾವೆಂಬ ಸುದ್ದಿ ಕೇಳಿದಮೇಲಂತೂ ಅನುಮಾನ ಸಂಪೂರ್ಣ ಬಿಟ್ಟುಹೋಯಿತು. ರೂಪಾಯಿಗೆ ಹದಿನಾರಾಣೆಯಷ್ಟು ಖಚಿತ ತನ್ನ ಊಹೆ. ಅಲ್ಲದೆ ನೆನ್ನೆ ಬಂದ 'ತಾಯಿನಾಡು' ಪತ್ರಿಕೆ—ವಾರದ ಹಿಂದಿನದ್ದಾದರೂ—ಏನಂತೆ—ಮೂಲೆಯೊಂದರಲ್ಲಿ ಸುದ್ದಿಯನ್ನು ಅಚ್ಚುಮಾಡಿತ್ತು. "ಶಿವಮೊಗ್ಗೆಯಲ್ಲಿ ಪ್ಲೇಗ್" ಎಂದು ಸುದ್ದಿ. ನಾರಣಪ್ಪ ಪ್ಲೇಗನ್ನು ತಂದ. ಅದು ಕಾಳ್ಗಿಚ್ಚಿನಂತೆ ಹರಡುವ ಪಿಡುಗು. ಇಷ್ಟು ದಿನ ಸುಮ್ಮನಿದ್ದದ್ದು, ಯಾವುದೋ ಕುರುಡುಧರ್ಮಕ್ಕೆ ಗಂಟುಬಿದ್ದು ಸತ್ತವನ ಶವಸಂಸ್ಕಾರ ಮಾಡದೇ ಹೋದದ್ದು—ಸ್ವತಃ ಕಲ್ಲುಚಪ್ಪಡಿಯನ್ನು ತಲೆಯ ಮೇಲೆ ಎಳೆದುಕೊಂಡು ಬಿಟ್ಟಂತಾಯಿತು. ಮುಟ್ಠಾಳರು ನಾವು. ನಾನೂ ಪೆದ್ದನಾಗಿಬಿಟ್ಟೆನಲ್ಲ! "ಕೂಡಲೇ ಗಾಡಿ ಕಟ್ಟಿರಿ" ಎಂದು ಚಾವಡಿಯಲ್ಲಿ ನಿಂತವರು ಕೂಗಿದರು. ಸ್ವಲ್ಪವೂ ಕಾಲಹರಣಮಾಡುವಂತಿಲ್ಲ. ಒಂದಿಲ್ಲೊಂದು ರೀತಿಯಲ್ಲಿ ಪ್ಲೇಗು ಹೊಳೆ ದಾಟಿ ತಮ್ಮ ಅಗ್ರಹಾರಕ್ಕೂ ಬಂದೀತು. ಪ್ಲೇಗಿನಿಂದ ಸತ್ತ ಒಂದು ಇಲಿಯನ್ನ ಹದ್ದೋ ಕಾಗೆಯೋ ಕಚ್ಚಿತಂದು ತಮ್ಮ ಅಗ್ರಹಾರದಲ್ಲಿ ಎಸೆದು ಬಿಟ್ಟರೂ ಸಾಕು—ಎಲ್ಲ ಮುಗಿದಂತೆ. ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಮನೆಯ ಹೊರಗೆ ನಿಂತು ಕೂಗಿ ಹೇಳಿದರು : ನಾನು ಪೇಟೆಯಿಂದ ಹಿಂದಕ್ಕೆ ಬರುವತನಕ ಯಾರೂ ದೂರ್ವಾಸಪುರದ ಹತ್ತಿರ ಸುಳಿಯಕೂಡದು ಎಂದು. ಆದರೆ ಅಗ್ರಹಾರದ ನಾಯಕ ತಾವಾದ್ದರಿಂದ ಯಾರಿಗೂ ಇದು ಪ್ಲೇಗಿರಬಹುದೆಂಬ ಭೀತಿಯನ್ನು ಮುಟ್ಟಿಸುವ ಮನಸ್ಸಾಗಲಿಲ್ಲ. ಗಾಡಿ ಕಟ್ಟಿಯಾದ್ದೇ ತಡ ಕಮಾನುಗಾಡಿಯೊಳಗೆ ದಿಂಬಿಗೊರಗಿ ಕೂತು, ಗಾಡಿ ಹೊಡೆಯುವವನಿಗೆ ತೀರ್ಥಹಳ್ಳಿಗೆ ಓಡಿಸು ಎಂದರು. ಅವರ ವ್ಯವಹಾರ ಚತುರ ಮನಸ್ಸಿನಲ್ಲಿ ಸ್ಪಷ್ಟವಾದ ಸಂಕಲ್ಪ ಮೂಡಿತ್ತು : ಒಂದು—ಮುನಿಸಿಪಾಲಿಟಿಗೆ ತಿಳಿಸಿ ಹೆಣ ಎತ್ತಿಸಬೇಕು. ಎರಡು—ಡಾಕ್ಟರನ್ನು ಕರೆಸಿ ಇನಾಕ್ಯುಲೇಶನ್ ಮಾಡಿಸಬೇಕು. ಮೂರು—ಸಂಪು ತರಿಸಿ ವಿಷವಾಯು

ವನ್ನು ದೋರುಗಳಿಗೆಲ್ಲ ತುಂಬಿಸಿ ಇಲಿಯ ಬಿಲಗಳನ್ನು ಮುಚ್ಚಿಸಬೇಕು. ನಾಲ್ಕು—ಅವಶ್ಯವಾದರೆ ಅಗ್ರಹಾರವನ್ನೆ ಎಲ್ಲರೂ ಬಿಟ್ಟು ಹೋಗಬೇಕು—ಸ್ವಲ್ಪ ಕಾಲದವರೆಗಾದರೂ. ದಾರಿಯುದ್ದಕ್ಕೂ 'ಮುಟ್ಟಾಳರು ಮುಟ್ಟಾಳರು' ಎಂದು ಜಪಿಸುತ್ತ ಎತ್ತುಗಳ ಬಾಲ ತಿರುವಿ ಓಡಿಸಲು ಗಾಡಿ ಹೊಡೆಯುವವನಿಗೆ ಹುರಿದುಂಬಿಸಿದರು. ಗಾಡಿ ತೀರ್ಥಹಳ್ಳಿಯ ಮಾರ್ಗ ಹಿಡಿದು ಓಡಿತು.

* * *

ಮಠ ಬಿಟ್ಟು ನಿರಾಶರಾಗಿ ಗರುಡಾಚಾರ್ಯ ಲಕ್ಷ್ಮಣಾಚಾರ್ಯ ಇತ್ಯಾದಿ ಬ್ರಾಹ್ಮಣರು ಹರಿ ಹರಿ ಎಂದು ಪದ್ಮನಾಭಾಚಾರ್ಯ ಜ್ವರ ಏರಿ ಮಲಗಿದ್ದ ಅಗ್ರಹಾರಕ್ಕೆ ಬಂದರು. ಅಲ್ಲಿ ಬಂದು ನೋಡುವಾಗ ಪದ್ಮನಾಭಾಚಾರ್ಯನಿಗೆ ಧ್ಯಾಸ ತಪ್ಪಿಹೋಗಿತ್ತು. ಅಗ್ರಹಾರದ ಬ್ರಾಹ್ಮಣನೊಬ್ಬ ಪದ್ಮನಾಭಾಚಾರ್ಯನ ಹೆಂಡತಿಗೆ ಈ ವಿಷಯವನ್ನು ತಿಳಿಸಲೆಂದು ಆತುರದಿಂದ ಅವಳ ತೌರಿಗೆ ಓಡಿದ್ದ. ಇನ್ನೊಬ್ಬ ಯುವಕ ಡಾಕ್ಟರನ್ನು ಕರೆದುಕೊಂಡು ಬರಲೆಂದು ಪೇಟೆಗೆ ಹೋಗಿದ್ದ. ಗರುಡಾಚಾರ್ಯನಿಗೆ ಇದರಿಂದ ಭೀತಿಯಾಯಿತು. ಮಠದಲ್ಲಿ ಗುಂಡಾಚಾರ್ಯ ಜ್ವರ ಬಂದು ಮಲಗಿದ; ಕೈಮರದಲ್ಲಿ ದಾಸಾಚಾರ್ಯ ಮಲಗಿದ; ಇಲ್ಲಿ ನೋಡಿದರೆ ಪದ್ಮನಾಭಾಚಾರ್ಯನ ನಾಲಗೆ ಬಿದ್ದುಹೋಗಿದೆ—ಅಗ್ರಹಾರಕ್ಕೆ ಏನೋ ಗಂಡಾಂತರ ಒದಗಿದೆ ಎಂಬುದು ನಿರ್ವಿವಾದ. ನಾರಣಪ್ಪನ ಶವಸಂಸ್ಕಾರಕ್ಕೆ ಅಡ್ಡಿ ಬಂದ ಗರುಡಾಚಾರ್ಯನನ್ನು ಎಲ್ಲರ ಎದಿರು ಲಕ್ಷ್ಮಣಾಚಾರ್ಯ ಹಳಿದ. ಆದರೆ ಎಲ್ಲರೂ ಇದು ಬೈದಾಡುವ ಕಾಲವಲ್ಲ, ತ್ವರೆಯಾಗಿ ಹೋಗಿ ಅವನ ಸಂಸ್ಕಾರ ಮುಗಿಸಿ ದೇವರಿಗೆ ತಪ್ಪುಕಾಣಿಕೆ ಕಟ್ಟಿ ಎಂದು ಬೋಧಿಸಿದರು. ಮನಸ್ಸಿಲ್ಲದ ಮನಸ್ಸಿನಿಂದ ಪದ್ಮನಾಭಾಚಾರ್ಯನನ್ನು ಅಲ್ಲೆ ಬಿಟ್ಟು ಹೊರಟದ್ದಾಯಿತು. ಆದರೆ ಹೊರಡುವ ಮುಂಚೆ ಗರುಡಾಚಾರ್ಯ ಅಗ್ರಹಾರದವರಿಗೆ ಕೈಮುಗಿದು, 'ದಯಮಾಡಿ ಬಂದ ಡಾಕ್ಟರನ್ನು ಮಠಕ್ಕೆ ಕರೆದುಕೊಂಡು ಹೋಗಿ ಗುಂಡಾಚಾರ್ಯನಿಗೂ ಅಷ್ಟು ಮದ್ದು ಕೊಡಿಸಿಬಿಡಿ' ಎಂದು ಪ್ರಾರ್ಥಿಸಿದ. ದಾರಿಯಲ್ಲೊಬ್ಬನಿಗೂ ಮಾತಾಡುವ ಧೈರ್ಯವಿಲ್ಲ. ಮಂಕು ಕವಿದುಬಿಟ್ಟಿತು. ಗರುಡಾಚಾರ್ಯ ಮನಸ್ಸಿನಲ್ಲೇ ಮಾರುತಿಗೆ ತಪ್ಪುಕಾಣಿಕೆ ಕಟ್ಟುತ್ತೇನೆ, ಮನ್ನಿಸಿಬಿಡು ಎಂದು ಪ್ರಾರ್ಥಿಸಿದ. ಹೀಗೆ ಭಾರವಾದ ಮನಸ್ಸಿನಿಂದ ನಡೆದು ನಡೆದು ಕೈಮರಕ್ಕೆ ಬಂದು

ನೋಡಿದರೆ—ಏನು ನೋಡುವುದು ? ದಾಸಾಚಾರ್ಯನ ಬೂದಿ, ಪ್ರಾಣೇಶಾಚಾರ್ಯರ ಹೆಂಡತಿ ತೀರಿಕೊಂಡ ಸುದ್ದಿ. ಬ್ರಾಹ್ಮಣರಿಗೆಲ್ಲ ಇದರಿಂದ ದಿಗ್ಭ್ರಮೆಯಾಗಿಬಿಟ್ಟಿತು. ತಾವು ತಿಳಿದಿದ್ದ ಲೋಕ ಅಸ್ತವ್ಯಸ್ತವಾಗಿಬಿಟ್ಟಿತು. ಕತ್ತಲಿನಲ್ಲೊಂದು ಭೂತದ ದರ್ಶನವಾದಂತಾಯಿತು. ಮಕ್ಕಳ ಹಾಗೆ ಗೋಡೆಗೊರಗಿ ಕಣ್ಣೀರು ತುಂಬಿ ಕೂತುಬಿಟ್ಟರು. ಹಿರಿಯರಾದ ಸುಬ್ಬಣ್ಣಾಚಾರ್ಯರು ಸಮಾಧಾನ ಹೇಳಿದರು, ಧೈರ್ಯ ಹೇಳಿದರು. ಬಹಳ ಹೊತ್ತು ಮಂಕಾಗಿ ಕೂತಿದ್ದು, ಗರುಡಾಚಾರ್ಯ ಕ್ಷೀಣವಾದ ಧ್ವನಿಯಲ್ಲಿ ಕೇಳಿದ: ನಮ್ಮ ಅಗ್ರಹಾರದಲ್ಲಿ ಇನ್ನೂ ಇಲಿಗಳು ಬೀಳುತ್ತಿವೆಯೆ ? ಸುಬ್ಬಣ್ಣಾಚಾರ್ಯರು 'ನಿಮ್ಮ ಅರ್ಥ ಏನು ?' ಎಂದರು. 'ಏನಿಲ್ಲ, ಹದ್ದುಗಳು ಮನೆಯ ಮೇಲೆ ಕೂತಿದ್ದಾವೆ' ಎಂದ ಗರುಡಾಚಾರ್ಯ. 'ಸಂಸ್ಕಾರ ಮಾಡಿ ಮುಗಿಸಿ ಎಲ್ಲ ಮಂಗಳವಾಗುತ್ತದೆ' ಎಂದರು ಸುಬ್ಬಣ್ಣಾಚಾರ್ಯ. 'ನಾನು ಅಗ್ರಹಾರಕ್ಕೆ ಹೋಗುವುದಿಲ್ಲ' ಎಂದ ಗರುಡಾಚಾರ್ಯ. ಉಳಿದ ಬ್ರಾಹ್ಮಣರೂ ಪಿಸುಗುಟ್ಟಿದರು: 'ಆ ಕೊಳೆತ ಹೆಣದ ಸಂಸ್ಕಾರ ಮಾಡೋದು ಹೇಗೆ, ನಾಲ್ಕು ಗಾಡಿ ಸೌದೆಗೂ ಅದನ್ನು ಸುಡುವುದು ಶಕ್ಯವಿಲ್ಲ.' ಲಕ್ಷ್ಮಣಾಚಾರ್ಯ 'ಏಳಿ' ಎಂದ. ಗರುಡಾಚಾರ್ಯ 'ನನಗೆ ಸುಸ್ತಾಗಿದೆ—ನೀವೇ ಯಾರಾದರೂ ಮಾಡಿರಿ' ಎಂದ. 'ವ್ಯವಹಾರಜ್ಞರಾದ ನೀವೇ ಹೀಗೆ ಭಯದಿಂದ ಮಂಕಾಗಿಬಿಟ್ಟರೆ ಉಳಿದವರ ಗತಿ ಏನು' ಎಂದರು ಸುಬ್ಬಣ್ಣಾಚಾರ್ಯ. 'ನನಗೆ ಕೂಡಲ್ಲ' ಎಂದ ಗರುಡಾಚಾರ್ಯ. 'ಏಳಿ ಏಳಿ' ಎಂದ ಲಕ್ಷ್ಮಣಾಚಾರ್ಯ; 'ಅಗ್ರಹಾರದಲ್ಲಿ ಯಾರೂ ಇಲ್ಲ, ದನಕರುಗಳ ಗತಿ ಏನು, ಅವನ್ನು ಕೊಟ್ಟಿಗೆಯಲ್ಲಿ ಕಟ್ಟುವವರಿಲ್ಲ, ಹಾಲು ಕರೆಸುವವರಿಲ್ಲ' ಎಂದು ಬೇಡಿದ. 'ಹೌದು ಹೌದು ಹೌದು' ಎಂದರು ಉಳಿದ ಬ್ರಾಹ್ಮಣರು. 'ಹರಿಹರಿ' ಎನ್ನುತ್ತ ಹೊರಟರು. ದಾರಿಯುದ್ದಕ್ಕೂ ರಾಘವೇಂದ್ರಸ್ತೋತ್ರ ಮಾಡುತ್ತ ನಡೆದರು.

* * *

ಪಂಜುರ್ಲಿಗೆ ಕೋಳಿ ಬಲಿಕೊಟ್ಟು ಮುಂದಿನ ಅಮಾಸೆ ಕುರಿ ಕೊಡುತ್ತೇನೆಂದು ಹರಕೆ ಹೇಳಿಕೊಂಡರೂ, ಬೆಳ್ಳಿಯ ಅಪ್ಪ ಅವ್ವ ಪ್ರಾಣೇಶಾಚಾರ್ಯರ ಹೆಂಡತಿ ತೀರಿದ ರಾತ್ರಿಯೇ ಪ್ರಾಣಬಿಟ್ಟವು. ಬೆಳ್ಳಿ ಕೂಗಿಕೊಂಡದ್ದು ಕೇಳಿ ಅಕ್ಕಪಕ್ಕದ ಹೊಲೆಯರೆಲ್ಲ ಕೂಡಿದರು. ಕತ್ತಲಲ್ಲಿ

ಕಪ್ಪು ನಗ್ನದೇಹಗಳು ಅವಾಕ್ಕಾಗಿ ಗುಡಿಯ ಸುತ್ತ ಕೂತು ಅರ್ಧಗಂಟೆ ಅತ್ತವು. ನಂತರ ಸೋಗೆಯ ಗುಡಿಗೆ ಬೆಂಕಿ ಕೊಟ್ಟದ್ದಾಯಿತು. ಕ್ಷಣದಲ್ಲಿ ಬೆಂಕಿ ಹತ್ತಿ ಉರಿದು ಹೊಲೆಯ ಹೊಲತಿಯರನ್ನು ನೆಕ್ಕತೊಡಗಿತು. ಭೀತಳಾಗಿ ನಿಂತಿದ್ದ ಬೆಳ್ಳಿ ದಿಕ್ಕುದಿವಾಣಿ ಲೆಕ್ಕಿಸದೆ ಪಾಳ್ಯವನ್ನು ಬಿಟ್ಟು, ಇಲಿಗಳ ಹಾಗೆ ಕತ್ತಲಲ್ಲಿ ಓಡಿಬಿಟ್ಟಳು.

* * *

ಮಾಲೇರರ ಪುಟ್ಟ ಪ್ರಾರಬ್ಧದಂತೆ ಬೆನ್ನುಹತ್ತಿಬಿಟ್ಟಿದ್ದ. ನಿಂತರೆ ನಿಲ್ಲುವ; ಕೂತರೆ ಕೂರುವ; ಜೋರು ನಡೆದರೆ ಜೋರಾಗಿ, ನಿಧಾನ ನಡೆದರೆ ನಿಧಾನವಾಗಿ—ಅಂತೂ ಬೆನ್ನು ಬಿಡ. ಪ್ರಾಣೇಶಾಚಾರ್ಯರಿಗೆ ಅತ್ಯಂತ ಕಸಿವಿಸಿಯಾಗತೊಡಗಿತು. ಈಗಷ್ಟು ಹೊತ್ತು ಕಣ್ಣು ಮುಚ್ಚಿ ಕೂತು ತನ್ನ ಪಾಡಿನ ಬಗ್ಗೆ ಚಿಂತಿಸಬೇಕೆಂದರೆ ಈ ಪುಟ್ಟ ಹಡೆಯ ಹಾಗೆ ವಟ ವಟ ಎನ್ನುತ್ತಿದ್ದಾನೆ. ತಾನು ಆಸ್ಪದ ಕೊಡದಿದ್ದರೂ ತನ್ನ ಸಖ್ಯಕ್ಕಾಗಿ ಆತುಬಿದ್ದಿದ್ದಾನೆ. ತಾನು ವೇದಾಂತಶಿರೋಮಣಿ ಪ್ರಾಣೇಶಾಚಾರ್ಯ ನೆಂದು ಗೊತ್ತಿಲ್ಲದಿರುವುದರಿಂದ ಸಾಮಾನ್ಯ ಹಾರುವನೊಬ್ಬನ ಜೊತೆ, ಸಂಭಾವನೆಗೆ ಹೊರಟ ಬಡಬ್ರಾಹ್ಮಣನ ಜೊತೆ ಹೇಗೆ ನಡೆದುಕೊಳ್ಳಬೇಕೋ ಹಾಗೆ ನಡೆದುಕೊಳ್ಳುತ್ತಿದ್ದಾನೆ. ಮೆಟ್ಟಿಲ್ಲದೆ ಇಷ್ಟು ದೂರ ನಡೆಯುವುದು ಸರಿಯಲ್ಲವೆಂದು ಬುದ್ಧಿ ಹೇಳಿದ. ಮೂರು ರೂಪಾಯಿಗೆ ತೀರ್ಥಹಳ್ಳಿಯಲ್ಲಿ ಕೈಯಲ್ಲಿ ಹೊಲಿದ ಜೋಡು ಸಿಗುತ್ತದೆ ಎಂದು ಹೇಳಿದ. ಸುಖ ಮುಖ್ಯವೋ ದುಡ್ಡು ಮುಖ್ಯವೋ ಎಂದು ಬೋಧಿಸಿದ. ನನ್ನ ಜೋಡು ನೋಡಿ. ವರ್ಷ ವಾಯಿತು, ಸವೆದೇ ಇಲ್ಲ ಎಂದು ಬಿಚ್ಚಿ ತೋರಿಸಿದ. 'ನನಗೆ ಮಾತು ಬೇಕು' ಎಂದ. 'ಎಲ್ಲಿ ಒಂದು ಒಗಟು ಬಿಡಿಸಿರಿ ನೋಡುವ' ಎಂದ. ಏರಿ ಬಂದ ಕೋಪವನ್ನು ಹಿಡಿದುಕೊಂಡು ಸುಮ್ಮನಾದರು ಪ್ರಾಣೇಶಾ ಚಾರ್ಯರು. 'ಒಂದು ನದಿ, ಒಂದು ದೋಣಿ, ಒಬ್ಬ ಮನುಷ್ಯ. ಅವನ ಜೊತೆಗೆ ಒಂದು ಕಟ್ಟು ಹುಲ್ಲು, ಒಂದು ಹುಲಿ, ಒಂದು ದನ. ಒಂದೊಂದ ನ್ನಾಗಿ ದೋಣಿಯಲ್ಲಿ ದಾಟಿಸಬೇಕು. ಹಸು ಹುಲ್ಲನ್ನು ತಿನ್ನದಂತೆ ನೋಡಿ ಕೋಬೇಕು. ಹುಲಿ ಹಸುವನ್ನು ತಿನ್ನದಂತೆ ನೋಡಿಕೋಬೇಕು. ಹೀಗೆ ಈ ದಡ ದಿಂದ ಆ ದಡಕ್ಕೆ ಮೂರನ್ನೂ ಸಾಗಿಸಬೇಕು. ನಿಮ್ಮ ಬುದ್ಧಿ ಎಷ್ಟು ಚುರುಕು ನೋಡುವ'—ಎಂದು ಒಗಟನ್ನು ಹೇಳಿಬಿಟ್ಟು ಪರಮಾನಂದದಿಂದ ಬೀಡಿ

ಹತ್ತಿಸಿದ. ಎಷ್ಟು ಸಿಟ್ಟು ಬಂದಿದ್ದರೂ ಪ್ರಾಣೇಶಾಚಾರ್ಯರಿಗೆ ಒಗಟು ಮನಸ್ಸನ್ನು ಕಾಡತೊಡಗಿತು. 'ಹೊಳೆಯಲಿಲ್ಲವೇ ? ಹೊಳೆಯಲಿಲ್ಲವೇ ?' ಎಂದು ಪುಟ್ಟ ರೇಗಿಸುತ್ತ ನಡೆದ. ಪ್ರಾಣೇಶಾಚಾರ್ಯರಿಗೆ ಉತ್ತರ ಹೊಳೆಯಿತು. ಆದರೆ ಹೇಳಲು ಬಿಗುಮಾನ. ಒಗಟನ್ನು ಬಿಡಿಸಿದರೆ ಪುಟ್ಟನಿಗೆ ಸ್ನೇಹಹಸ್ತವನ್ನು ಕೊಟ್ಟಂತೆ. ಬಿಡಿಸದಿದ್ದರೆ ತನ್ನನ್ನು ಅವ ಪೆದ್ದನೆಂದು ತಿಳಿಯುತ್ತಾನೆ. ಈಗ ತಾನೇನು ನಿಶ್ಚಯ ಮಾಡಬೇಕೆಂದು ಸಂದಿಗ್ಧಕ್ಕಿಟ್ಟು ಕೊಂಡಿತು. ಅವನ ಕಣ್ಣಿನಲ್ಲಿ ಪೆದ್ದನಾಗಿ ಒಂದು ದಡ್ಡ ಪದಾರ್ಥವಾಗಿ ಬಿಡುವ ತೀರ್ಮಾನ ಮಾಡಿಬಿಡಲೇ ಎಂದು ಯೋಚಿಸಿದರು. 'ಹೊಳೆಯಿತೆ ?' ಎಂದ ಪುಟ್ಟ ಬೀಡಿಯನ್ನೆಳೆಯುತ್ತ. ಮಾತನ್ನಾಡಲು ಇಷ್ಟವಾಗದೆ ಪ್ರಾಣೇಶಾಚಾರ್ಯ ಇಲ್ಲವೆಂಬಂತೆ ತಲೆಯಾಡಿಸಿದರು. 'ಹೋ ಹೋ ಹೋ' ಎಂದು ಪುಟ್ಟ ಬಿದ್ದು ಬಿದ್ದು ನಕ್ಕು ಒಗಟನ್ನು ಬಿಡಿಸಿದ. ಅವನಿಗೆ ಇದರಿಂದಾಗಿ ಪೆದ್ದಬ್ರಾಹ್ಮಣನ ಬಗ್ಗೆ ವಿಪರೀತ ಆದರ ಹುಟ್ಟಿತು. 'ಇನ್ನೊಂದು ಒಗಟು' ಎಂದ. ಬೇಡ ಎಂದರು ಪ್ರಾಣೇಶಾಚಾರ್ಯ. 'ಹೋಗಲಿ, ನೀವೇ ಒಂದು ಹೇಳಿಬಿಡಿ, ನನ್ನನ್ನು ಸೋಲಿಸಿಬಿಡಿ, ಮಯ್ಯಿ' ಎಂದ. 'ನನಗೆ ಗೊತ್ತಿಲ್ಲ' ಎಂದರು ಪ್ರಾಣೇಶಾಚಾರ್ಯ. 'ಪಾಪ' ಎನ್ನಿಸಿತು ಪುಟ್ಟನಿಗೆ. ಇನ್ನಷ್ಟು ದೂರ ಏನು ಮಾತಾಡುವುದೆಂದು ತಿಳಿಯದೆ ಪುಟ್ಟನಿಗೆ ನಾಲಗೆ ಕಡಿತವಾಗಹತ್ತಿತು. 'ಆಚಾರ್ಯರೆ, ನಿಮಗೆ ಗೊತ್ತ ? ಕುಂದಾಪುರದ ಮೇಳದಲ್ಲಿ ಬಣ್ಣದ ವೇಷಧಾರಿಯಾಗಿದ್ದ ಶ್ಯಾಮ ಪಾಪ ತೀರಿಕೊಂಡನಂತೆ' ಎಂದು ಹೊಸದೊಂದು ಸಂಗತಿ ಪ್ರಾರಂಭಿಸಿದ. 'ಛೆ ಪಾಪ. ತಿಳಿಯದು' ಎಂದರು ಪ್ರಾಣೇಶಾಚಾರ್ಯ. 'ಹಾಗಾದರೆ ನೀವು ಊರು ಬಿಟ್ಟು ಬಹಳ ಸಮಯವಾಗಿರಬೇಕು' ಎಂದ ಪುಟ್ಟ. ಎದಿರು ಕವಲೊಡೆದ ದಾರಿಯನ್ನು ಕಂಡು ಪ್ರಾಣೇಶಾಚಾರ್ಯರಿಗೆ ಹರ್ಷವಾಯಿತು. 'ನಿಮ್ಮ ಪ್ರಯಾಣ ಯಾವ ಮುಖವಾಗಿ' ಎಂದು ನಿಂತು ಪುಟ್ಟನನ್ನು ಕೇಳಿದರು. ಈ ಮುಖವಾಗಿ ಎಂದು ಅವನು ಒಂದು ದಾರಿ ತೋರಿಸಿದ. 'ನನ್ನದು ಈ ದಾರಿ' ಎಂದು ಇನ್ನೊಂದು ಕಾಲುದಾರಿಯನ್ನು ತೋರಿಸಿದರು. 'ಎರಡೂ ಮೇಳಿಗೆಗೇ ಹೋಗುವುದು, ಸ್ವಲ್ಪ ಬಳಸು ಅಷ್ಟೇ— ನನಗೇನೂ ಅವಸರವಿಲ್ಲ.... ನಿಮ್ಮ ಜೊತೆಯೇ ಬಂದುಬಿಡುವೆ' ಎಂದುಬಿಟ್ಟ. ಚೀಲದಿಂದ ಕಾಯಿ ಬೆಲ್ಲವನ್ನು ತೆಗೆದು ತಿನ್ನಿರಿ ಎಂದು ಕೊಟ್ಟು, ತಾನು ತಿನ್ನಲು ಪ್ರಾರಂಭಿಸಿದ. ಪ್ರಾಣೇಶಾಚಾರ್ಯರಿಗೆ ಹಸಿವಾದ್ದರಿಂದ ಪುಟ್ಟನ

ಬಗ್ಗೆ ಕೃತಜ್ಞರಾದರು. ಎಲ್ಲಿ ಹೋದರೂ, ಏನಾದರೂ ಮನುಷ್ಯಸಂಗ ಪ್ರಾರಬ್ಧದಂತೆ ಬೆನ್ನುಹತ್ತಿದ್ದು ಎನ್ನಿಸಿತು.

ಪುಟ್ಟ ಕಾಯಿ ಬೆಲ್ಲವನ್ನು ತಿನ್ನುತ್ತ ಇನ್ನಷ್ಟು ಆಪ್ತವಾಗಿ ಮಾತಾಡ ತೊಡಗಿದ. "ನಿಮಗೆ ಮದುವೆಯಾಗಿರಬೇಕಲ್ಲವೆ? ಆಗದೆ ಇರುತ್ತದ? ನಾನೊಬ್ಬ ಪೆಕ್ರನ ಹಾಗೆ ಕೇಳುತ್ತಿದ್ದೇನೆ. ಎಷ್ಟು ಮಕ್ಕಳೋ? ಮಕ್ಕಳೇ ಇಲ್ಲವೆ? ಪಾಪ. ನನಗೆ ಎರಡು ಮಕ್ಕಳು. ಎರಡೂ ಗಂಡು. ನಮ್ಮವ ಳನ್ನು ಕುಂದಾಪುರದಿಂದ ತಂದದ್ದು ಎಂದು ಹೇಳಿದೆ ಅಲ್ಲವೆ? ಒಂದು ವಿಷಯ ನೋಡಿ—ನಗಬೇಕೋ, ಅಳಬೇಕೋ ನನಗೆ ತಿಳಿಯದು. ಅವಳಿಗೆ ಅಪ್ಪ ಅಮ್ಮನೆಂದರೆ ಪ್ರಾಣ. ತಿಂಗಳಿಗೆ ತಪ್ಪಿದರೆ ಎರಡು ತಿಂಗಳಿಗೆ ತೌರಿಗೆ ಹೋಗಬೇಕೆಂದು ಹಟ ಹಿಡಿಯುತ್ತಾಳೆ. ಬಸ್ಸಿನ ಖರ್ಚು ಎರಡು ರೂಪಾಯಿ ಕೊಟ್ಟು ಈ ಕಾಲದಲ್ಲಿ ಯಾರಿಗೆ ಕಳಿಸಲು ಸಾಧ್ಯ ಹೇಳಿ. ಹೇಳಿದರೆ ಕೇಳು ವುದೇ ಇಲ್ಲ. ಎರಡು ಮಕ್ಕಳಾದರೂ ಬುದ್ಧಿಯೇ ಬಂದಿಲ್ಲ. ತುಂಬ ಎಳಸು, ಪ್ರಾಯವೂ ಕಮ್ಮಿ ಎನ್ನಿ. ನಮ್ಮ ಅತ್ತೆ ಸ್ವಲ್ಪ ಕಟಿಪಿಟಿಯ ಹೆಂಗಸು, ಆದರೆ ಮಾವನವರ ಬುದ್ಧಿ ದೊಡ್ಡದು. ಎಷ್ಟೆಂದರೂ ವ್ಯವಹಾರ ಬಲ್ಲವರು ಅವರು. ನಮ್ಮ ಅತ್ತೆ ಅಂದದ್ದುಂಟು—ನನ್ನ ಮಗಳಿಗೆ ಏಟು ಕೊಡಲು ಅಳಿಯನಿಗೇನು ಹಕ್ಕು ಅಂತ. ಆದರೆ ಮಾವನವರ ಬಾಯಿಂದ ಒಂದು ದಿನ ಅಂಥ ಮಾತು ಬಂದಿಲ್ಲ. ಏಟು ಹೊಡೆದರೂ ಇವಳಿಗೆ ಬುದ್ಧಿ ಬಂದಿಲ್ಲ. ತೌರಿಗೆ ಕಳಿಸದಿದ್ದರೆ ಬಾವಿಗೆ ಹಾರಿಕೊಳ್ಳುತ್ತೇನೆಂತ ಹೆದರಿಸು ತ್ತಾಳೆ. ಏನು ಮಾಡಬೇಕೋ ತಿಳಿಯದು. ಇದೊಂದು ಕೆಟ್ಟ ಚಾಳಿ ಬಿಟ್ಟರೆ ಉಳಿದದ್ದರಲ್ಲೆಲ್ಲ ಅವಳದ್ದು ಬಲು ವೈನ. ಒಂದು ಅಡಿಗೆ ಮಾಡಲಿ, ಪಾತ್ರೆ ತೊಳೆಯಲಿ, ಎಲ್ಲದರಲ್ಲೂ ಬಲು ಅಚ್ಚುಕಟ್ಟು, ಇದೊಂದು ಬಿಟ್ಟರೆ. ನೀವೇನು ಹೇಳುತ್ತೀರಿ ಇದಕ್ಕೆ...."

ಪ್ರಾಣೇಶಾಚಾರ್ಯರು ಉತ್ತರ ಹೊಳೆಯದೆ ನಕ್ಕರು. ಪುಟ್ಟನೂ ನಕ್ಕ. "ಹೆಂಗಸರ ಮರ್ಜಿ ತಿಳಿಯೋದು; ನೀರಿನಲ್ಲಿ ಮೀನಿನ ದಾರಿ ಅರಿಯೋದು ಒಂದೇ—ಅಂತ ಅದಕ್ಕೆ ಹಿರಿಯರು ಹೇಳೋದು ಅಲ್ಲವೆ?" ಎಂದ.

"ನಿಜ, ನಿಜ" ಎಂದರು ಪ್ರಾಣೇಶಾಚಾರ್ಯ.

ಅಂತೂ ಪುಟ್ಟನ ಮಾತು ಸ್ವಲ್ಪ ಕಾಲ ನಿಂತಿತು. ತನ್ನ ಹೆಂಡತಿಯ ಮರ್ಜಿಯನ್ನವನು ಶಬ್ದಾತೀತ ಪ್ರಪಂಚದಲ್ಲಿ ಹುಡುಕುತ್ತಿರಬೇಕು ಎನ್ನಿ ಸಿತು ಆಚಾರ್ಯರಿಗೆ. ಈಗ ತನ್ನ ಒಗಟು ಇದು. ಇದನ್ನು ನಾನು ಮೊದಲು

ಕೂಲಂಕಷವಾಗಿ ನೋಡಲಿಲ್ಲ. ನನ್ನ ಬಾಳಿನ ತೀರ್ಮಾನದ ಗಳಿಗೆ—ನಾರಣಪ್ಪನ ಜೊತೆ, ಮಹಾಬಲನ ಜೊತೆ, ನನ್ನ ಹೆಂಡತಿ ಜೊತೆ, ಅಗ್ರಹಾರದ ಉಳಿದ ಬ್ರಾಹ್ಮಣರ ಜೊತೆ, ಒಟ್ಟು ನಾನು ಆತಿದ್ದ ಧರ್ಮದ ಜೊತೆ—ನನ್ನ ಸಂಬಂಧಸರ್ವಸ್ವವೂ ತೀರ್ಮಾನವಾಗಬೇಕಾಗಿದ್ದ ಗಳಿಗೆ ನಿರಪೇಕ್ಷಿತವಾಗಿ ಉದ್ಭವವಾದ ಆ ಕಾಡಿನ ಕತ್ತಲಿನಲ್ಲಿ, ನಾನು ಥಟ್ಟನೆ ತಿರುಗಿಬಿಟ್ಟೆ. ಅದರ ಪರಿಣಾಮ ನನ್ನ ಮಾತ್ರಕ್ಕೆ ಹೇಗೋ ಹಾಗೆ ಅಗ್ರಹಾರಕ್ಕೂ ಅಗಾಧವಾಗಿಬಿಟ್ಟಿತು. ಅಂದರೆ ನನ್ನ ನಿಶ್ಚಯದ ಪ್ರಶ್ನೆ ಬರಿ ನನ್ನ ನಿಶ್ಚಯದ ಪ್ರಶ್ನೆಯಲ್ಲ—ನನ್ನ ಅಗ್ರಹಾರವನ್ನೂ ಒಳಪಡಿಸಿಬಿಟ್ಟ ಪ್ರಶ್ನೆ. ಇದೇ ಸಂದಿಗ್ಧದ, ಆತಂಕದ, ಧರ್ಮಸಂಕಟದ ಮೂಲ. ನಾರಣಪ್ಪನ ಶವಸಂಸ್ಕಾರದ ಪ್ರಶ್ನೆ ಬಂದಾಗ ನಾನು ನನ್ನ ವೈಯಕ್ತಿಕ ದೃಷ್ಟಿಯಿಂದ ಅದನ್ನು ಪರಿಹರಿಸುವ ಪ್ರಯತ್ನ ಮಾಡಲಿಲ್ಲ. ಧರ್ಮಶಾಸ್ತ್ರಕ್ಕೆ ದೇವರಿಗೆ ಗಂಟುಬಿದ್ದೆ. ಧರ್ಮಶಾಸ್ತ್ರವನ್ನು ನಾವು ಸೃಷ್ಟಿಸಿರಲೂ ಇದೇ ಕಾರಣ ತಾನೇ? ನಮ್ಮ ವೈಯಕ್ತಿಕ ನಿಶ್ಚಯಗಳಿಗೂ ಸಮಾಜಕ್ಕೂ ಇಷ್ಟೊಂದು ಗಾಢವಾದ ಸಂಬಂಧವಿರುವುದರಿಂದ ತಾನೇ? ಕಾರಣ—ನಮ್ಮ ಪ್ರತಿಯೊಂದು ಕ್ರಿಯೆಯಲ್ಲಿಯೂ ನಾವು ಪಿತೃಗಳನ್ನು, ಗುರುಗಳನ್ನು, ದೈವವನ್ನು, ಮಾನವ ಕುಟುಂಬವನ್ನು ಒಳ ಮಾಡುತ್ತೇವೆ. ಆ ಕಾರಣದಿಂದ ಧರ್ಮಸಂಕಟ. ಆದರೆ ಚಂದ್ರಿಯ ಜೊತೆ ನಾನು ಮಲಗಿಬಿಟ್ಟಾಗ ಈ ಧರ್ಮಸಂಕಟದ ಅನುಭವವಾಯಿತೆ? ಅದು ಅಳೆದು ಹೊಯ್ದು ತೂಗಿ ಮಾಡಿದ ನಿಶ್ಚಯವಾಗಿತ್ತೇ? ಈಗ ಅದು ಅತ್ಯಂತ ಮಸುಕುಮಸುಕಾಗಿ ಅಸ್ಪಷ್ಟವಾಗಿಬಿಟ್ಟಿದೆ. ಆ ನಿಶ್ಚಯ, ಅಥವಾ ಆ ಕ್ರಿಯೆ ನನ್ನನ್ನು ನನ್ನ ಭೂತಲೋಕದಿಂದ, ಬ್ರಾಹ್ಮಣರ ಲೋಕದಿಂದ, ಹೆಂಡತಿಯ ಬಾಳಿನಿಂದ, ನನ್ನ ನಂಬಿಕೆಗಳಿಂದ ಕೊರೆದು ತೆಗೆದುಬಿಟ್ಟಿತು. ಪರಿಣಾಮ ಈಗ ನಾನೊಂದು ಗಾಳಿಯಲ್ಲಿ ತಂತುವಾಗಿ ಮಿಡಿಯುತ್ತಿರುವುದು.

ಇದರಿಂದ ಬಿಡುಗಡೆ? ಬಿಡುಗಡೆ?

"ಆಚಾರ್ಯರೇ" ಎಂದ ಪುಟ್ಟ.

"ಏನಪ್ಪ."

"ಇನ್ನಷ್ಟು ಕಾಯಿಬೆಲ್ಲ ಬೇಕ?"

"ಕೊಡು" ಎಂದರು ಪ್ರಾಣೇಶಾಚಾರ್ಯರು. ಪುಟ್ಟ ಕಾಯಿಬೆಲ್ಲವನ್ನು ಕೊಟ್ಟು "ಇಲ್ಲದಿದ್ದರೆ ದಾರಿ ಕಳೆಯೋದು ಕಷ್ಟ ಅಲ್ಲವೆ? ಮನಸ್ಸಿಗೆ

ಬೇಜಾರಾಗುತ್ತಿದ್ದರೆ ಇನ್ನೊಂದು ಒಗಟು ಹೇಳುತ್ತೇನೆ ಬಿಡಿಸಿ. 'ಆಡುತ್ತೆ, ಓಡುತ್ತೆ, ನಿಂತ್ಕೊಂಡು ನೋಡುತ್ತೆ' ಏನು ಹೇಳಿ" ಎಂದು ಮತ್ತೊಂದು ಬೀಡಿ ಹತ್ತಿಸಿದ.

ಆದ್ದರಿಂದ ನನ್ನ ಆತಂಕ ಸರ್ವಸ್ವದ ಮೂಲವಿರುವುದು ಪ್ರಾಯಶಃ ಕನಸಿನಲ್ಲಿ ಎಂಬಂತೆ ನಾನು ಚಂದ್ರಿಯ ಜೊತೆ ಸಂಭೋಗಮಾಡಿಬಿಟ್ಟದ್ದರಲ್ಲಿ. ಪರಿಣಾಮ ಈಗಿನ ತ್ರಿಶಂಕು ಸ್ಥಿತಿ. ಸ್ವೇಚ್ಛೆಯಿಂದ, ಖುದ್ದಾಗಿ, ಸಂಪೂರ್ಣ ಎಚ್ಚರದಲ್ಲಿ, ಪರಿಪೂರ್ಣ ನಿಶ್ಚಯದಲ್ಲಿ ಒಂದು ಕ್ರಿಯೆಯನ್ನು ಮಾಡುವುದರ ಮೂಲಕ ಮಾತ್ರ ಇದರಿಂದ ಬಿಡುಗಡೆ. ಈಗ ನಾನು ಗಾಳಿಯಲ್ಲೊಂದು ತಂತು. ಗಾಳಿ ಕೊಟ್ಟ ಆಕಾರವನ್ನು ತಳೆಯುವ ಮೋಡ. ಬರಿಯೊಂದು ವಸ್ತುವಾಗಿಬಿಟ್ಟೆ ನಾನು ನಿಶ್ಚಿತ ಕ್ರಿಯೆಯ ಮೂಲಕ ಮನುಷ್ಯನಾಗುತ್ತೇನೆ. ನನ್ನ ಜೀವನಕ್ಕೆ ನಾನೇ ಜವಾಬ್ದಾರನಾಗಿಬಿಡುತ್ತೇನೆ. ಅಂದರೆ....ಅಂದರೆ ....ಕಾಲು ಕೊಂಡಲ್ಲಿಗೆ ಹೋಗಿಬಿಡುವುದೆಂಬ ನಿರ್ಧಾರವನ್ನು ತ್ಯಜಿಸಿ ಬಸ್ಸು ಹಿಡಿದು ಕುಂದಾಪುರಕ್ಕೆ ಹೋಗಿ ಚಂದ್ರಿಯ ಜೊತೆ ಇದ್ದುಬಿಡುತ್ತೇನೆ. ಹಾಗೆ ನನ್ನ ಸಂಕಟವನ್ನೆಲ್ಲ ಕೊನೆ ಮಾಡಿಬಿಡುತ್ತೇನೆ. ಪೂರ್ಣ ಎಚ್ಚರದಲ್ಲಿ ನನ್ನನ್ನು ನಾನು ಪುನಃ ಸೃಷ್ಟಿಸಿಕೊಳ್ಳುತ್ತೇನೆ....

"ಹೊಳೆಯಿತೇ ?" ಎಂದ ಪುಟ್ಟ ನಗುತ್ತ.

"ಆಡುವುದು ಮೀನು, ಓಡುವುದು ನೀರು, ನಿಂತುಕೊಂಡು ನೋಡುವುದು ಕಲ್ಲು" ಎಂದರು ಪ್ರಾಣೇಶಾಚಾರ್ಯರು.

"ವ್ಹಾರೆವಾ. ಭೇಷ್. ಗೆದ್ದಿರಿ. ನಮ್ಮೂರಿನಲ್ಲಿ ನನ್ನನ್ನು ಏನೆಂದು ಕರೀತಾರೆ ಗೊತ್ತೇ? ಒಗಟಿನ ಪುಟ್ಟ ಅಂತ. ನಾನು ಭಾರೀ ಸರಕು ಇಟ್ಟಿದ್ದೇನೆ. ಒಂದು ನೂರು ಮೈಲಿ ನನ್ನ ಜೊತೆ ನಡೆಯಿರಿ ಬೇಕಾದರ, ಮೈಲಿಗೊಂದರಂತೆ ಒಗಟನ್ನು ಹಾಕುತ್ತ ಹೋಗುತ್ತೇನೆ" ಎಂದು ಪುಟ್ಟ ಬೀಡಿಯನ್ನು ಎಸೆದ.

* * *

ಬಿಸಿಲಿನಲ್ಲಿ ನಡೆದು ದೂರ್ವಾಸಪುರವನ್ನು ಗರುಡ, ಲಕ್ಷ್ಮಣ ಇತ್ಯಾದಿ ಬ್ರಾಹ್ಮಣರು ಮುಟ್ಟುವಾಗ ಬಿಸಿಲು ಇಳಿಮುಖವಾಗಿತ್ತು. ಹೆದರುತ್ತ ಅಗ್ರಹಾರಕ್ಕೆ ಕಾಲಿಟ್ಟೊಡನೆ ಮನೆಗಳ ಮೇಲೆ ಹದ್ದುಗಳಿಲ್ಲದಿರುವುದನ್ನು ಕಂಡು ಅವರಿಗಿಷ್ಟು ಸಮಾಧಾನವಾಯಿತು. ಲಕ್ಷ್ಮಣಾಚಾರ್ಯ ಮೆಲ್ಲಗೆ 'ಮನೆಯ ದನಕರು ಏನಾಗಿವೆಯೋ ನೋಡಿಬರುತ್ತೇನೆ, ನೀವು ಮುಂದೆ

ಹೋಗಿ' ಎಂದದ್ದಕ್ಕೆ ಗರುಡಾಚಾರ್ಯ ರೇಗಿ, 'ಮೊದಲು ಸಂಸ್ಕಾರದ ಕೆಲಸ, ಆಮೇಲೆ ನಿನ್ನ ಗೃಹಕೃತ್ಯ' ಎಂದು ಗದರಿಸಿದ. ಲಕ್ಷ್ಮಣಾಚಾರ್ಯನಿಗೆ ಎದುರುತ್ತರ ಕೊಡುವ ಧೈರ್ಯವಾಗಲಿಲ್ಲ. ಎಲ್ಲರೂ ಕೂಡಿ ಪ್ರಾಣೇಶಾಚಾರ್ಯರ ಮನೆಗೆ ಬಂದರು. ಪಾಪ ಅವರ ದುಃಖಕ್ಕಷ್ಟು ಸಮಾಧಾನ ಹೇಳಬೇಕೆಂದು ಎಲ್ಲರಿಗೂ ಅನ್ನಿಸಿತು. ಆದರೆ ಕರೆದರೆ ಒಳಗಿನಿಂದ ಉತ್ತರವಿಲ್ಲ. ಮನೆಯೊಳಕ್ಕೆ ಹೋದರೆ ಇಲಿ ಸತ್ತ ನಾತ. ಇದರಿಂದಾಗಿ ಯಾರಿಗೂ ತಮ್ಮ ತಮ್ಮ ಮನೆಯೊಳಕ್ಕೆ ಹೋಗುವ ಧೈರ್ಯವಾಗಲಿಲ್ಲ. ಅಗ್ರಹಾರದ ಬೀದಿಗೆ ಬಂದೊಡನೆ ಮೌಢ್ಯ ಕವಿದುಬಿಟ್ಟಿತು. ಅಗ್ರಹಾರವಂತೂ ಹಾಳುಸುರಿಯುತ್ತಿತ್ತು. 'ಈಗೇನು ಮಾಡುವ' ಎಂದು ಎಲ್ಲರೂ ಒಟ್ಟಾಗಿ ಚಿಂತಿಸಿದರು. 'ಶವಸಂಸ್ಕಾರ' ಎಂದ ಒಬ್ಬ ಬ್ರಾಹ್ಮಣ. ಆದರೆ ನಾರಣಪ್ಪನ ಮನೆಯೊಳಕ್ಕೆ ಹೋಗಿ ಕೊಳೆತು ವಿಕಾರವಾಗಿರಬಹುದಾದ ಹೆಣವನ್ನು ನೋಡುವ ಧೈರ್ಯ ಯಾರಿಗೂ ಆಗಲಿಲ್ಲ. ಉಪಾಯ ಹೊಳೆದ ಗರುಡಾಚಾರ್ಯ, 'ಪ್ರಾಣೇಶಾಚಾರ್ಯರು ನದಿಗೋ ಎಲ್ಲಿಗೋ ಹೋಗಿರಲಿಕ್ಕೆ ಸಾಕು, ಅವರು ಬರುವವರೆಗೆ ಕಾಯುವ' ಎಂದ. ಲಕ್ಷ್ಮಣಾಚಾರ್ಯ, 'ಕಳೆಯಲಿಕ್ಕೆ ಕಾಲವಿಲ್ಲ. ಶವ ಸಂಸ್ಕಾರದ ಸಿದ್ಧತೆಯಾದರೂ ನಡೆಸುವ' ಎಂದ. 'ಕಟ್ಟಿಗೆ' ಎಂದ ಒಬ್ಬ ಬ್ರಾಹ್ಮಣ. 'ಮಾವಿನ ಮರ ಕಡಿಸಬೇಕು' ಎಂದ ಇನ್ನೊಬ್ಬ. 'ಕೊಳೆತು ಹೋದ ಹೆಣ ಹಸಿ ಸೌದೆಯಲ್ಲಿ ಎಲ್ಲಿ ಉರಿಯಲಿಕ್ಕೆ ಶಕ್ಯ?' ಎಂದ ಮತ್ತೊಬ್ಬ. 'ಅವನ ಮನೆಯ ಕಟ್ಟಿಗೆಯಿಂದಲೇ ಸುಟ್ಟರಾಯಿತು' ಎಂದ ಲಕ್ಷ್ಮಣಾಚಾರ್ಯ. 'ನಿನ್ನ ಮನೆಯ ಕಟ್ಟಿಗೆಯನ್ನು ಕೇಳಲಿಲ್ಲವಲ್ಲ' ಎಂದು ಗರುಡ ಹೀಯಾಳಿಸಿದ. ಆದರೆ ನಾರಣಪ್ಪನ ಮನೆಯನ್ನು ಸುತ್ತಿ ಹಿತ್ತಲಿಗೆ ಹೋಗಿ ನೋಡಿದರೆ ಸಾಕಷ್ಟು ಕಟ್ಟಿಗೆಯಿರಲಿಲ್ಲ. 'ಚಂದ್ರೀ' 'ಚಂದ್ರೀ' ಎಂದು ಕೂಗಿದರೆ ಉತ್ತರವಿಲ್ಲ. 'ಕುಂದಾಪುರಕ್ಕೆ ಓಡಿರಬೇಕು, ಊರು ಹಾಳುಮಾಡಿದ ಮಾರಿ' ಎಂದುಕೊಂಡರು ಬ್ರಾಹ್ಮಣರು. 'ಇನ್ನೇನು ಮಾಡಲಿಕ್ಕೆ ಶಕ್ಯ? ಪ್ರತಿ ಮನೆಯಿಂದ ಒಂದೊಂದು ಹೊರೆ ಸೌದೆಯನ್ನೆತ್ತಿ ಸ್ಮಶಾನಕ್ಕೆ ಒಯ್ದುಬಿಡಿರಿ' ಎಂದ ಗರುಡಾಚಾರ್ಯ. ಎಲ್ಲರೂ ಒಪ್ಪಿ ಹಿತ್ತಲಿನಿಂದ ಒಂದೊಂದು ತಲೆಹೊರೆ ಸೌದೆಯನ್ನು ಹೊತ್ತು ಎರಡು ಮೈಲಿಯಾಚೆಯಿದ್ದ ಸ್ಮಶಾನಕ್ಕೆ ಒಯ್ದರು. ಮತ್ತೆ ಅಗ್ರಹಾರಕ್ಕೆ ಮರಳಿದರೆ ಪ್ರಾಣೇಶಾಚಾರ್ಯರ ಪತ್ತೆಯೇ ಇಲ್ಲ. 'ಹೆಣ' ಎಂದ ಒಬ್ಬ ಬ್ರಾಹ್ಮಣ. 'ಪ್ರಾಣೇಶಾಚಾರ್ಯರು ಬರಲಿ' ಎಂದ ಗರುಡ. 'ಸರಿ' ಎಂದ ಲಕ್ಷ್ಮಣಾಚಾರ್ಯ. ಎಲ್ಲರಿಗೂ ದಿಗಿಲು—ಒಳಕ್ಕೆ ಹೋಗಿ

ನೋಡಲು. 'ಪ್ರಾಣೇಶಾಚಾರ್ಯರಿಗೆ ತಿಳಿಸದೆ ದುಡುಕುವುದು ಸರಿಯಲ್ಲ' ಎಂದ ಗರುಡ. 'ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡುಬಿಟ್ಟು ಕಾಯುವ' ಎಂದು ಬ್ರಾಹ್ಮಣರು ನಾರಣಪ್ಪನ ಮನೆಯ ಎದುರು ಮಡಕೆಯಲ್ಲಿ ಬೆಂಕಿ ಹೊತ್ತಿಸಿ, ಬೊಂಬುಗಳನ್ನು ತಂದು ಚಟ್ಟ ಕಟ್ಟುತ್ತ ಕೂತರು—ಪ್ರಾಣೇಶಾಚಾರ್ಯರಿಗೆ ಕಾದು.

* * *

ಮಧ್ಯಾಹ್ನ ಸುಮಾರು ಮೂರು ಗಂಟೆಯಾಗುವ ಹೊತ್ತಿಗೆ ಪ್ರಾಣೇಶಾಚಾರ್ಯರು ಪುಟ್ಟನ ಜೊತೆ ಮೇಳಿಗೆಯ ಕೆರೆಯನ್ನು ತಲ್ಪಿದರು. ಗಾಡಿ-ದಾರಿಯಲ್ಲಿ ನಡೆದು ಬರುವಾಗ ಕೆಂಪು ಧೂಳಿನಿಂದ ಮೈಯೆಲ್ಲ ಮಲಿನವಾಗಿತ್ತು. ಕೆರೆಯಲ್ಲಿ ಕೈಕಾಲನ್ನು ತೊಳೆದುಕೊಳ್ಳಲೆಂದು ಇಳಿದಾಗ ಪುಟ್ಟ, "ಅಲ್ಲ, ಎಷ್ಟೆಲ್ಲ ಹರಟೆದೆ. ನನ್ನ ಸ್ವಂತದ ವಿಷಯಾನ್ನ ನಿಮಗೆ ಹೇಳಲೇ ಇಲ್ಲವಲ್ಲ" ಎಂದ. ಮುಖವನ್ನು ತೊಳೆದುಕೊಳ್ಳುತ್ತಿದ್ದಾಗ ಆಚಾರ್ಯರಿಗೆ ಎಲ್ಲಾದರೂ ಮೇಳಿಗೆಯಲ್ಲಿ ಪರಿಚಯದವರು ಕಣ್ಣಿಗೆ ಬಿದ್ದುಬಿಟ್ಟರೆ ಎಂದು ಭಯವಾಯಿತು. ಮತ್ತೆ ಭೀತಿ ಹುಟ್ಟಿಬಿಟ್ಟಿತಲ್ಲ ಎಂದು ಕಸಿವಿಸಿಗೊಂಡರು. ಒಂದು ಸಮಾಧಾನ : ಮೇಳಿಗೆಯ ಬ್ರಾಹ್ಮಣರೆಲ್ಲ ಸ್ಮಾರ್ತರು, ಆದ್ದರಿಂದ ಅಪರಿಚಿತರು. ಜಾತ್ರೆಯ ಗಡಿಬಿಡಿಯಲ್ಲಿ ತನ್ನನ್ನು ಗಮನಿಸುವವರಾದರೂ ಯಾರು? ಆದರೆ ಎಷ್ಟು ಸಮಾಧಾನ ಹೇಳಿಕೊಂಡರೂ ಭೀತಿ. ಜಾತ್ರೆಗೆಂದು ಪರಿಚಯದವರು ಯಾರಾದರೂ ಬಂದೇ ಬಂದಿರುತ್ತಾರೆ. ಆದರೆ ಏನೇ ಆಗಲಿ : ನಿಶ್ಚಯಿಸಿಬಿಟ್ಟಮೇಲೆ ತನಗಿನ್ನೆಲ್ಲಿಯ ಭೀತಿ? ಆದರೂ ಭೀತಿಯಿರುವುದು ನಿಜ. ನಿಷ್ಕಾರಣವಿದ್ದರೆ ಯಾಕೆ ಈ ಭೀತಿ? ಇದರ ಮೂಲ ಹುಡುಕಬೇಕು. ಬೇರುಸಹಿತ ಈ ಭೀತಿಯನ್ನು ಕಿತ್ತೆಸೆದುಬಿಡಬೇಕು. ನಾರಣಪ್ಪ ಹೇಗೆ ರಾಜಾರೋಷವಾಗಿ ಚಂದ್ರಿಯ ಜೊತೆ ಅಗ್ರಹಾರದ ನಡುವೆ ನಿಂತು ಬಾಳ್ವೆ ನಡೆಸಿದ? ನಾನು ಚಂದ್ರಿಯನ್ನು ಸೇರಿದರೂ ಒಳಗೆ ಮುಖ ಮುಚ್ಚಿಕೊಂಡಿರುತ್ತೀನೋ ಏನೋ! ಥೂ ಅದೆಂತಹ ಬಾಳು ಎನ್ನಿಸಿತು.

"ಅಲ್ಲ, ನಿಮ್ಮ ಹತ್ತಿರ ಇಷ್ಟೆಲ್ಲ ಯಾಕೆ ಹರಟುತ್ತಿದ್ದೇನೆಂದು ನಿಮಗೆ ಅನ್ನಿಸಿರಬಹುದಲ್ಲವೆ? 'ಏನು ಇವ ಸಿಕ್ಕರೆ ಬಿಡ', ಅಂತ. ಹೇಳ್ತೀನಿ ಕೇಳಿ. ನೀವು ಹೆಚ್ಚು ಹರಟುವವರಲ್ಲವಾದರೂ ನಿಮಗೆ ಜನ ಬೇಕು, ಮಾತು ಬೇಕು. ನಿಮ್ಮದು ಸಾಧುಸ್ವಭಾವ. ಪಾಪದ ಜನ." ಮುಖ ಒರೆಸಿಕೊಳ್ಳುತ್ತ ಪುಟ್ಟ

ಹೇಳಿದ. "ಹೌದೋ ಅಲ್ಲವೋ ಹೇಳಿ. ಮುಖ ನೋಡಿ ಹೇಳಿಬಿಡುತ್ತೇನೆ ನಾನು : ಯಾರು ಎಂಥ ಜನ ಅಂತ. ನಿಮ್ಮ ಹತ್ತಿರ ಯಾಕೆ ಮುಚ್ಚುವಿರಿ? ನಾನೇನು ಕಳಪೆ ಜನಾಂತ ನೀವು ತಿಳಿದುಕೊಂಡಿಲ್ಲವೆಂದು ಅಂದು ಕೊಂಡಿದ್ದೇನೆ. ನಾನು ಮಾಲೇರರಪ ಎಂದೆ ಅಲ್ಲವೆ? ಇನ್ನೂ ಬೇಕಾದರೆ ಹೇಳುವೆ. ನನ್ನ ತಂದೆಯವರು ಕುಲೀನ ಬ್ರಾಹ್ಮಣರು. ಇಟ್ಟುಕೊಂಡ ನನ್ನ ತಾಯಿಯನ್ನು ಹೆಂಡತಿಗಿಂತ ಚೆನ್ನಾಗಿ ನೋಡಿಕೊಂಡರು. ನನಗೆ ಮುಂಜಿಯನ್ನೂ ಮಾಡಿಸಿದರು. ನೋಡಿ ಬೇಕಾದರೆ" ಎಂದು ಜನಿವಾರವನ್ನು ಅಂಗಿಯ ಒಳಗಿನಿಂದ ಎಳೆದು ತೋರಿಸಿದ. "ಹಾಗಾಗಿ ನನ್ನ ಮಿತ್ರರೆಲ್ಲ ಬ್ರಾಹ್ಮಣರೆ. ನಡೆಯಿರಿ, ಹೋಗುವ" ಎಂದ. ಕೆರೆಯ ಕಟ್ಟೆಯನ್ನು ಏರುತ್ತಿದ್ದಂತೆ "ಜನ ಎಂಬೋದಕ್ಕೂ ನಾನು ಮಾಡುವುದಕ್ಕೂ ಸರಿಯಾಗಿದೆ. ನನ್ನ ಒಂದು ಹೆಸರು ಒಗಟಿನ ಪುಟ್ಟ ; ಇನ್ನೊಂದು ಹರಟೇ ಪುಟ್ಟ. ಒಟ್ಟಿನಲ್ಲಿ ನನಗೆ ಜನ ಬೇಕು" ಎಂದು ನಕ್ಕ.

ಜಾತ್ರೆಯ ಗಡಿಬಿಡಿಯಲ್ಲಿ ಮೇಳಿಗೆಗೆ ಕಳೆಯೇರಿಬಿಟ್ಟಿತ್ತು. ಕನ್ಯ, ವೃಶ್ಚಿಕ, ಮಿಥುನ ಇತ್ಯಾದಿ ಚಿತ್ರಗಳಿಂದ ತೇರಿನ ಶಿಖರ ಸರ್ವಾಲಂಕೃತ ವಾಗಿ ಊರಿನ ಮಧ್ಯೆ ಬಂದು ನಿಂತಿತ್ತು. ದಪ್ಪದಪ್ಪನೆಯ ಎರಡು ಮಿಣಿ ಗಳು ಹಾದಿಯುದ್ದಕ್ಕೂ ತೇರಿಗೆ ಬಿಗಿದುಬಿದ್ದಿದ್ದವು. ರಥವನ್ನು ಕೊಟ್ಟಿಗೆ ಯಿಂದ ಎಳೆದು ಅರ್ಧದಾರಿ ತಂದು ಭಕ್ತಾದಿಗಳು ಹಣ್ಣುಕಾಯಿ ಅರ್ಚನೆ ಗೆಂದು ಬಿಟ್ಟಿದ್ದರು. ಏಣಿಯನ್ನೇರಿ ರಥದೊಳಕ್ಕೆ ಕೂತಿದ್ದ ಪೂಜಾರಿಗೆ ಭಕ್ತಾದಿಗಳು ಕೊಟ್ಟ ಹಣ್ಣುಕಾಯನ್ನೆಲ್ಲ ಒಬ್ಬ ಬ್ರಾಹ್ಮಣ ಯುವಕ ಹತ್ತಿ ಇಳಿದು ಅರ್ಚನೆಗೆ ಒಪ್ಪಿಸುತ್ತಿದ್ದ. ರಥದ ಸುತ್ತ ಒಂದು ದೊಡ್ಡ ಗುಂಪೇ ಹಣ್ಣುಕಾಯಿಗಳನ್ನು ಹಿಡಿದು ಕಾದಿತ್ತು. ಪ್ರಾಣೇಶಾಚಾರ್ಯರು ಗುಂಪಿನ ಲ್ಲೆಲ್ಲ ತನ್ನ ಪರಿಚಯದವರು ಯಾರಾದರೂ ಇದ್ದಾರೋ ಎಂದು ಆತಂಕದಿಂದ ಹುಡುಕಿದರು. ಎಳ್ಳು ಬೀರಿದರೆ ಕೆಳಕ್ಕೆ ಬೀಳದ ಗುಂಪಿನ ಮಧ್ಯೆ ಪುಟ್ಟ ಆಚಾರ್ಯರ ಕೈ ಹಿಡಿದು ನಡೆಸಿಕೊಂಡು ಅಂಗಡಿಯೊಂದಕ್ಕೆ ಹೋಗಿ ತೆಂಗಿನಕಾಯಿ ಹಣ್ಣುಗಳನ್ನು ಕೊಂಡ. 'ಗುಂಪು ಖಾಲಿಯಾದ ಮೇಲೆ ಪೂಜೆ ಮಾಡಿಸಿದರಾಯಿತು. ಈಗ ಸ್ವಲ್ಪ ಸುತ್ತಾಡಿಬರುವ, ಆಚಾರ್ರೆ' ಎಂದ. ಗುಂಪಿನಿಂದ ಹೊರಬಂದರೆ ಪೀಪಿಗಳ ಶಬ್ದ ; ಪ್ರತಿಯೊಬ್ಬ ಹಳ್ಳಿಯ ಹುಡುಗನ ಬಾಯಲ್ಲೂ ತಾಯಿತಂದೆಯರಿಂದ ಕಾಡಿ ಪಡೆದ ಬಿಲ್ಲೆಯಿಂದ ಕೊಂಡ ವಿಧವಿಧ ನಾದದ ಪೀಪಿ. ಕರ್ಪೂರ ಊದುಬತ್ತಿಯ ವಾಸನೆ.

ಹೊಸ ಬಟ್ಟೆಯ ವಾಸನೆ. ಬಲೂನು ಮಾರುವವನ ಹಾಡು. ಮೂಲೆಯೊಂದ ರಲ್ಲಿ ಬೊಂಬಾಯಿ ಪೆಟ್ಟಿಗೆ. ಬಿಲ್ಲೆ ಕೊಟ್ಟರೆ ಕಂಡಿಯಿಂದ ಅವನು ಗೆಜ್ಜೆ ಕಟ್ಟಿದ ಪೆಟ್ಟಿಗೆಯನ್ನು ತಟ್ಟುತ್ತ ಕುಣಿಯುತ್ತ ತೋರಿಸುತ್ತಾನೆ: "ದಿಲ್ಲಿಯ ಪಟ್ನ ನ್ನೋಡು, ಅತಾರ ಕಛೇರಿ ನೋಡು, ಬೆಂಗ್ಳೂರು ಪೇಟೆ ನೋಡು, ಮೈಸೂರು ಅರಸರನ್ ನೋಡು, ಆಹಾ ದರ್ಬಾರು ಮೋಜು ನೋಡು, ತಿರುಪತಿಯ ಒಡೆಯನ್ ನೋಡು, ಆಹಾ ಬೊಂಬಾಯಿ ಸೂಳೆ ನೋಡು, ಆಹಾ ಬೊಂಬಾಯಿ ಸೂಳೆ ನೋಡು" ಗೆಜ್ಜೆಯ ಕುಣಿತ ನಿಲ್ಲುತ್ತದೆ. 'ಬೊಂಬಾಯಿ ಪೆಟ್ಟಿಗೆ-ಪೆಟ್ಟಿಗೆ—ಬರೀ ಒಂದು ಬಿಲ್ಲೆ, ಬಿಲ್ಲೆ' ಎಂದು ಕೂಗುತ್ತಾನೆ. ಪುಟ್ಟ ನಿಗೆ ಸುಮ್ಮನೇ ನೋಡಿ ನಡೆದುಬಿಡೋದು ಸಾಧ್ಯವಾಗಲಿಲ್ಲ. "ಆಚಾರ್ರೆ, ನಾನು ನೋಡಬೇಕು" ಎಂದ. 'ಆಗಲಿ' ಎಂದರು ಪ್ರಾಣೇಶಾಚಾರ್ಯರು, "ಎಟ್ಟೆಲ್ಲೂ ಹೋಗಬೇಡಿ. ಇಲ್ಲೇ ಇರಿ" ಎಂದು ಪುಟ್ಟ ಕರಿಯ ಪರದೆಯನ್ನು ಮುಖಕ್ಕೆಳೆದುಕೊಂಡು, ಕಂಡಿಯಲ್ಲಿ ನೋಡುತ್ತ ಕೂತ. 'ಈಗ ಇವನನ್ನಿಲ್ಲೆ ಬಿಟ್ಟು ಹೋಗಿಬಿಡಲೆ?' ಎನ್ನಿಸಿತು ಆಚಾರ್ಯರಿಗೆ, ಮತ್ತೆ ಪಾಪ ಎನ್ನಿಸಿತು. ಆದರೆ ಇವನನ್ನು ಕಟ್ಟಿಕೊಂಡಿದ್ದರೆ ಶಾಂತಿಯಿಲ್ಲ, ನಾನೀಗ ಒಂಟಿಯಾಗಿರಬೇಕೆಂದು—ನಡೆದುಬಿಟ್ಟರು. ಸ್ವಲ್ಪ ದೂರ ಹೋಗುವುದರಲ್ಲೇ 'ಆಚಾರ್ರೇ' ಎಂದು ಕೂಗಿದ್ದು ಕೇಳಿಸಿತು. ತಿರುಗಿನೋಡಿದರೆ ಪುಟ್ಟ. "ನೀವು ಕಳದೇ ಹೋಗಿಬಿಟ್ಟಿರಿ ಎಂದುಕೊಂಡೆ. ಆದರೆ ಬೊಂಬಾಯಿ ಪೆಟ್ಟಿಗೆಯವ ನೀವು ಹೋದ ಮಾರ್ಗ ತೋರಿಸಿದ, ನಡೆಯಿರಿ" ಎಂದ. ಪ್ರಾಣೇಶಾಚಾರ್ಯರಿಗೆ ಮೈ ಪರಚಿಕೊಳ್ಳುವಂತಾಯಿತು. ಬೈದುಬಿಡಲೆ ಎನ್ನಿಸಿತು. ಆದರೆ ಕೇಳದೆ, ಬೇಡದೆ, ನಿರಪೇಕ್ಷಿತವಾಗಿ ಸ್ನೇಹಹಸ್ತವನ್ನಿತ್ತ ಒಂದು ಕಂಡರಿಯದ ಮನುಷ್ಯ ಪ್ರಾಣಿಯನ್ನು ಹೇಗಾದರೂ ನೋಯಿಸಲಿಕ್ಕೆ ಶಕ್ಯ? ಅನುಭವಿಸಿಬಿಡು ಎಂದುಕೊಂಡರು. "ಆಹಾ ನೋಡಿ" ಎಂದ ಪುಟ್ಟ. ದೊಂಬರ ಆಟ ನಡೆದಿತ್ತು. ಸರ್ಪಶರೀರದ ಮಾಟವಾದ ದೇಹದ ಚೆಲುವೆಯೊಬ್ಬಳು ಕೈಕಾಲುಗಳನ್ನು ಚೆಲ್ಲಿ ಬರಿ ಹೊಟ್ಟೆಯ ಮೇಲೆ ಸಮತೂಕ ತಪ್ಪದಂತೆ ಬಿದಿರುಗಣೆಯ ಮೇಲೆ ಮಲಗಿ ತೂಗಿದಳು. ದೊಂಬ ತಮ್ಮಟೆ ಬಾರಿಸಿದ. ಇನ್ನೊಂದು ಕ್ಷಣದಲ್ಲಿ, ಗಳದ ಮೇಲೆ ತೂಗಿದ ಚೆಲುವೆ ಸರ್‍ರೆಂದು ಕೆಳಗಿಳಿದು ಕುಣಿಯುತ್ತಿದ್ದಳು. ಜನ ಬಿಲ್ಲೆಗಳನ್ನು ಎಸೆದರು. ಪುಟ್ಟನೂ ಒಂದು ಬಿಲ್ಲೆಯನ್ನೆಸೆದ. ದೇವಸ್ಥಾನದ ಸಮೀಪಕ್ಕೆ ಬರುತ್ತಿದ್ದಂತೆ ಎರಡು ಪಕ್ಕದಲ್ಲೂ ಕೈಮೋಟಾದವರು, ಕಾಲುಮೋಟಾದವರು, ಕಣ್ಣಿಲ್ಲದವರು, ಮೂಗಿನ ಜಾಗದಲ್ಲಿ ಬರಿ

ಎರಡು ಹೋಳೈಯುಳ್ಳವರು, ವಿಧವಿಧದ ಅಂಗವಿಹೀನರು ನೆಲದಲ್ಲಿ ಹೊರಳುತ್ತ ಬೇಡುತ್ತಿದ್ದರು. ಅತ್ಯಂತ ಆಕರ್ಷಕವಾಗಿ ಅಂಗವಿಹೀನನಾದವನಿಗೆ ಬಿಲ್ಲೆಯನ್ನೆಸೆಯುತ್ತ ಪುಟ್ಟ ನಡೆದ. ಮುಂದೆ ಹೆಂಗಸರ ಬಣ್ಣಬಣ್ಣದ ಟೇಪುಗಳನ್ನೆಲ್ಲ ಇಳಿಬಿಟ್ಟಿದ್ದ ಹೊತ್ತು ತಿರುಗುವ ಒಂದು ಅಂಗಡಿಯಲ್ಲಿ ಒಂದು ಗಜ ಟೇಪನ್ನು ಹೆಂಡತಿಗೆಂದು ಕೊಂಡ. 'ಅವಳಿಗೆ ಇದು ಆಸೆ' ಎಂದ. ಎರಡು ಬಣ್ಣದ ತಗಡಿನ ಪೀಪಿಗಳನ್ನು ಮಕ್ಕಳಿಗೆಂದು ಕೊಂಡು ಊದಿ ನೋಡಿದ. 'ನಡೆಯುವ' ಎಂದ. ಪ್ರಾಣೇಶಾಚಾರ್ಯರಿಗೆ ಗದ್ದಲದ ನಡುವೆ, ಸಂಭ್ರಮದ ನಡುವೆ ಅತಂತ್ರವಸ್ತುವಾಗಿ ಭೇತಾಳನಂತೆ ಅಲೆಯುತ್ತಿರುವ ಅನುಭವವಾಯಿತು. ಪುಟ್ಟನಿಗೊಂದು ಸೋಡಾ ಅಂಗಡಿ ಕಂಡದ್ದೆ "ಬನ್ನಿ. ಒಂದು ಕ್ರಷ್ ಕುಡಿಯುವ" ಎಂದ. "ಇಲ್ಲ, ನಾನು ಕುಡಿಯುವುದಿಲ್ಲ" ಎಂದರು ಪ್ರಾಣೇಶಾಚಾರ್ಯರು. ಕೊಂಕಣಿಯೊಬ್ಬನ ಸೋಗೆ ಹಚ್ಚಿದ ಸೋಡಾ ಅಂಗಡಿಯಲ್ಲಿ ಪರೀಕ್ಷಿಸಿ ಪುಟ್ಟ ಅಚ್ಚಕೆಂಪು ಬಣ್ಣದ ನೀರಿರುವ ಬಾಟ್ಲಿಯೊಂದನ್ನು ತೋರಿಸಿ 'ಒಂದು ಕ್ರಷ್' ಎಂದ. ಆ ಅಂಗಡಿಯ ತುಂಬೆಲ್ಲ ನಾಚಿಕೆಯಿಂದ ಬಾಟ್ಲಿಯ ಗಮಗಮ ಸೋಡಾ ಕ್ರಷ್‌ಗಳನ್ನು ಕುಡಿಯುವ ಹೆಗ್ಗಡಿತಿಯರು, ಗೌಡರು, ಮಕ್ಕಳು. ಎಣ್ಣೆ ಹಾಕಿ ನುಣ್ಣಗೆ ಬಾಚಿದ ತಲೆ. ಮುಡಿದ ಚೆಂಡುಹೂ. ಉಟ್ಟ ಹೊಸ ಸೀರೆ. ಗೌಡರ ಮೈಮೇಲೆ ಹೊಸ ಅಂಗಿ. ಕ್ರಶ್ಶಿನ ಬಾಟ್ಲಿಯ ಗೋಲಿಯನ್ನು ತಳ್ಳುವಾಗ ಬರುವ 'ಕುಂಯ್, ಗೊಯಿಕ್' ಎನ್ನುವ ಶಬ್ದ; ಸಿಹಿಯಾದ ಬಣ್ಣದ ಗ್ಯಾಸ್ ಇರುವ ನೀರು ಕುಡಿದ ಮೇಲೆ 'ಗರಕ್' ಎಂದು ಬರುವ ತೇಗು— ಅದೊಂದು ಅಪೇಕ್ಷೆ, ಅನುಭವ, ತೃಪ್ತಿಯ ಸಂಗತಿ. ಜಾತ್ರೆ ಕೊಡುವ ಅನೇಕ ಸುಖಗಳಲ್ಲಿ ಇದೂ ಒಂದು. ಎಲ್ಲರೂ ಇದನ್ನು ಮೊದಲೇ ಅಪೇಕ್ಷಿಸಿ ಬೇಕಾದಷ್ಟು ಕಾಸನ್ನು ಅದಕ್ಕೆಂದು ತೆಗೆದಿಟ್ಟುಬಿಟ್ಟಿರುತ್ತಾರೆ. ಈ ಎಲ್ಲ ಸಾಮಾನ್ಯ ಸುಖಗಳ ಲೋಕದಿಂದ ಹೊರಗೆ ನಿಂತು ಪ್ರಾಣೇಶಾಚಾರ್ಯರು ನೆರೆದವರನ್ನೆಲ್ಲ ನೋಡಿದರು. 'ಗರಕ್' ಎಂದು ತೇಗಿ ಪುಟ್ಟನಿಗೆ ಮುಖ ಅಗಲವಾಯಿತು. "ಬನ್ನಿ, ಹೋಗುವ" ಎಂದ. "ನೀವೇನೂ ತೆಗೆದುಕೊಳ್ಳಲೇ ಇಲ್ಲವಲ್ಲ" ಎಂದ.

ಹೀಗೆ ಗದ್ದಲದಲ್ಲಿ, ಸಂಭ್ರಮದಲ್ಲಿ, ಬೆಲೂನು, ಪೀಪಿ, ಮಿಠಾಯಿ, ಕ್ರಶ್ಶಿನ ಶಬ್ದ, ದೇವಸ್ಥಾನದ ಗಂಟೆಗಳ ನಾದ, ಹೆಂಗಸರ ಬಳೆಯ ಅಂಗಡಿಯ ವೈಭವದ ನಡುವೆ, ಭ್ರಮಿತರಂತೆ ಪ್ರಾಣೇಶಾಚಾರ್ಯರು ಪುಟ್ಟನನ್ನು

ಅನುಸರಿಸಿ ನಡೆದರು. ಎಲ್ಲಿ ನೋಡಿದರೂ ತತ್ಪರವಾದ ಕಣ್ಣುಗಳು. ತನ್ನ ದೊಬ್ಬನದ್ದು ಮಾತ್ರ ಯಾವುದರಲ್ಲೂ ತತ್ಪರವಾಗಲಾರದ ಕಣ್ಣುಗಳು. ಪುಟ್ಟ ಸರಿ. ಇವನನ್ನು ನಾನು ಸಂಧಿಸಿದ್ದೂ ವಿಧಿಯಿರಬೇಕು. ನಾನು ಮಾಡಿದ ನಿಶ್ಚಯ ಪೂರ್ಣವಾಗಲು ಪುಟ್ಟನಂತೆ ಜೀವನದಲ್ಲಿ ತತ್ಪರನಾಗಿ ಬಿಡುವ ಯೋಗ್ಯತೆಯಿರಬೇಕು. ಚಂದ್ರಿಯದು ಇದೇ ಲೋಕ. ನಾನು ಅಲ್ಲೂ ಇಲ್ಲ, ಇಲ್ಲೂ ಇಲ್ಲ. ದ್ವಂದ್ವಕ್ಕೆ ಸಿಕ್ಕಿಕೊಂಡುಬಿಟ್ಟೆ. ಕಾಫಿ, ಮಸಾಲೆದೋಸೆಯ ವಾಸನೆ ಬಂತು. ಪುಟ್ಟ ನಿಂತ, ಆಚಾರ್ಯರೂ ನಿಂತರು.

"ಬನ್ನಿ, ಒಂದಿಷ್ಟು ಕಾಫಿ ಕುಡಿಯುವ" ಎಂದ ಪುಟ್ಟ.

"ನನಗೆ ಬೇಡ" ಎಂದರು ಪ್ರಾಣೇಶಾಚಾರ್ಯರು.

"ಇದು ಬ್ರಾಹ್ಮಣರ ಹೋಟೆಲು. ಜಾತ್ರೆಗೆಂದು ತೀರ್ಥಹಳ್ಳಿಯಿಂದ ಬಂದದ್ದು. ದೋಷವಿಲ್ಲ. ಒಳಗೆ ಮಡಿಬ್ರಾಹ್ಮಣರಿಗೆಂದು ಪ್ರತ್ಯೇಕ ಸ್ಥಳ ಏದೆ."

"ಬೇಡ. ನನಗೆ ಕಾಫಿ ಬೇಡ."

"ಅದೆಲ್ಲ ಆಗದು. ನಾನು ಕುಡಿಸುವೆ ನಿಮಗೆ ಕಾಫಿ, ಬನ್ನಿ" ಎಂದು ಪುಟ್ಟ ಕೈ ಹಿಡಿದು ಒಳಗೆ ಕರೆದುಕೊಂಡು ಹೋದ. ಪ್ರಾಣೇಶಾಚಾರ್ಯರು ಮಣೆಯ ಮೇಲೆ ಒಲ್ಲದೆ ಕೂತರು, ಇಲ್ಲಿ ಯಾರಾದರೂ ನನ್ನ ಪರಿಚಯ ದವರು ಇದ್ದಿರಬಹುದೋ ಎಂದು ಭೀತಿಯಿಂದ ಹುಡುಕಿದರು. ವೇದಾಂತ ಶಿರೋಮಣಿಯೊಬ್ಬ ಹೋಟೇಲು ಕಾಫಿ ಕುಡಿಯೋದು ಕಣ್ಣಿಗೆ ಬಿದ್ದು ಬಿಟ್ಟರೆ....ಥತ್ ಈ ಭೀತಿಯಿಂದ ಮೊದಲು ಪಾರಾಗಬೇಕೆಂದು ತಮ್ಮನ್ನು ಶಪಿಸಿಕೊಂಡರು. ಪುಟ್ಟ ಸ್ವಲ್ಪ ದೂರದಲ್ಲಿ ಹೋಗಿ ಕೂತು ಪ್ರಾಣೇಶಾ ಚಾರ್ಯರ ಬ್ರಾಹ್ಮಣ್ಯಕ್ಕೆ ಗೌರವ ತೋರಿಸಿದ. 'ಎರಡು ಸ್ಪೆಶಲ್ ಕಾಫಿ' ಎಂದ ಎದುರು ನಿಂತ ಮಾಣಿಗೆ. ಎರಡಾಣೆ ಕೊಟ್ಟು, ಲೋಟಾದಲ್ಲಿ ಬಂದ ಕಾಫಿಯನ್ನು ಕುಡಿಯುತ್ತ 'ಹಾಳು ಜಾತ್ರೆ ಕಾಫಿ' ಎಂದ. ಪ್ರಾಣೇಶಾ ಚಾರ್ಯರಿಗೆ ದಾಹವಾಗಿದ್ದರಿಂದ ಕಾಫಿ ಕುಡಿದು ಸಮಾಧಾನವೇ ಆಯಿತು. ಹುರುಪು ಬಂತು. ಹೊರಬಂದರು. "ನೀವು ಬೇಕಾದರೆ ದೇವಸ್ಥಾನದಲ್ಲಿ ಹೋಗಿ ಊಟ ಮಾಡಿ. ಇವತ್ತು ಆರುಗಂಟೆಯ ತನಕ ಊಟದ ಸಂತರ್ಪಣೆ ನಡೆಯುತ್ತದೆ ಬ್ರಾಹ್ಮಣರಿಗೆ" ಎಂದ ಪುಟ್ಟ. ಎಷ್ಟೋ ದಿನಗಳಿಂದ ಊಟವೇ ಇಲ್ಲದ್ದರಿಂದ ಪ್ರಾಣೇಶಾಚಾರ್ಯರಿಗೆ ಥಟ್ಟನೆ ಬಿಸಿಬಿಸಿ ಅನ್ನ ಸಾರಿನ ಊಟ ಮಾಡಬೇಕೆಂಬ ಅಪೇಕ್ಷೆಯಾಯಿತು. ಆದರೆ ಫಕ್ಕನೆ, ತನಗೀಗ

ಸೂತಕವಲ್ಲವೆ, ದೇವಸ್ಥಾನದಲ್ಲಿ ಹೋಗಿ ಊಟ ಮಾಡುವಂತಿಲ್ಲ. ಮೈಲಿಗೆ ಮಾಡಿದರೆ ರಥ ಮುಂದಕ್ಕೆ ಚಲಿಸುವುದಿಲ್ಲವೆನ್ನುತ್ತಾರೆ ಎಂಬ ನಂಬಿಕೆ ನೆನಪಾಯಿತು. ಆದರೆ ನಾರಣಪ್ಪ ಗಣಪತಿಯ ಮೀಸನ್ನು ಹಿಡಿದು ಜಯಿಸಿಕೊಳ್ಳಲಿಲ್ಲವೇ? ತನಗೆ ಹಾಗೆ ಬ್ರಾಹ್ಮಣ್ಯವನ್ನು ಸಂಪೂರ್ಣ ಧಿಕ್ಕರಿಸಿ ನಡೆಯುವ ಧೈರ್ಯವಿಲ್ಲ ಎನ್ನಿಸಿತು. ಹಾಗಾದರೆ ಚಂದ್ರಿಯನ್ನು ಕೂಡಿ ಬದುಕುತ್ತೇನೆಂಬ ನಿಶ್ಚಯಕ್ಕೆ ಯಾವ ಬೆಲೆ ಎಂದು ಮನಸ್ಸು ಹೀಯಾಳಿಸಿತು. ನಿಶ್ಚಯವೆಂದರೆ ಪೂರ್ಣ ನಿಶ್ಚಯವಾಗಬೇಕು. ಕಟ್ಟಿಕೊಂಡರೆ ಸಂಪೂರ್ಣ ಕಟ್ಟಿಕೊ. ಬಿಟ್ಟರೆ ಪೂರ್ಣ ಬಿಡು. ದ್ವಂದ್ವಾತೀತನಾಗುವ ದಾರಿ ಅದು. ಭೀತಿಯಿಂದ ಪಾರಾಗುವ ದಾರಿ ಅದು. ಮಹಾಬಲ ಹೇಗೆ ನಿಶ್ಚಯಿಸಿಬಿಟ್ಟ....

"ಸ್ವಲ್ಪ ನಿಲ್ಲಿ ಆಚಾರ್‍ರೆ. ಅಲ್ಲಿ ನೋಡಿ" ಎಂದ ಪುಟ್ಟ. ದೂರದಲ್ಲೊಂದು ದಿಬ್ಬದ ಮೇಲೆ ಪರವಶರಾದಂತೆ ಕಾಣುವ ಒಂದು ಶೂದ್ರರ ಗುಂಪಿತ್ತು. "ಬನ್ನಿ. ಅಲ್ಲಿಗೆ ಹೋಗಿ ನೋಡುವ. ಕೋಳಿ ಅಂಕವಿರಬೇಕು" ಎಂದ ಪುಟ್ಟ. ಪ್ರಾಣೇಶಾಚಾರ್ಯರಿಗೆ ಎದೆ ಜಗ್ಗೆಂದಿತು. ಆದರೂ ಪುಟ್ಟನ ಕೂಡ ನಡೆದರು—ವಿಧಿಗೆ ತಲೆಬಾಗಿ. ಗುಂಪಿನಿಂದ ಸ್ವಲ್ಪದೂರ ನಿಂತು ನೋಡಿದರು. ಹೆಂಡದ ವಾಸನೆಯಿಂದ ಅವರಿಗೆ ವಾಕರಿಕೆ ಬಂತು. ಕಾಲಿಗೆ ಕತ್ತಿ ಕಟ್ಟಿದ್ದ ಎರಡು ಹುಂಜಗಳು 'ರಪ್' 'ರಪ್' ಎಂದು ರೆಕ್ಕೆ ಬಡಿದು ಚೂರಿಯಿಂದ ತಿವಿದುಕೊಳ್ಳುತ್ತ ಪರಸ್ಪರ ಎಗರಾಡುವುದನ್ನು ನೋಡುತ್ತ ಜನ ಕುಕ್ಕುರುಗಾಲಿನಲ್ಲಿ ಕೂತಿದ್ದರು—ತುದಿಗಾಲಿನ ಮೇಲೆ, ಬಾಯಿ ಬಿಟ್ಟು, ಸುತ್ತುಗಟ್ಟಿ. ಅಷ್ಟು ತತ್ಪರ, ತೀಕ್ಷ್ಣ, ಕಠೋರ ದೃಷ್ಟಿಯನ್ನು ಪ್ರಾಣೇಶಾಚಾರ್ಯರು ಜನ್ಮಾಪಿ ಕಂಡೇ ಇರಲಿಲ್ಲ. ಪಂಚಪ್ರಾಣವೇ ಇತ್ತು ಕೂತವರ ಕಣ್ಣಿನ ನೋಟದಲ್ಲಿ—ಪ್ರಾಣ ಮತ್ತು ಎರಡು ಹುಂಜಗಳು. ಇಲ್ಲ. ನಾಲ್ಕು ರೆಕ್ಕೆ, ನಾಲ್ಕು ಕತ್ತಿಗಳು. ಕೊಕ್ಕ್ ಕೊಕ್ಕ್ ಕೊಕ್ಕ್ ಕೊಕ್ಕ್ —ಸುತ್ತ ನಲವತ್ತು ಕಣ್ಣುಗಳು. ಕೆಂಪು ಕಿರೀಟದ ಹುಂಜಗಳ ಹೊಳೆಯುವ ಚೂರಿಗಳು. ಬಿಸಿಲು ಪಳಪಳಕ್. ಚಮಕು. ಚಕಮಕಿ. ಅಹಾ ಚಮತ್ಕಾರ. ಬಡಿಯಿತು. ಬಡಿಯಿತು. ಏರಿ ಕೂತಿತು. ಪ್ರಾಣೇಶಾಚಾರ್ಯರಿಗೆ ದಿಗಿಲಾಗಿಬಿಟ್ಟಿತು. ಒಂದು ರಾಕ್ಷಸಲೋಕಕ್ಕೆ ಥಟ್ಟನೇ ಬಂದುಬಿಟ್ಟಂತೆನ್ನಿಸಿತು. ಚಂದ್ರಿಯೊಡನೆ ಬಾಳಲು ನಿಶ್ಚಯಿಸಿದ ಅಧೋಲೋಕದ ಆಳದ ಕತ್ತಲೆಯಲ್ಲೆಲ್ಲೋ ಗುಹೆಯಲ್ಲೆಲ್ಲೋ ಈ ಪರವಶ ಪ್ರಾಣಿಗಳ ಕಣ್ಣಿನ

ಕಠೋರ ತತ್ಪರತೆಯೂ ಒಂದಂಶವಾದರೆ ಅಲ್ಲಿ ಬ್ರಾಹ್ಮಣನಾದ ತಾನು ಬಾಡಿ ಬಳಲಿಹೋಗಿಬಿಡಬಹುದೆಂದು ಪರಮಭೀತರಾಗಿ ಕೂತುಬಿಟ್ಟರು. ಎರಡು ಹುಂಜಗಳ ಒಡೆಯರು ತಮ್ಮ ಹುಂಜಗಳನ್ನು ಹುರಿದುಂಬಿಸುತ್ತ ಮಾಡು ತ್ತಿದ್ದ ಶಬ್ದ ಮನುಷ್ಯನ ಗಂಟಲಿನಿಂದ ಬಂದದ್ದಲ್ಲ ಎನ್ನಿಸಿತು. ಈ ಎಲ್ಲ ಕ್ರೂರ ತೀಕ್ಷ್ಣಭಾವಗಳ ಲೋಕದಲ್ಲಿ ಬದುಕುವ ಸಾಮರ್ಥ್ಯ ತನಗೆ ಖಂಡಿತಾ ಇಲ್ಲವೆಂದು ಖಚಿತವಾಯಿತು. ಕಾಮದ ಒಂದು ಪಾರ್ಶ್ವ ಮಾರ್ದವವಾದರೆ, ಇನ್ನೊಂದರಲ್ಲಿ ಈ ರಾಕ್ಷಸ ಛಲವಿರಬೇಕು. ನಾರಣಪ್ಪ ತನ್ನನ್ನು ಧಿಕ್ಕರಿಸಿ ನಡೆದ ಆ ದಿನ ತನ್ನ ವ್ಯಕ್ತಿತ್ವವೆಲ್ಲ ಕಂತಿದಂತಾಗಿ ಅನುಭವಿಸಿದ್ದ ಪುಕ್ಕಲು ಮರುಕಳಿಸಿತು. ಎರಡು ಹುಂಜಗಳನ್ನೂ ಬಡಿದಾಟ ದಿಂದ ಬಲಾತ್ಕಾರವಾಗಿ ಬಿಡಿಸಿ ಗಾಯವಾಗಿ ರಕ್ತ ಬರುತ್ತಿದ್ದ ಜಾಗಗಳನ್ನು ಹೊಲಿದು ಮತ್ತೆ ಕಾಳಗಕ್ಕೆ ಬಿಟ್ಟರು. ಈ ಮಧ್ಯೆ ಗೆಲುವಿನಿಂದ ನೋಡು ತ್ತಿದ್ದ ಪುಟ್ಟ ಒಬ್ಬ ಅಪರಿಚಿತನ ಜೊತೆ ಪಂಥ ಕಟ್ಟಿದ್ದ. 'ಈ ಹುಂಜ ನನ್ನದು' ಎಂದು ಪುಟ್ಟ. 'ಇದು ಗೆದ್ದರೆ ಎರಡಾಣೆ' ಎಂದ ಅಪರಿಚಿತ. ತನ್ನದು ಗೆದ್ದರೆ ನಾಲ್ಕಾಣೆ ಎಂದ ಪುಟ್ಟ. ಎಂಟಾಣೆ ಎಂದ ಅವ. ಹತ್ತಾಣೆ ಎಂದ ಪುಟ್ಟ. ಹನ್ನೆರಡಾಣೆ ಅಂದ ಅವ. 'ನೋಡುವ' ಎಂದ ಪುಟ್ಟ. ಪ್ರಾಣೇಶಾಚಾರ್ಯರು ಆತಂಕದಿಂದ ಕಾದರು. ಈ ಹಡೆ ಹುಡುಗ ಕೈಯ ಲ್ಲಿರುವ ದುಡ್ಡನ್ನೆಲ್ಲ ಕಳೆದುಕೊಂಡರೆ ಏನು ಗತಿ ? ಆದರೆ ಪರಮಾಶ್ಚರ್ಯ. ಪುಟ್ಟನೇ ಗೆದ್ದ. ಆದರೆ ಪುಟ್ಟ ಅಲ್ಲಿಂದ ಹೊರಡಲು ಎದ್ದ ಕೂಡಲೇ ಸೋತಿದ್ದ ವನು 'ಇನ್ನೊಂದು ಪಂತ' ಎಂದ. 'ಬೇಡ' ಎಂದ ಪುಟ್ಟ. ಅವನು ಕುಡಿದು ಬಿಟ್ಟಿದ್ದರಿಂದ ಪುಟ್ಟನಿಗೆ ಹೊಡೆಯಲು ಬಂದ. ಪ್ರಾಣೇಶಾಚಾರ್ಯರು ತಡೆದರು. ಬ್ರಾಹ್ಮಣನನ್ನು ಕಂಡು ಅವ ಕೋಪವನ್ನು ನುಂಗಿಕೊಂಡ. ಎಲ್ಲರೂ 'ಏನು' 'ಏನು' ಎಂದು ಏರಿಬರುವುದರೊಳಗೆ ಪ್ರಾಣೇಶಾಚಾರ್ಯರು ಪುಟ್ಟನನ್ನೆಳೆದುಕೊಂಡು ನಡೆದುಬಿಟ್ಟರು.

ಹನ್ನೆರಡಾಣೆ ಗಳಿಸಿ ಹಿರಿಹಿರಿ ಹಿಗ್ಗಿದ ಪುಟ್ಟ. ಇದರಿಂದೇನೂ ಅಪ್ರತಿಭ ನಾದಂತೆ ಕಾಣಲಿಲ್ಲ. ಪ್ರಾಣೇಶಾಚಾರ್ಯರಿಗೆ ಮಾತ್ರ ಥಟ್ಟನೆ ಪುಟ್ಟನ ಬಗ್ಗೆ ವಾತ್ಸಲ್ಯಭಾವ ಮೂಡಿತು. ನನಗೊಬ್ಬ ಮಗನಿದ್ದಿದ್ದರೆ ಪ್ರೀತಿಯಿಂದ ಸಲಹಬಹುದಿತ್ತು ಎನ್ನಿಸಿತು.

"ಹೌದು ಪುಟ್ಟ, ನಾವಿನ್ನು ದಾರಿ ಹಿಡಿಯುವ" ಎಂದರು ಪ್ರಾಣೇಶಾಚಾ ರ್ಯರು—ತಮ್ಮ ಸ್ನೇಹವನ್ನು ಅಲ್ಲಿಗೇ ಮುಕ್ತಾಯಗೊಳಿಸಲು ಯತ್ನಿಸುತ್ತ.

"ಯಾವ ದಿಕ್ಕಿಗೆ ತಮ್ಮ ಪ್ರಯಾಣ ?" ಎಂದು ಪುಟ್ಟ ಮುಖ ಸಣ್ಣಗೆ ಮಾಡಿಕೊಂಡ. ನನ್ನಿಂದ ಏನನ್ನು ಅಪೇಕ್ಷಿಸಿ ಇವ ಹೀಗೆ ಗಂಟುಬಿದ್ದಿದ್ದಾನೆ ಎಂದು ಆಚಾರ್ಯರಿಗೆ ಅನುಮಾನವಾಯಿತು.

"ಹೀಗೆ. ನಿಶ್ಚಿತವಿಲ್ಲ" ಎಂದರು.

"ಅಷ್ಟು ದೂರ ನಿಮ್ಮನ್ನು ಕಳಿಸಿಬರುವೆ ಹಾಗಾದರೆ. ದೇವಸ್ಥಾನದಲ್ಲಿ ಊಟ ಮಾಡಿ ಹೋದರಾಯಿತಲ್ಲ" ಎಂದ ಒತ್ತಾಯಪೂರ್ವಕವಾಗಿ ಪುಟ್ಟ. ಫಜೀತಿಗಿಟ್ಟುಕೊಂಡಿತಲ್ಲ ಎಂದು ಪ್ರಾಣೇಶಾಚಾರ್ಯರು :

"ನಾನೊಬ್ಬ ಸೋನೆಗಾರನನ್ನು ನೋಡಬೇಕು" ಎಂದರು.

"ಯಾಕೆ?" ಎಂದ ಪುಟ್ಟ ಅಷ್ಟಿಷ್ಟಕ್ಕೆ ಜಗ್ಗದೆ.

"ನನ್ನದೊಂದು ಬಂಗಾರದ ಚೂರನ್ನು ಮಾರುವುದಿದೆ."

"ಯಾಕೆ ? ಸದ್ಯಕ್ಕೆ ಖರ್ಚಿಗೆ ಕಾಸಿಲ್ಲದಿದ್ದರೆ ಈ ಹನ್ನೆರಡಾಣೆ ತಗೊಳ್ಳಿರಿ ಕೈಗಡವಾಗಿ. ಇನ್ನೊಮ್ಮೆ ಕೊಡುವಿರಂತೆ."

ಇಂತಹ ಮನುಷ್ಯನಿಂದ ಪಾರಾಗುವುದಾದರೂ ಹೇಗೆಂದು ಪ್ರಾಣೇಶಾಚಾರ್ಯರು ದಿಕ್ಕೆಟ್ಟರು. ಕಾಲಿಗೆ ತೊಡರಿಕೊಳ್ಳುವ ಬಳ್ಳಿಯಂತೆ ಇವನ ಕರುಳು.

"ಇಲ್ಲ ಪುಟ್ಟ. ಅಷ್ಟಿಷ್ಟು ಹಣವಲ್ಲ ಬೇಕಾಗಿರೋದು. ಕುಂದಾಪುರಕ್ಕೆ ಬಸ್ಸು ಹಿಡಿಯಬೇಕು. ಹಾಗೆ ಹೀಗೇಂತ ಇನ್ನೊಂದಷ್ಟು ಖರ್ಚಿನ ಬಾಬತ್ತಿದೆ" ಪ್ರಾಣೇಶಾಚಾರ್ಯರು ಅವನ ಪಟ್ಟನಿಂದ ತಪ್ಪಿಸಿಕೊಳ್ಳಲಾರದೆ ಎಂದರು.

"ಓ ಹಾಗೋ. ಬನ್ನಿ ಹಾಗಾದರೆ, ನನಗೊಬ್ಬ ಸೋನೆಗಾರನಿಲ್ಲಿ ಪರಿಚಯ. ಏನು ಮಾರುವುದಿದೆ?"

"ಯಜ್ಞೋಪವೀತಕ್ಕೆ ಹಾಕಿದ ಪವಿತ್ರದ ಉಂಗುರ." ವಿಧಿಯಿಲ್ಲದೆ ಪ್ರಾಣೇಶಾಚಾರ್ಯರು ಹೇಳಿಕೊಂಡರು.

"ಎಲ್ಲಿ ತೋರಿಸಿ ?" ಎಂದು ಪುಟ್ಟ ಕೈಯೊಡ್ಡಿದ. ಜನದ ಗುಂಪಿನಲ್ಲಿ ನಾಚುತ್ತ ಪ್ರಾಣೇಶಾಚಾರ್ಯರು ಯಜ್ಞೋಪವೀತದ ಉಂಗುರವನ್ನು ಬಿಚ್ಚಿ ಕೊಟ್ಟರು. ಪುಟ್ಟ ಅದನ್ನು ಕೈಯಲ್ಲಿ ಹಿಡಿದು ಪರೀಕ್ಷಿಸಿ "ಸುಮಾರು ಹದಿನೈದು ರೂಪಾಯಿಗಿಂತ ಕಮ್ಮಿ ಹೇಳಿದರೆ ಒಪ್ಪಿಕೊಳ್ಳಬೇಡಿ" ಎಂದ. ಇಬ್ಬರೂ ಕೇರಿಯೊಂದನ್ನು ಹೊಕ್ಕು ಸೋನೆಗಾರನ ಮನೆಗೆ ಹೋದರು. ಮರದ ಪೆಟ್ಟಿಗೆಯೊಂದರ ಎದುರು ಆರದಿಂದ ಉಂಗುರ ಒಂದನ್ನು ಉಜ್ಜುತ್ತ ಕೂತ ಸೋನೆಗಾರ ಬೆಳ್ಳಿಕಟ್ಟಿನ ಕನ್ನಡಕವನ್ನು ನೇರ ಮಾಡಿಕೊಂಡು,

'ಏನು ?' ಅಂದ ಪುಟ್ಟನನ್ನು ಕಂಡು. "ಏನು, ಪುಟ್ಟಯ್ಯನವರ ಕಾಲು ನಮ್ಮಲ್ಲಿಗೆ ಬೆಳೆಸಿತಲ್ಲ" ಎಂದು ಉಪಚರಿಸಿದ. ಉಂಗುರವನ್ನು ಕೊಟ್ಟದ್ದಾಯಿತು. ಸೋನೆಗಾರ ಅದನ್ನು ಗುಲಗಂಜಿ ತಕ್ಕಡಿಯಲ್ಲಿ ತೂಗಿ, ಒರೆ ಹಚ್ಚಿ ನೋಡಿ, 'ಹತ್ತು ರೂಪಾಯಿ'ಯೆಂದ. ಪುಟ್ಟ "ಹದಿನೈದಕ್ಕೆ ಕಡಿಮೆಯಾದರೆ ಮಾತೇ ಬೇಡ" ಎಂದ. ವ್ಯವಹಾರದ ಮಾತಿನಿಂದ ಆಚಾರ್ಯರಿಗೆ ಕಸಿವಿಸಿಯಾಯಿತು. "ಬಂಗಾರದ ಬೆಲೆ ಇಳಿದಿದೆ" ಎಂದ ಸೋನೆಗಾರ. "ಅದೆಲ್ಲ ನನಗೆ ಲೆಕ್ಕವಿಲ್ಲ. ಹದಿನೈದು ಕೊಡುತ್ತೀರೋ ಇಲ್ಲವೋ" ಎಂದು ಆಚಾರ್ಯರ ಮುಖ ನೋಡಿ ತನ್ನ ವ್ಯವಹಾರಜ್ಞತೆಯನ್ನು ಮೆಚ್ಚಿರೆಂದು ಹುಬ್ಬು ಹಾರಿಸಿದ. ಆಚಾರ್ಯರು ಅದಕ್ಕೆ "ಹತ್ತಾದರೆ ಹತ್ತು. ನನ್ನ ಖರ್ಚಿಗಷ್ಟು ಈಗ ಸಾಕು" ಎಂದು ಚರ್ಚೆ ಮಾಡಲು ಇಷ್ಟವಾಗದೆ ಅಂದುಬಿಟ್ಟರು. ಪುಟ್ಟನಿಗೆ ಪೆಚ್ಚಾಯಿತು. ಸೋನೆಗಾರನ ಮುಖ ಅಗಲವಾಯಿತು. ಹತ್ತು ರೂಪಾಯಿಯನ್ನು ಎಣಿಸಿಕೊಟ್ಟು ಕೈಮುಗಿದ. ಪ್ರಾಣೇಶಾಚಾರ್ಯರು 'ಉಪಕಾರವಾಯಿತು' ಎಂದು ಹೊರಬಂದರು.

ಹೊರಬಂದದ್ದೇ ತಡ ಪುಟ್ಟ ಪರಚಿಕೊಳ್ಳಲು ಪ್ರಾರಂಭಿಸಿದ—ಒಳ್ಳೆ ಕೈಹಿಡಿದ ಹೆಂಡತಿಯ ಹಾಗೆ: "ಏನೋ ನಿಮಗೆ ಉಪಕಾರ ಮಾಡೋಣ ಅಂತ ಹೋದರೆ ನನ್ನ ಮಾನಾನೇ ಕಳೆದಿರಲ್ಲರಿ. ನನ್ನ ಮಾತಿಗೆ ಇನ್ನು ಅವನ ಹತ್ತಿರ ಬೆಲೆಯೇ ಇಲ್ಲ—ಹೋಗಲಿ—ಆದರೆ ಐದು ರೂಪಾಯಿಗೆ ನಿಮಗೇ ನಾಮವಲ್ಲ! ಕಲಿಯುಗದಲ್ಲಿ ನಿಮ್ಮ ಹಾಗೆ ಬೆಪ್ಪರಾಗಿರಕೂಡದು, ತಿಳಿಯಿತ ? ಅಕ್ಕಸಾಲಿಗಳು ಸ್ವತಃ ಅಕ್ಕನ ಬಂಗಾರವನ್ನೇ ಕದೀತಾರಂತೆ, ಕೇಳಿದೀರ ?"

"ಹಣದ ಆತುರವಿತ್ತು. ದುಡುಕಿಬಿಟ್ಟೆ. ಕ್ಷಮಿಸು."

ಪ್ರಾಣೇಶಾಚಾರ್ಯರು ವಿನಯದಿಂದ ಪುಟ್ಟನ ಮನಸ್ಸನ್ನು ನೋಯಿಸಲು ಇಚ್ಛಿಸದೆ ಎಂದರು. ಪುಟ್ಟ ಮೆತ್ತಗಾಗಿ :

"ನಿಮ್ಮನ್ನು ನೋಡಿದ ಕೂಡಲೆ ತಿಳಿಯಿತು. ನೀವು ಬಹಳ ಸಾಧು ಅಂತ. ನಿಮ್ಮನ್ನೊಬ್ಬರನ್ನೆ ಎಲ್ಲಿಗೂ ಕಳುಹಿಸಬಾರದು. ನಿಮ್ಮನ್ನು ಬಸ್ಸು ಹತ್ತಿಸಿ ನಾನು ಹಿಂದಕ್ಕೆ ಹೋಗುವೆ. ಈಗ ನಾನು ಹೇಳಿದ ಹಾಗೆ ಮಾಡಿ. ನಮ್ಮ ಪೈಕಿಯ ಜನ ಒಂದಿದೆ. ಅವರನ್ನು ನಾನು ನೋಡಿ ಬರಬೇಕು. ಜೊತೆಗೆ ಬನ್ನಿ. ಮತ್ತೆ ದೇವಸ್ಥಾನಕ್ಕೆ ಹೋಗಿ ಊಟ ಮಾಡಿ. ಚಿಂತೆಯಿಲ್ಲ. ಸಾಯಂಕಾಲದವರೆಗೂ ಅಲ್ಲಿ ಪಂಕ್ತಿಯ ಮೇಲೆ ಪಂಕ್ತಿ

ಊಟ. ಮತ್ತೆ ರಾತ್ರೆ ಇಲ್ಲೆ ಎಲ್ಲಾದರೂ ಮಲಗಿದ್ದು ಬೆಳಗ್ಗೆ ಎದ್ದು ಐದು ಮೈಲಿ ನಡೆದರೆ ತೀರ್ಥಹಳ್ಳಿ. ಅಲ್ಲಿಂದ ಆಗುಂಬೆಗೆ ಬಸ್ಸಿದೆ. ಟ್ಯಾಕ್ಸಿಯಲ್ಲಿ ಘಟ್ಟ ಇಳಿದರೆ ನೇರ ಕುಂದಾಪುರಕ್ಕೆ ಬಸ್ಸು" ಎಂದ.

ಕುಂದಾಪುರದ ದಾರಿ ಖರ್ಚಿಗೆಂದು ಉಂಗುರ ಮಾರಿ ಬಂದ ಹಣವನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಆಚಾರ್ಯರು 'ಸರಿ' ಎಂದರು. 'ಹಣ ಜೋಕೆ' ಎಂದು ಪುಟ್ಟ ಎಚ್ಚರಿಸಿದ.

ಊಟಕ್ಕೆ ಹೋಗಿದ್ದಾಗ ಮೆತ್ತಗೆ ಇಸನಿಂದ ಜಾರಿಬಿಟ್ಟರಾಯಿತು ಎಂದು ಕೊಂಡರು. ಯಾವ ಅಪೇಕ್ಷೆಯೂ ಇಲ್ಲದೆ ತನ್ನ ಜೀವನದಲ್ಲಿ ಒಳಗಾಗಲೆತ್ನಿಸುವ ಪುಟ್ಟನನ್ನು ಕಂಡು ಅವರಿಗೆ ಇದು ಖಂಡಿತ ಪ್ರಾರಬ್ಧಕರ್ಮದಿಂದ ಉಂಟಾದ ಸನ್ನಿವೇಶ ಎನ್ನಿಸಿತು. ಯಾವ ಜನ್ಮದ ಋಣವೋ ಹೀಗೆ ತೀರುತ್ತಿರಬಹುದು. ಒಟ್ಟು ಮನುಷ್ಯನ ಸಹವಾಸದಿಂದ ಬಿಡುಗಡೆಯಿಲ್ಲ. ಕಾಲಿಗೆ ಬಳಸಿಕೊಳ್ಳುವ ಬಳ್ಳಿ. ನನ್ನ ಬಾಳು ನನ್ನದೆಂದು ಯಾವ ಮುಖದಲ್ಲಿ ಹೇಳಲಿಕ್ಕೆ ಸಾಧ್ಯ.

"ಹೀಗೆ ಬನ್ನಿ" ಎಂದು ಪುಟ್ಟ ಜನ ಕಿಕ್ಕಿರಿದ ದೇವಸ್ಥಾನದ ಮಾರ್ಗವಾಗಿ ಒಂದು ಓಣಿಗೆ ಕರೆದುಕೊಂಡು ಹೋದ. ನಡೆಯುತ್ತ ನಡೆಯುತ್ತ ಅವರು ಒಂದು ನಿರ್ಜನವಾದ ಪ್ರದೇಶಕ್ಕೆ ಬಂದುಬಿಟ್ಟರು. ಅಲ್ಲೊಂದು ಹಳ್ಳ. ಹಳ್ಳ ದಾಟಲು ಬಿದಿರಿನ ಬೊಂಬಿನ ಸಾರ. ಬೇಲಿ ದಾಟ ಗದ್ದೆಗೆ ಬಂದರು. ಗದ್ದೆಯಂಚಲ್ಲಿ ನಡೆಯುತ್ತಿದ್ದಂತೆ ಪ್ರಾಣೇಶಾಚಾರ್ಯರಿಗೆ ಕೋಳಿ ಅಂಕದ ನೆನಪಾಯಿತು. ಹೇಗೆ ಒಂದು ಹುಂಜ ಇನ್ನೊಂದನ್ನೇರಿ ರೆಕ್ಕೆಗಳ ಕೋಲಾಹಲದಲ್ಲಿ ನುರಿಯಿತು—ಹರಿದು, ಪರಚಿ, ಒಳಕ್ಕೆ ಒಳಕ್ಕೆ. ಬಿಸಿಲಿನಲ್ಲಿ ಚೂಪಾಗಿ ಹೊಳೆದ ಚೂರಿ. ಮತ್ತೆ ಆ ಕಣ್ಣುಗಳು. ಹೆಂಡದ ವಾಸನೆ ಎಳೆದು ಹೊಯ್ದು ಬಿಡಿಸಿದರೂ ಅಂಗಾತ ಮಲಗಿಸಿಕೊಂಡು ಗಾಯವನ್ನು ಹೊಲಿಯುತ್ತಿದ್ದಾಗಲೂ ಕೊಕ್ ಕೊಕ್ ಎಂದು ತುಯ್ಯುತ್ತಿದ್ದುವು. ಛಲದ ದುರಾಶೆಯ ರಾಕ್ಷಸಲೋಕ. ಅಲ್ಲಿ ನಾನು ಅತಂತ್ರ ಪಿಶಾಚಿಯಂತಿದ್ದೆ. ಗಾಬರಿಪಟ್ಟೆ: ನನ್ನ ನಿಶ್ಚಯದ ಕ್ರಿಯೆಯಿಂದ ಆ ಲೋಕಕ್ಕೆ ನಾನು ಮಾರ್ಪಟ್ಟರೆ? ಮತ್ತೆ ಆ ದೊಂಬರ ಹುಡುಗಿ. ಸ್ಫುಟವಾಗಿ ಎದ್ದುಕಾಣುವಂತೆ ಬಿಗಿಯಾದ ಬಟ್ಟೆ ತೊಟ್ಟು, ಬಿದಿರುಗಳದ ತುದಿಯಲ್ಲಿ ಆಕಾಶದಲ್ಲಿ ತುಯ್ದು ಕಸರತ್ತು. ಸರ್ರನಿಳಿದುಬಿಟ್ಟಳು. ಕುಣಿದಳು. ತಳ್ಳಿದರೆ ಕುಂಯ್ ಗೊಯಿಂಕ್ ಎನ್ನುವ ಗೋಲಿ. ಬಣ್ಣದ ನೀರು, ಗರಕ್ಕೆಂಬ ತೇಗು,

ಅಪೇಕ್ಷೆ, ಅನುಭವ, ತೃಪ್ತಿ. ತತ್ಪರವಾದ ಕಣ್ಣುಗಳು. ಕಣ್ಣುಗಳು, ಬಣ್ಣಬಣ್ಣದ ಟೇಪು ಬೆಲೂನುಗಳ ಮಧ್ಯೆ, ತೇರಿನ ಶಿಖರದ ಸುತ್ತ, ನನ್ನ ಬೆನ್ನ ಹಿಂದೆ, ಎರಡು ಪಕ್ಕಗಳಲ್ಲಿ. ರೆಕ್ಕೆ-ಚೂರಿ-ಕೊಕ್ಕು-ಉಗುರುಗಳ ಸುತ್ತ ಕಣ್ಣುಗಳು. ತದ್ರೂಪ, ತತ್ಪರ. ಅಪೇಕ್ಷೆತೃಪ್ತಿಗಳ ಅದ್ವೈತ. ತತ್ತ್ವಮಸಿ, ತತ್ತ್ವಮಸಿ. ನನಗೆ ದಿಗಿಲು : ಪ್ರೇತತ್ವ ಕಳೆದು ರಾಕ್ಷಸತ್ವ ಪ್ರಾಪ್ತವಾಗುವ ದಿಗಿಲು.

"ನಾವು ಈಗ ಎಲ್ಲಿಗೆ ಹೋಗುತ್ತಿದ್ದೇವೆ. ಗೊತ್ತೋ?" ಪುಟ್ಟ ಬೀಡಿ ಹತ್ತಿಸಿ ತುಂಟನಗು ನಗುತ್ತ ಕೇಳಿದ.

ಪ್ರಾಣೇಶಾಚಾರ್ಯರು ಗೊತ್ತಿಲ್ಲವೆಂದು ತಲೆಯಾಡಿಸಿದರು.

"ನಿಮ್ಮ ಮರ್ಜೀನ್ನ ಬೇಕಾದರೆ ಒಪ್ಪಿದೆ, ಮಾರಾಯರೆ. ಎಲ್ಲಿಗೆ ಯಾಕೆ ಕೇಳದೆ ನಡಿ ಎಂದರೆ ನಡೆದುಬಿಡುತ್ತೀರಿ. ನಾನೂ ಸ್ವಲ್ಪ ಹಾಗೆಯೇ, ಮಾರಾಯರೆ. ಒಂದು ಸಾರಿ ನನ್ನ ಮಿತ್ರನೊಬ್ಬನ ಸಂಗಡ ಹೀಗೇ ನಾನು ಶಿವಮೊಗ್ಗಕ್ಕೂ ಹೋಗಿಬಿಟ್ಟೆ. ಪುಟ್ಟ ಹೋದರೆ ಹೋದಲ್ಲೆ ಅಂತ ನಮ್ಮ ಮಾವಂದಿರಿಗೆ ಅಷ್ಟು ಅಸಮಾಧಾನ. 'ಪುಟ್ಟನೊ? ನಮ್ಮ ಪುಟ್ಟ ಬಿಟ್ಟರೆ ಸಿಗ; ಸಿಕ್ಕರೆ ಬಿಡ' ಎನ್ನುತ್ತಾರೆ ಅವರು."

"ಯಾರೊ ನಿಮ್ಮ ಪೈಕಿಯವರ ಮನೆಗೆ ಎಂದಿರಿ ಅಲ್ಲವೆ?"

"ಆಚಾರ್‍ರೆ, ನನ್ನನ್ನು ಏಕವಚನದಲ್ಲೆ ಕರೀರಿ. ನೀವು ನನ್ನ ಬಹುವಚನ ದಲ್ಲಿ ಕರೆಯೋದು ನನ್ನ ಆಯುಸ್ಸಿಗೆ ಒಳ್ಳೆದಲ್ಲ."

"ಆಗಲಿ."

"ಇಲ್ಲೇ ಒಂದು ತೋಟ. ಆ ಅದೇ ನೋಡಿ. ಅದನ್ನು ಗುತ್ತಿಗೆಗೆ ಹಿಡಿದು ನಮ್ಮ ಪೈಕಿಯವಳೊಬ್ಬಳು ಇದ್ದಾಳೆ. ಒಬ್ಬಂಟಿಯಾಗಿ. ಬಲು ಧೈರ್‍ಯದ ಹೆಂಗಸು. ಕೈತೊಳೆದು ಮುಟ್ಟಬೇಕು, ಅಂತಹ ರೂಪು. ನನಗೆ ದೂರದ ಸಂಬಂಧ. ನಿಮ್ಮಂತಹ ವೈದಿಕ ಬ್ರಾಹ್ಮಣರೆಂದರೆ ಬಲು ಮರ್‍ಯಾದೆ. ಅವಳಿಗಷ್ಟು ಮುಖ ತೋರಿಸಿಬಿಟ್ಟು ನಡೆದುಬಿಡುವ. ಇಲ್ಲ ದಿದ್ದರೆ 'ಏನೋ ಪುಟ್ಟ, ಬಂದಿದ್ದಿಯಂತೆ, ಮುಖ ತೋರಿಸಿ ಇದ್ದೀಯೋ ಸತ್ತೀಯೋ ಎಂದು ವಿಚಾರಿಸಲಿಕ್ಕೂ ನಿನಗೆ ಅವಸರವಾಗಿಬಿಟ್ಟಿತ' ಎನ್ನು ತ್ತಾಳೆ. ನೋಡಿ, ನನಗೆ ಯಾರ ಮನಸ್ಸನ್ನೂ ನೋಯಿಸಲಿಕ್ಕೆ ಇಷ್ಟವಿಲ್ಲ. ಮನುಷ್ಯನ ಜೀವ ಅಂದರೆ ಈಗಲೋ, ಇನ್ನೊಂದು ಘಳಿಗೆಯೋ. ಯಾಕೆ ಯಾರನ್ನ ನೋಯಿಸಬೇಕು ಹೇಳಿ. ಅದಕ್ಕೆ ನಾನು ಎಲ್ಲದಕ್ಕೆ ಹಾ ಎಂದು

ಬಿಡುವೆ. ಆದರೂ ನೋಡಿ ಮಾರಾಯರೇ, ನನ್ನ ಹೆಂಡತಿಯೊಬ್ಬಳು ಮಾತ್ರ ತಿಂಗಳಿಗೊಮ್ಮೆ ತೌರಿಗೆ ಹೋಗಬೇಕೆಂದು ದುಂಬಾಲುಬೀಳುತ್ತಾಳೆ. ಮೊದ ಮೊದಲು ಹಾ ಎಂದೆ. ಆಮೇಲೆ ಉಹೂ ಎಂದೆ. ಹೊಡೆದು ನೋಡಿದೆ. ಮತ್ತೆ ಅಯ್ಯೋ ಎನಿಸುತ್ತದೆ, ಹಾಡು ಕೇಳಿರಬೇಕು ನೀವು: 'ಮಡದಿಯ ಹೊಡೆದಾನು! ಮನದೊಳಗೆ ಮರುಗ್ಯಾನು! ಒಳಗೋಗಿ ಕಾಲ ಹಿಡಿದಾನು! ಒಳಗೋಗಿ ಕಾಲ ಹಿಡಿದು ತಾ ಕೇಳ್ಯಾನು! ನಾನ್ಹೆಚ್ಚೊ ನಿನಗೆ ತವನ್ಹೆಚ್ಚೊ' —ಹಾಗೆ ನಾನು."

'ಇಕೊ ಬಂದುಬಿಟ್ಟೆವು' ಎಂದು ತೋಟದ ಮೇಲಕ್ಕಿದ್ದ ಹೆಂಚು ಹೊದೆಸಿದ ಮನೆಗೆ ಬಂದರು. 'ಇದ್ದಾಳೋ ಇಲ್ಲವೋ. ಜಾತ್ರೆಗೆ ಹೋಗಿರಲಿಕ್ಕೂ ಸಾಕು' ಎಂದು ಪುಟ್ಟ, 'ಪದ್ಮಾವತೀ' ಎಂದು ಕರೆದ. ಜಗುಲಿಯ ಮೇಲೆ ಚಾಪೆಯ ಮೇಲೆ ಕೂತ ಪ್ರಾಣೇಶಾಚಾರ್ಯರಿಗೆ 'ಬಂದೆ' ಎನ್ನುವ ಹೆಣ್ಣಿನ ಕೋಮಲಧ್ವನಿ ಕೇಳಿಸಿತು. ಆಪ್ಯಾಯಮಾನವಾದ ಧ್ವನಿ. ಭಯ. ಇವಳು ಯಾರು? ಪುಟ್ಟ ನನ್ನನ್ನು ಇಲ್ಲಿ ಯಾಕೆ ಕರೆದುಕೊಂಡು ಬಂದ. 'ಬಂದಿರಾ' ಎಂದು ಉಪಚಾರ ಹೇಳಿತು ಅದೇ ಧ್ವನಿ. ಪ್ರಾಣೇಶಾಚಾರ್ಯರು ಬೆಚ್ಚಿ ತಿರುಗಿ ನೋಡಿದರು. ಹೊಸಿಲನ್ನು ದಾಟಿ ಕಂಬವನ್ನು ಎತ್ತಿದ ಕೈಯಿಂದ ಹಿಡಿದು ನಿಂತಿದ್ದಳು. ತನ್ನ ಕಣ್ಣು ತಿರುಗಿದ ಕ್ಷಣ ಎದೆಯ ಮೇಲೆ ಸೆರಗೆಳೆದುಕೊಂಡಳು. 'ಯಾರನ್ನು ಕರೆದುಕೊಂಡು ಬಂದಿದ್ದೇನೆ ನೋಡು. ಆಚಾರ್ಯರು' ಎಂದ ಪುಟ್ಟ. 'ಬಂದಿರಾ' ಎಂದಳು ಮತ್ತೊಮ್ಮೆ ನಾಚಿ. 'ಒಂದಿಷ್ಟು ಗಂಗಾಮೃತ ಕೊಡಲೆ?' ಎಂದಳು. 'ಹಾಲುಹಣ್ಣಾದರೂ ತೆಗೆದುಕೊಳ್ಳಿ' ಎಂದು ಆಗ್ರಹಮಾಡಿ ಒಳಕ್ಕೆ ಹೋದಳು. ಪ್ರಾಣೇಶಾಚಾರ್ಯರ ಮೈ ಬೆವತುಬಿಟ್ಟಿತು. ಅನುಮಾನವೇ ಇಲ್ಲ: ಮಾಲೇರರವಳು. ಒಂಟಿಯಾಗಿರುವವಳು. ನನ್ನನ್ನಿಲ್ಲಿ ಯಾಕೆ ಪುಟ್ಟ ಕರೆದುಕೊಂಡು ಬಂದ? ಪುಟ್ಟನ ಮಾತೇ ಇಲ್ಲ. ವಟಗುಟ್ಟುತ್ತಿದ್ದವ ಸುಮ್ಮನಾಗಿಬಿಟ್ಟಿದ್ದಾನೆ. ತನ್ನ ಬೆನ್ನಿನ ಹಿಂದೆ ಎರಡು ಕಣ್ಣುಗಳು ನೋಡುತ್ತಿವೆ ಎಂದು ದಿಗಿಲಾಯಿತು. ಆ ನೋಡುವ ಕಣ್ಣುಗಳಿಗೆ ತಾನು ಬಚ್ಚಿಟ್ಟ ಪದಾರ್ಥವಾಗಿಬಿಟ್ಟಿದ್ದೇನೆ ಎನ್ನಿಸಿತು. ತಿರುಗಿ ನೋಡಲು ಹೆದರಿಕೆ. ಆಸೆ. ಆ ಕಣ್ಣುಗಳು ಏನನ್ನು ಹೇಳುವುವೊ? ಕಣ್ಣು ಕಣ್ಣನ್ನು ಸಂಧಿಸಿದ ಕೂಡಲೆ ಅಮೂರ್ತವಾದದ್ದು ಏನು ರೂಪ ತಾಳಿಬಿಡುವುದೋ? ನೀಳವಾದ ಕಪ್ಪು ಕಣ್ಣುಗಳು. ಎದೆಯ ಮೇಲೆ ಇಳಿಬಿಟ್ಟ ಕೃಷ್ಣಸರ್ಪದ ಜಡೆ. ಗಳದ ಮೇಲೆ

ತೂಗಿದ ಹುಡುಗಿ. ಚೂರಿ-ರೆಕ್ಕೆ-ಕೊಕ್ಕು-ಪುಕ್ಕ. ಕಾಡಿನಲ್ಲಿ ಕತ್ತಲಿನಲ್ಲಿ ಒಡ್ಡಿದ ಪುಷ್ಪ ಮೊಲೆ. ಬೆಳ್ಳಿಯ ಮಣ್ಣಿನ ಬಣ್ಣದ ನಗ್ನ ಮೊಲೆ. ಎಲ್ಲವನ್ನೂ ಬಿಚ್ಚಿಟ್ಟ ಪದಾರ್ಥದಂತೆ ನೋಡಿಬಿಡುವ ರೆಪ್ಪೆ ಮಿಟುಕದ ಕಣ್ಣು ಬೆನ್ನಿನ ಹಿಂದೆ. ಕೃಷ್ಣಸರ್ಪದ ಕಣ್ಣಿಗೆ ಪಕ್ಷಿ ಪರವಶ. ಭೀತಿ. ತಿರುಗಿದರು. ನಿಜ. ತಟ್ಟೆಯನ್ನು ಕೈಯಲ್ಲಿ ಹಿಡಿದು ಕದ್ದು ನೋಡುತ್ತಿದ್ದ ಕಣ್ಣುಗಳು. ಬಾಗಿಲಿನಿಂದ ಇಣುಕಿ ನೋಡುತ್ತಿದ್ದ ಕಣ್ಣುಗಳು ಸರ್ರೆಂದು ಕತ್ತಲಿಗೆ. ಹೋದವು. ಬಳೆ ಸದ್ದಾಯಿತು. ಮತ್ತೆ ಬೆಳಕಿಗೆ ಬಂದಳು. ನೆಮ್ಮದಿ. ದೇಹದಲ್ಲಿ ಆಸೆಯನ್ನು ಕೊರೆಯುತ್ತ ತಿರುಗಿದ ಒಂದು ನಿರೀಕ್ಷೆ. ತಟ್ಟೆಯನ್ನಿಡಲು. ಬಗ್ಗಿದ್ದಾಗ ಜಾರಿದ ಸೆರಗು, ಮುಂದಕ್ಕೊಡ್ಡಿದ ಮೊಲೆ. ಭಾರವಾಗಿ ನೋಡಿದ ಬೇಡಿದ ಕಣ್ಣು. ಎದೆಯಲ್ಲಿ ಬೆಂಕಿಯ ಸಂಚಾರ. ಅವರ ಕಣ್ಣುಗಳು ಕುದಿಯುತ್ತ ನೋಡಿದುವು. ಬೆನ್ನಿನ ಹಿಂದಿನ ಕಣ್ಣುಗಳಿಗೆ ಬಿಚ್ಚಿಟ್ಟ ಪದಾರ್ಥವಾಗಿಬಿಟ್ಟ ಭಾವನೆ ಮಾಯವಾಯಿತು. ಈಗ ತಾವೇ ಆ ಕಣ್ಣುಗಳು. ತತ್ತ್ವಮಸಿ. 'ಯಾವ ಕಡೆಯವರೊ' ಎಂದಳು, ತೇಜಸ್ವಿಗಳಂತೆ ಕಾಣುತ್ತಿದ್ದ ಆಚಾರ್ಯರನ್ನು ನೋಡಿ ಪದ್ಮಾವತಿ. 'ಕುಂದಾಪುರದವರು' ಎಂದ ಪುಟ್ಟ. 'ಶೀನಪ್ಪಯ್ಯನವರ ಪರಿಚಯವಿದೆ' ಎಂದು ಸುಳ್ಳು ಹೇಳಿದ. 'ದೇವಸ್ಥಾನದ ವೈವಾಟು ನೋಡುತ್ತಾರೆ' ಎಂದು ಇನ್ನೊಂದು ಸುಳ್ಳು ಹೇಳಿದ. 'ವಸೂಲಿ ಕೆಲಸಕ್ಕೆ ಈ ಪ್ರಾಂತಕ್ಕೆ ಬಂದವರು' ಎಂದು ತನಗಿನ್ನೊಂದು ಹೊಸ ವ್ಯಕ್ತಿತ್ವವನ್ನೇ ಕೊಟ್ಟುಬಿಟ್ಟ. ಅಪರಿಚಿತರ ಕಣ್ಣುಗಳಲ್ಲಿ ಹೊಸ ರೂಪ, ಹೊಸ ವೇಷ. ನಾನು ನಿಜವಾಗಿ ಯಾರೆಂದು ಅನುಮಾನ ಬರುವಷ್ಟು ಒಂದು ದಿನದಲ್ಲೇ ಬೇರೆ ಬೇರೆ ವ್ಯಕ್ತಿಯಾಗಿಬಿಟ್ಟೆ. ಆಗಲಿ. ನಡೆದದ್ದು ನಡೆಯಲಿ. ಕಾಯುತ್ತ ಕೂತರು. ನುರಿದ ಪಕ್ಷಿ, ನುರಿಸಿಕೊಂಡ ಪಕ್ಷಿ. ಚೂರಿ. ಹಸಿಹಸಿ ಪ್ರಾಣವನ್ನು ಮುಟ್ಟಿಬಿಟ್ಟಂತೆ. ಕಿಟಾರನೆ ಕಿರುಚಿ ನಿಶ್ಚೇಷ್ಟಿತಳಾಗಿ ಬಿದ್ದ ಭಾಗೀರಥಿ. ಮತ್ತೆ ಬೆಂಕಿಯಲ್ಲಿ ಧಗಧಗನೆ ಉರಿದ ತನ್ನ ತಪೋಭೂಮಿ. ಕಳೆದುಕೊಂಡೆ. ಭ್ರಷ್ಟನಾದೆ. ಈ ಕಣ್ಣುಗಳಿಗೆ ಬಿದ್ದು ಪ್ರೇತತ್ವದ ತ್ಯಾಗ, ಪ್ರಾಯಶ್ಚಿ.

ಪದ್ಮಾವತಿ ತನ್ನ ಕಣ್ಣಿಗೆ ನೇರವಾಗಿ ಸಿಕ್ಕದಂತೆ ಹೋಗಿ ಬಾಗಿಲಿನ ಬುಡದಲ್ಲಿ ಕೂತಳು. ಹಾಗೆ ಕೂತು ತನ್ನನ್ನವಳು ನೋಡುತ್ತಿದ್ದಾಳೆಂದು ಪ್ರಾಣೇಶಾಚಾರ್ಯರಿಗೆ ಮತ್ತೆ ಕಸಿವಿಸಿಯಾಗತೊಡಗಿತು. ಕತ್ತನ್ನು ಧೈರ್ಯ ತಂದು ತಿರುಗಿಸಿದರು. ಎದೆ ಹೊಡೆದುಕೊಳ್ಳುತ್ತಿತ್ತು. ಪದ್ಮಾವತಿ ಎದ್ದು

ಎಲೆಯಡಿಕೆ ತಟ್ಟೆಯನ್ನು ತಂದಿಟ್ಟಳು. ಪುಟ್ಟ ಎಲೆಗೆ ಸುಣ್ಣ ಹಚ್ಚಿ ಬೆರಳು ಗಳ ಸಂದಿ ಸಿಕ್ಕಿಸಿ, ಅಡಿಕೆಯನ್ನು ಬಾಯಲ್ಲಿ ಎಸೆದು ಮಾತಿಗೆ ಪ್ರಾರಂಭಿಸಿದ. ಪದ್ಮಾವತಿ ಮತ್ತೆ ಬಾಗಿಲಿನ ಬುಡದಲ್ಲಿ ಕೂತಳು. ಪುಟ್ಟ ಹೇಳಿದ :

"ಆಚಾರ್ರು ದಾರಿಯಲ್ಲಿ ಸಿಕ್ಕರು. ಹಾಗೆ ಹರಟುತ್ತ ಬಂದೆವು. ಕುಂದಾಪುರದ ಮಾರ್ಗವಾಗಿ ಹೊರಟವರು ಇವರು. ನಾನು ಹೇಳಿದೆ—ಇವತ್ತು ರಾತ್ರೆ ಇಲ್ಲೆ ತಂಗಿದ್ದು ನಾಳೆ ತೀರ್ಥಹಳ್ಳಿಗೆ ಹೋಗಿ ಬಸ್ಸು ಹಿಡಿದರಾಯಿತು ಅಂತ, ಅಲ್ಲವೆ ?"

ಪದ್ಮಾವತಿ ನಾಚಿಕೆಯಲ್ಲಿ ಒತ್ತಾಯಪಡಿಸುತ್ತ ಅಂದಳು :

"ಖಂಡಿತ. ಇಲ್ಲೆ ರಾತ್ರೆ ಮಲಗಿದ್ದು ಹೋದರಾಯಿತು."

ಪ್ರಾಣೇಶಾಚಾರ್ಯರಿಗೆ ಮೂರ್ಛೆ ಬಂದಂತಾಯಿತು. ಕಿವಿ ಗವ್ವೆಂದು ಕೈ ಬೆವತಿತು. ಬೇಡ. ಬೇಡ. ಇವತ್ತು ಬೇಡ. ನಾಳೆ ನಿಶ್ಚಯಮಾಡಿಬಿಡಬೇಕಾದ ಗಳಿಗೆ ಈ ಕ್ಷಣದಲ್ಲೇ ಪ್ರಾಪ್ತವಾಗಿಬಿಡಬಹುದೆಂದು ನಾನು ಎಣಿಸಿರಲಿಲ್ಲ. ಇವತ್ತು ಬೇಡ. ನನಗೆ ಸೂತಕ. ಹೆಂಡತಿಯನ್ನು ಸುಟ್ಟು ಬಂದಿದ್ದೇನೆ. ನಾರಣಪ್ಪನ ಶವವನ್ನಿನ್ನೂ ತೆಗೆದಿಲ್ಲ. ಕೊಳೆಯುತ್ತಿದೆ. ಹದ್ದುಗಳು ಮನೆಯ ಮೇಲೆ ಬಂದು ಕೂತಿವೆ. ಹೇಳಿಬಿಡಬೇಕು. ಸತ್ಯ ನುಡಿದುಬಿಡಬೇಕು. ಇಲ್ಲಿಂದೆದ್ದು ಧಾವಿಸಿಬಿಡಬೇಕು. ಅಂತರ್ಧಾನವಾಗಿಬಿಡಬೇಕು. ಆದರೆ ದೇಹ ಅಲ್ಲಿ ಗಟ್ಟಿಯಾಗಿ, ಪದ್ಮಾವತಿ ನಿರೀಕ್ಷೆಯಲ್ಲಿ ನೋಡುತ್ತಿರುವ ಪದಾರ್ಥವಾಗಿ ಕೂತುಬಿಟ್ಟಿತು. ಪುಟ್ಟ ಹೇಳಿದ :

"ಸರಿ ಹಾಗಾದರೆ. ಇವರದ್ದಿನ್ನೂ ಊಟವಾಗಿಲ್ಲ. ದೇವಸ್ಥಾನದಲ್ಲಿ ಊಟ ಮಾಡಿ ಬರುತ್ತಾರೆ. ಇಲ್ಲಿಗೆ ಧರ್ಮಸ್ಥಳದ ಮೇಳ ಬಂದಿದೆಯಲ್ಲವೆ? ನೋಡಲು ಹೋಗುತ್ತೀಯ ?"

"ಇಲ್ಲವಪ್ಪ. ಸಾಯಂಕಾಲ ಹೋಗಿ ದೇವರ ದರ್ಶನಮಾಡಿ ಬಂದುಬಿಡುವೆ. ನಿಮಗಾಗಿ ಕಾಯುವೆ."

ತಾನು ಹಾ ಹೂ ಎನ್ನದೆ ಪುಟ್ಟ-ಪದ್ಮಾವತಿಯರ ನಡುವೆ ತನ್ನ ಬಾಳಿನ ನಿಶ್ಚಯವಾಗಿಬಿಟ್ಟಿತು. 'ಏಳಿರಿ' ಎಂದ ಪುಟ್ಟ. ಆಚಾರ್ಯರು ಎದ್ದು ನಿಂತರು. ಪದ್ಮಾವತಿಯನ್ನು ನೋಡಿದರು. ಸ್ನಾನಮಾಡಿ ಎಣ್ಣೆ ಹಾಕದ ಕೂದಲು. ಮಾಂಸದಿಂದ ಪುಷ್ಟವಾದ ತೊಡೆ, ನಿತಂಬ, ಎದೆ, ನೀಳ, ಎತ್ತರ ರೂಪ. ಕಣ್ಣುಗಳಲ್ಲಿ ಹೊಳಪು. ನಿರೀಕ್ಷೆ. ಕಾದಿದೆ. ಪುಷ್ಪವತಿಯಾಗಿ ಐನೀರಿನ ಸ್ನಾನಮಾಡಿರಬೇಕು. ಉಸಿರಿಗೆ ಮೊಲೆಗಳು ಉಬ್ಬಿ ತಗ್ಗುತ್ತಿವೆ.

ಒತ್ತಿಕೊಂಡರೆ ಕತ್ತಲಿನಲ್ಲಿ ಪುಟಿಯುತ್ತವೆ. ಹುಲ್ಲಿನ ಸುಗಂಧಿಯ ವಾಸನೆ. ತೇರು ತೇರು ಮಿಣುಕುಹುಳ. ಬೆಂಕಿ—ಕಟ್ಟಿಗೆಗೆ ಹತ್ತಿ, ಮತ್ತೆ ಕೈ ಕಾಲಿಗೆ ಹತ್ತಿ, ಹೊಟ್ಟೆಯಲ್ಲಿ ಪಚಪಚ ಬೆಂದು, ಚೀರಿ, ಸಿಡಿದು, ಬುರುಡೆಯನ್ನು ಚಳ್ಳನೆ ಸೀಳಿ ಎದೆಗೆ ನಾಲಗೆ ಚಾಚಿದ ಅಗ್ನಿ. ಇನ್ನೂ ಸುಡದ ನಾರಣಪ್ಪನ ಶವ. ಮಹಾಬಲ ಹೇಗೆ ಗುಡಿಗುಡಿ ಸೇದುತ್ತ ಚಾವಡಿಯ ಮೇಲೆ ಕೂತುಬಿಟ್ಟ. ಬಿದಿರು ಗಳದ ಮೇಲೆ ತೂಗಿತು, ತುಯ್ಯಿತು. ಯಾಜ್ಞವಲ್ಕ್ಯರು ಕರೆದು ಹೇಳಿದರು : ಪ್ರೀತಿ. ಯಾರ ಮೇಲೆ ಪ್ರೀತಿ, ಹೆಂಡತಿಯೆಂಬ ಪ್ರೀತಿ, ನನ್ನ ಮೇಲೇ ನನ್ನ ಪ್ರೀತಿ, ದೇವರೆಂಬ ಪ್ರೀತಿ, ನನ್ನ ಮೇಲೆ ನನ್ನ ಪ್ರೀತಿ. ಮೂಲ ಹುಡುಕುವೆ. ಗೆಲ್ಲುವೆ. ನೋಡಿದರು, ಮೆಚ್ಚಿದರು, ದೋಣಿಯಲ್ಲಿ ವ್ಯಾಸ ಕಮಂಡಲ ಹಿಡಿದು ಹುಟ್ಟಿದ. ನಡೆದುಬಿಟ್ಟ. "ಹೋಗಿಬನ್ನಿ ಹಾಗಾದರೆ. ನಾನು ಕಾದಿರುವೆ" ಎಂದಳು ಪದ್ಮಾವತಿ. ಮುಖ್ಯವಾಗಿ ಮಾರುತಿ ಕೈಕೊಟ್ಟುಬಿಟ್ಟ. ಮಹಾಬಲ ಮೋಸ ಮಾಡಿದ. ನಾರಣಪ್ಪ ಛಚ್ಛು ತೀರಿಸಿಕೊಂಡ. ಬ್ರಾಹ್ಮಣರು ಬಂಗಾರಕ್ಕಾಗಿ ಆಸೆಪಟ್ಟರು. ಚಂದ್ರಿ ಕತ್ತಲಲ್ಲಿ ನಿಂತಳು—ಕೊಟ್ಟಳು—ನಡೆದುಬಿಟ್ಟಳು. ಭಾಗೀರತಿ ಚೀರಿ ಸತ್ತುಬಿಟ್ಟಳು. ಪುಟ್ಟ ಬೆನ್ನಿನ ಮೇಲೆ ಕೈಯಿಟ್ಟ. ಗದ್ದೆಯಂಚಲ್ಲಿ ನಿಲ್ಲಿಸಿದ. "ಏನೆನ್ನುತ್ತೀರಿ" ಎಂದ. "ನಾನು ಊಹಿಸಿದಂತೆಯೇ ಆಯಿತು" ಎಂದ. "ಇದು ಕಳಪೆ ಜನವೆಂದು ತಿಳಿಯಬೇಡಿ, ಮಾರಾಯರೆ. ಶೂದ್ರರಾರೂ ಸುತ್ತಮುತ್ತ ಸುಳಿದಿದ್ದಿಲ್ಲ. ಅಂತಿಂಥ ಸಾಮಾನ್ಯ ಬ್ರಾಹ್ಮಣರಿಗೂ ಒಪ್ಪುವ ಜೀವವಲ್ಲ. ದುಡ್ಡಿಗಲ್ಲ, ಕಾಸಿಗಲ್ಲ. ನೀವೇ ನೋಡಲಿಲ್ಲವೆ? ತೋಟವಿದೆ. ಋಷಿಗಳಿಗೂ ಮನಸ್ಸಾಗಿಬಿಡಬೇಕು—ಹಾಗಿದ್ದಾಳೆ. ಮತ್ತಿಲ್ಲಿ ನೀವು ನಾನು ಅಂದ ಸುಳ್ಳನ್ನು ಬಯಲು ಮಾಡಿಬಿಡುತ್ತೀರೋ ಎಂದು ಕಂಗಾಲಾಗಿದ್ದೆ. ಒಪ್ಪಿಗೆಯಾಯಿತು ತಾನೆ? ಈ ಪುಟ್ಟ, ಸ್ನೇಹಕ್ಕೆ ಏನನ್ನಾದರೂ ಮಾಡು ವವ. ಪರೋಪಕಾರಿ ಪುಟ್ಟ ಎಂಬೋದು ನನ್ನ ಬಿರುದು" ಎಂದು ನಗುತ್ತ ಬೆನ್ನುತಟ್ಟಿದ.

ಗದ್ದೆ ದಾಟಿ, ಬೇಲಿ ದಾಟಿ, ಸಾರ ಹಾಯ್ದು, ಓಣಿಯಲ್ಲಿ ನಡೆದು ಮತ್ತೆ ಜಾತ್ರೆಯ ಗದ್ದಲಕ್ಕೆ. ತೇರಿನ ಸುತ್ತ ಜನ. ಸೋಡದಂಗಡಿಯ ಸುತ್ತ ಜನ. ಮಂಗನನ್ನು ಕುಣಿಸುವವನ ಸುತ್ತ ಜನ. ಮಕ್ಕಳ ಪೀಪಿ, ಬೆಲೂನು. ಈ ನಡುವೆ ಒಬ್ಬ ಬೇತಾಳ, ಪಿಶಾಚಿ. ಡಂಗುರ ಸಾರುತ್ತ ಒಬ್ಬ ಜನ ಸಂದಣಿಯ ನಡುವೆ ನಿಂತು ಕೂಗಿ ಕೂಗಿ ಹೇಳಿದ : 'ಶಿವಮೊಗ್ಗೆಯಲ್ಲಿ ಪ್ಲೇಗು

ಮಾರಿಖಾಹಿಲೆ: ಶಿವಮೊಗ್ಗೆಗೆ ಹೋಗೋರು ಇದ್ದರೆ ತೀರ್ಥಹಳ್ಳೀಲಿ ಇನಾಕ್ಯುಲೇಷನ್ ಮಾಡಿಸಿಕೋಬೇಕು; ಮುನಿಸಿಪಾಲಿಟಿಯಿಂದ ಈ ಎಚ್ಚರಿಕೆ.' ಜನ ಕುತೂಹಲದಿಂದ ಕೇಳಿ ಮತ್ತೆ ನೋಡ ಕುಡಿದರು. ಮಂಗನ ಕುಣಿತಕ್ಕೆ ಗಹಿಗಹಿಸಿ ನಕ್ಕರು. ಒಬ್ಬ ಉರ್ದು-ಕನ್ನಡದಲ್ಲಿ ಮಾತಾಡುವ ದ್ವಿಭಾಷಾಚತುರ ನೆರದಿದ್ದವರಿಗೆ ಮದ್ದನ್ನು ಮಾರುತ್ತಿದ್ದ: "ಬರೆ ಒಂದಾಣೆ, ಏಕ್ ಆಣಾ ಏಕ್ ಆಣಾ. ಹೊಟ್ಟೆನೋವಿಗೆ, ಕಿವಿನೋವಿಗೆ, ಬಹುಮೂತ್ರಕ್ಕೆ, ಕಾಲುವಾತಕ್ಕೆ, ಮಕ್ಕಳ ಖಾಹಿಲೆಗೆ, ಮುಟ್ಟಿನ ದೋಷಕ್ಕೆ, ಕಜ್ಜಿಗೆ, ಶೀತ ಜ್ವರಕ್ಕೆ ಈ ಮಾತ್ರೆ. ಮುಲೆಯಾಳಿ ಪಂಡಿತರು ಮಂತ್ರಿಸಿ ಮಾಡಿದ ಈ ಮಾತ್ರೆ ಕೇವಲ ಒಂದಾಣೆ. ಏಕ್ ಆಣಾ ಏಕ್ ಆಣಾ...." ಬೊಂಬಾಯಿ ಪೆಟ್ಟಿಗೆಯವ ಕುಣಿಯುತ್ತಿದ್ದ. "ತಿರುಪತಿ ತಿಮ್ಮಪ್ಪನ್ನ ನೋಡು! ಬೊಂಬಾಯಿ ಸೂಳೆ ನೋಡು." ಮೇಲೆ ಮರದ ರೆಂಬೆಯೊಂದಕ್ಕೆ ಮತ್ತು ಕೆಳಗೆ ನೆಲಕ್ಕೆ ಬಿಗಿದಿದ್ದ ದಪ್ಪನೆಯ ಮಿಣಿಯ ಇಳಿಜಾರಿನಲ್ಲೊಬ್ಬ ದೊಂಬ ಜರ್‍ರನೆ ಜಾರಿಬಿಟ್ಟು ನಿಂತು, ಸಲಾಮು ಮಾಡಿದ. ಬೆಲೂನನ್ನು ಬೇಡಿದ ಒಬ್ಬ ಹುಡುಗನನ್ನ ತಾಯಿ ಹೊಡೆದಳು. ಹುಡುಗ ಅತ್ತ. ಕಾಫಿ ಹೋಟಲಿನಿಂದ ಗ್ರಾಮಾಫೋನ್ ಹಾಡು. ಬ್ಯಾರಿಯ ಅಂಗಡಿಯಲ್ಲಿ ಬಣ್ಣ ಬಣ್ಣದ ಮಿಠಾಯಿ. ಗೌಡರ, ಹೆಗ್ಗಡತಿಯರ ರಾಗವಾದ ಮಾತು. ತೇರಿನ ಮೇಲೆ ಬಡಬಡ ಮಂತ್ರ. ಸ್ಮಾರ್ತ ಬ್ರಾಹ್ಮಣರ ವಟವಟ ಮಾತು. ಈಗ ಇಲ್ಲಿ ಏತನ್ಮಧ್ಯೆ ನಿಶ್ಚಯಿಸಬೇಕು. ತಾನು ಇಪ್ಪತ್ತೈದು ವರ್ಷದ ಸಂಸ್ಕಾರವನ್ನು ಬಿಟ್ಟು ಈ ಲೋಕದವನಾಗಿಬಿಡುವ ನಿರ್ಧಾರಮಾಡಬೇಕು. ಇಲ್ಲ. ಮೊದಲು ನಾರಣಪ್ಪನ ಶವಸಂಸ್ಕಾರವಾಗಬೇಕು. ಆಮೇಲೆ ನಿಶ್ಚಯ. ಗುರುಗಳ ಅಪ್ಪಣೆ ಪಡೆದು ಇವತ್ತು ಗರುಡ ಲಕ್ಷ್ಮಣರು ಬಂದಿರುತ್ತಾರೆ. ಗುರುಗಳು ಬೇಡವೆಂದಿದ್ದರೆ ನಾನೇನು ಹೇಳಬೇಕು. ಮತ್ತದೇ ಸಂಕಟ.

ದೇವಸ್ಥಾನದ ಸಮೀಪದಲ್ಲಿ ನಿಂತರು. ಕುರುಡನೊಬ್ಬ ಶ್ರುತಿಪೆಟ್ಟಿಗೆ ಹಿಡಿದು 'ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ' ಎಂದು ದಾಸರ ಪದವನ್ನು ಹಾಡುತ್ತಿದ್ದ. ಪುಟ್ಟ ಅವನ ತಟ್ಟೆಗೆ ಬಿಲ್ಲೆ ಹಾಕಿದ್ದನ್ನು ಕಂಡು, ಮೋಟು ಕೈಕಾಲಿನ ಇನ್ನೊಬ್ಬ ಭಿಕ್ಷುಕ ತೆವಳುತ್ತ ಬಂದು ಮೊಂಡುಕೈಯನ್ನು ಆಡಿಸುತ್ತ 'ಕೈಕಾಲಿಲ್ಲದವ' 'ಕೈಕಾಲಿಲ್ಲದವ' ಎಂದು ಗೋಗರೆದು, ಅಂಗಾತ ಮಲಗಿ, ಕಾಲೆತ್ತಿ ಕೈಯೆತ್ತಿ ಬಡಿದುಕೊಳ್ಳುತ್ತ, ಬೆರಳುಗಳು ಕೊಳೆತು ಗುಜ್ಜಾದ ಜಾಗಗಳನ್ನು ಪ್ರದರ್ಶಿಸಿದ. ಪ್ರಾಣೇಶಾಚಾರ್ಯರಿಗೆ ತೊನ್ನಿನಲ್ಲಿ

ಕರಗಿಹೋಗುತ್ತಿದ್ದ ದೇಹವನ್ನು ಕಂಡು ನಾರಣಪ್ಪನ ಸಂಸ್ಕಾರವಿಲ್ಲದ ಕೊಳೆಯುವ ಹೆಣ ಮರುಕಳಿಸಿತು. ಪುಟ್ಟ ಇನ್ನೊಂದು ಬಿಲ್ಲೆಯೊಗೆದ. ಇನ್ನಷ್ಟು ದೇಹಗಳು ನುಗುಚುತ್ತ ತೆವಳುತ್ತ ಹೊಟ್ಟೆ ಹೊಡೆದುಕೊಳ್ಳುತ್ತ ಬಾಯಿ ಬಡಿದುಕೊಳ್ಳುತ್ತ ನುಗ್ಗಿಬಂದವು. 'ಹೋಗುವ, ಹೋಗುವ' ಎಂದರು ಆಚಾರ್ಯರು.

"ನೀವು ಹೋಗಿ ಊಟ ಮಾಡಿ ಬನ್ನಿ" ಎಂದ ಪುಟ್ಟ.

"ನೀನೂ ಬಾ" ಎಂದರು ಪ್ರಾಣೇಶಾಚಾರ್ಯರು. ಥಟ್ಟನೇ ಅವರಿಗೆ ಜೊತೆಯಲ್ಲೊಬ್ಬನಿಲ್ಲದೆ ದೇವಸ್ಥಾನದ ಪ್ರಾಂಗಣದಲ್ಲಿ ಊಟಕ್ಕೆ ಕೂತ ಬ್ರಾಹ್ಮಣರ ಕಣ್ಣಿಗೆ ಬೀಳಲು ದಿಗಿಲಾಯಿತು. ಜೊತೆಗೆ ಪುಟ್ಟನಿಲ್ಲದೆ ಕದಲಲಾರೆ ಎನ್ನಿಸಿತು. ಹೀಗೇ ಒಂಟಿಯಾಗಿರಲಾರೆ ಎಂದೆನ್ನಿಸಿದ್ದೆ ಇಲ್ಲ ಅವರಿಗೆ ಈ ಮುಂಚೆ.

"ಒಳ್ಳೆ ಹೇಳುತ್ತೀರಿ. ಮಾಲೇರರವ ನಾನೆಂಬುದನ್ನು ಮರತೇಬಿಟ್ಟಿರ" ಎಂದ ಪುಟ್ಟ ಅದಕ್ಕೆ.

"ಚಿಂತೆಯಿಲ್ಲ, ಬಾ" ಎಂದರು.

"ಹಾಸ್ಯ ಮಾಡುತ್ತೀರೊ ಹೇಗೆ? ಈ ಮೇಳಿಗೆ ತುಂಬ ನನ್ನ ಪರಿಚಯದವರು ಮಾರಾಯರೆ. ಇಲ್ಲವಾದರೆ ಒಂದು ಕೈ ನೋಡಿಬಿಡುತ್ತಿದ್ದೆ. ಓಯ್, ನಾನು ಇದನ್ನ ಮಾಡಿದ್ದಿಲ್ಲವೆಂದುಕೊಳ್ಳಬೇಡಿ. ಉಡುಪಿಯಲ್ಲಿ ಚೌಕಿಯ ಊಟ ಮಾಡಿದ್ದುಂಟು. ಅಲ್ಲಿ ಕೇಳೋವರು ಯಾರು? ಓಯ್, ಸೋನೆಗಾರನ ಹುಡುಗನೊಬ್ಬ ಸುಳ್ಳು ಹೇಳಿ ಮಠದಲ್ಲಿ ಕೆಲಸಕ್ಕೆ ಸೇರಿದ್ದು ಗೊತ್ತಿಲ್ಲವೆ ನಿಮಗೆ. ಹಾಗೆ ನೋಡಿದರೆ ನಮಗೇನು ಜನಿವಾರವಿಲ್ಲವೆ? ಮಾತಿಗೆ ಹೇಳಿದೆ ಅಷ್ಟೆ. ನಿಮ್ಮ ಜೊತೆ ಊಟಮಾಡುವಷ್ಟು ಸೊಕ್ಕಿನವನಲ್ಲಪ್ಪ ನಾನು. ನೀವು ಹೋಗಿಬನ್ನಿ. ನಾನು ಇಲ್ಲೇ ಕಾದಿರುವೆ."

ಮುತ್ತಿದ್ದ ಭಿಕ್ಷುಕರ ಆಲಾಪವನ್ನು ಸಹಿಸಲಾರದೆ ಪ್ರಾಣೇಶಾಚಾರ್ಯರು ದಿಗ್ಭ್ರಮೆಯಲ್ಲಿ ಒಳಗೆ ನಡೆದುಬಿಟ್ಟರು.

ದೇವಸ್ಥಾನದ ನಾಲ್ಕು ಜಗುಲಿಯ ಮೇಲೂ ಬಾಳೆಲೆ ಹಾಕಿತ್ತು. ಎಲೆಯೊಂದರ ಮುಂದೆಯಂತೆ ಅಶನಾರ್ಥಿ ಬ್ರಾಹ್ಮಣರು ಕೂತಿದ್ದರು. ಅವರೆಲ್ಲರ ಮುಖಗಳನ್ನು ನೋಡುತ್ತಿದ್ದಂತೆ ಪ್ರಾಣೇಶಾಚಾರ್ಯರ ಎದೆ ಧಸಕ್ಕೆಂದುಬಿಟ್ಟಿತು. ಪತ್ತೆಯಾಗಿಬಿಟ್ಟರೆ? ಓಡಿಹೋಗಿಬಿಡುವ ಎನ್ನಿಸಿತು. ಆದರೆ ಕಾಲನ್ನೆತ್ತಲೂ ಸಾಧ್ಯವಾಗಲಿಲ್ಲ. ನಿಶ್ಚೇಷ್ಟಿತರಾಗಿ ನಿಂತು ಯೋಚಿ

ಸಿದರು : ನಾನೇನು ಮಾಡುತ್ತಿದ್ದೇನೆ? ಎಂತಹ ಚಾಂಡಾಲ ಕೃತ್ಯ ಮಾಡುತ್ತಿದ್ದೇನೆ? ಸೂತಕದಲ್ಲಿರುವ ನಾನು ತಿಳಿದೂ ತಿಳಿದೂ ಈ ಬ್ರಾಹ್ಮಣರ ಜೊತೆ ಊಟ ಮಾಡಲೆ? ಅವರೆಲ್ಲರಿಗೆ ಮೈಲಿಗೆ ಮಾಡಲೆ? ಮೈಲಿಗೆಯಾದರೆ ರಥ ಮುಂದಕ್ಕೆ ಹೋಗುವುದಿಲ್ಲೆಂದು ನಂಬಿದ ಜನ ಇವರು. ಈಗ ನಾನಿಲ್ಲಿ ಕೂತು ಊಟಮಾಡಿದರೆ ನಾರಣಪ್ಪ ಗಣಪತಿಯ ಮೀನನ್ನು ಹಿಡಿದು ಬ್ರಾಹ್ಮಣ್ಯ ನಾಶಮಾಡಿದಷ್ಟೇ ಭ್ರಷ್ಟ ಕೆಲಸ ಮಾಡಿದಂತೆ. ಊಟ ಮಾಡುತ್ತಿರುವಾಗಲೆಲ್ಲಾದರೂ ತಾನು ಪ್ರಾಣೇಶಾಚಾರ್ಯನೆಂದು ಪತ್ತೆಯಾಗಿಬಿಟ್ಟರೆ....ತನಗೆ ಸೂತಕವೆಂದು ತಿಳಿದುಬಿಟ್ಟರೆ....ಕೋಲಾಹಲವಾಗಿಬಿಡುತ್ತದೆ. ಇಡಿಯ ರಥೋತ್ಸವವೇ ನಿಂತುಬಿಡುತ್ತದೆ. ಸಾವಿರ ಕಣ್ಣುಗಳು ನನ್ನನ್ನು ನುಂಗಿಬಿಡುತ್ತವೆ. "ಇಲ್ಲೊಂದು ಎಲೆಯಿದೆ. ಬನ್ನಿ, ಬನ್ನಿ." ಬೆಚ್ಚಿದರು. ನೋಡಿದರು. ತುದಿಯಲ್ಲಿ ಕೂತ ಬ್ರಾಹ್ಮಣನೊಬ್ಬ ಕರೆಯುತ್ತಿದ್ದಾನೆ, ಏನು ಮಾಡಲಿ? ಪರಮಾತ್ಮ, ಏನು ಮಾಡಲಿ? ನಿಂತೇ ಇದ್ದರು. "ಕರೆದದ್ದು ಕೇಳಿಸಲಿಲ್ಲವೆ?" ಕರೆದ ಬ್ರಾಹ್ಮಣ ನಗುತ್ತ ಕೈ ಹಿಡಿದ. ಖಾಲಿಯಿರುವ ಎಲೆ ತೋರಿಸಿದ. "ನೋಡಿ, ನಿಮಗೆಂದು ಎಲೆಯ ಮೇಲೆ ಲೋಟವನ್ನಿಟ್ಟುಬಂದೆ. ಇಲ್ಲವಾದರೆ ಮುಂದಿನ ಪಂಕ್ತಿಗೆ ನೀವು ಕಾಯಬೇಕಾಗಿತ್ತು" ಎಂದ. ಆಚಾರ್ಯರು ಯಾಂತ್ರಿಕವಾಗಿ ಅವನ ಜೊತೆ ಹೋಗಿ ಕೂತರು. ತಲೆ ಸುತ್ತತೊಡಗಿತು.

ಮನಸ್ಸನ್ನು ಸ್ತಿಮಿತಕ್ಕೆ ತರಲು ಯತ್ನಿಸುತ್ತ ಯೋಚಿಸಿದರು :

ದೇವರೆ, ಈ ಭೀತಿಯ ಮೂಲವೆಲ್ಲಿ? ಪುನರ್ಜನ್ಮದ ಮೊದಲಿನ ಯಾತನೆಯೆ ಇದು? ಯಾರಾದರೂ ಕಂಡುಬಿಟ್ಟರೆ ಎನ್ನುವ ಆತಂಕವೇ? ಈ ಭೀತಿಯನ್ನು ಹೇಗೆ ನಿರ್ಮೂಲಗೊಳಿಸಲಿ? ಪದ್ಮಾವತಿಯ ಜೊತೆ ಈ ರಾತ್ರಿ ಮಲಗಿದರೆ ತೀರುವ ಭೀತಿಯೇ ಇದು? ಚಂದ್ರಿಯ ಸಂಗಡ ಹೋಗಿ ಬಾಳಿಬಿಟ್ಟರೆ ತೀರುವ ಭೀತಿಯೇ ಇದು? ನನ್ನ ನಿಶ್ಚಯದ ಬೆಲೆ ಏನು? ಯಾವ ನಿಶ್ಚಯವನ್ನೂ ಮಾಡಲಾರದೆ ಪ್ರೇತತ್ವವೇ ನನಗೆ ಖಾತ್ರಿಯಾದ ಸ್ಥಿತಿಯೇ? ಈಗ ಪುಟ್ಟನಿರಬೇಕಿತ್ತು. ಎದ್ದುಬಿಡಲೆ? ಏನೆಂದುಕೊಂಡಾನು ಪಕ್ಕದಲ್ಲಿ ಇರುವ ಬ್ರಾಹ್ಮಣ?

ಒಬ್ಬ ಬ್ರಾಹ್ಮಣ ಅಭಿಗಾರವನ್ನು ಎಲೆಯ ತುದಿಗೆ ಸೋಕಿಸುತ್ತ ನಡೆದ. ಅವನ ಹಿಂದೊಬ್ಬ ಪಾಯಸವನ್ನು ಎಲೆಯ ಅಂಚಿಗೆ ಚಮಚದಿಂದ ಸುರಿಯುತ್ತ ನಡೆದ. ಅವನ ಹಿಂದಿನಿಂದ ಇಬ್ಬರು ದಾರ್ಢ್ಯ ಬ್ರಾಹ್ಮಣರು ಅನ್ನ

ವನ್ನು ಬಡಿಸುತ್ತ 'ದಾರಿ ದಾರಿ ದಾರಿ' ಎಂದರು. ಮತ್ತೆ ಕೋಸಂಬರಿ. ಸೌತೆಕಾಯಿಯ ಪಲ್ಯ. ಬಡಿಸಲು ಬರುವ ಪ್ರತಿಯೊಂದೂ ಹೊಸ ಮುಖ ಕಂಡು ಹೆದರಿಕೆ. ನಾನು ಇವನಿಗೆ ಪರಿಚಯವಿದ್ದುಬಿಟ್ಟರೆ—

ಪಕ್ಕದಲ್ಲಿ ಕೂತವ—ತನಗೆ ಎಲೆ ಕೊಟ್ಟವ—ಭೀಮಸೇನನಂತಹ ಕಾಯದ ಕಪ್ಪು ಬಣ್ಣದ ಬ್ರಾಹ್ಮಣ. ನೊಸಲಿಗೆ ಗಂಧವನ್ನು ಅಡ್ಡಲಾಗಿ ಎಳೆದ ಸ್ಮಾರ್ತ. ಅವನನ್ನು ಕಂಡೇ ಆಚಾರ್ಯರಿಗೆ ದಿಗಿಲಾಗಿತ್ತು. ಮತ್ತೆ ಅವನ ಪ್ರಶ್ನೆಗಳೆಲ್ಲವೂ ಅವರನ್ನು ತಬ್ಬಿಬ್ಬಾಗಿ ಮಾಡಿದವು:

"ಯಾವ ಕಡೆಯವರೊ ?"

"ಘಟ್ಟದ ಕೆಳಗೆ."

"ನಾನು ಈ ಊರವನೆ. ಘಟ್ಟದ ಕೆಳಗೆ ಎಲ್ಲೋ ?"

"ಕುಂದಾಪುರ...."

"ಯಾವ ಜನವೋ ?"

"ವೈಷ್ಣವ."

"ಯಾವ ಪಂಗಡವೋ ?"

"ಶಿವಳ್ಳಿ."

"ನಾವು ಕೋಟದವರು. ನಿಮ್ಮ ಗೋತ್ರ ?"

"ಭಾರದ್ವಾಜ."

"ನಾವು ಅಂಗೀರಸ ಗೋತ್ರದವರು. ಮಹರಾಯರೆ, ನಿಮ್ಮ ಪರಿಚಯವಾದ್ದು ಬಹಳ ಸಂತೋಷವಾಯ್ತು. ನಮ್ಮದೊಂದು ಹುಡುಗಿಯಿದೆ, ಸ್ವಾಮಿ. ಇನ್ನೇನು ಒಂದೆರಡು ವರ್ಷಕ್ಕೆ ನೆರೆದುಬಿಡುವಳು. ಮೈನೆರೆಯುವ ತನಕ ಮದುವೆ ಮಾಡದಷ್ಟು ನಾವಿನ್ನೂ ಕೆಟ್ಟಿಲ್ಲ. ಆದಕಾರಣ ಹುಡುಗಿಗೊಂದು ಅನುರೂಪನಾದ ವರನನ್ನು ಹುಡುಕುತ್ತಿದ್ದೇನೆ. ನಿಮ್ಮ ಕಡೆಯೊಂದು ಎಲ್ಲಾದರೂ ಗಂಡಿದ್ದರೆ ತಿಳಿಸಿ, ಮಹಾರಾಯರೆ. ಕನ್ಯಾಹೊರೆ ಕಳೆದ ಉಪಕಾರವಾದಂತೆ. ಊಟ ಮುಗಿದಮೇಲೆ ಮನೆಗೆ ಹೋಗುವ ಬನ್ನಿ. ನಿಮ್ಮ ಕೈಯಲ್ಲಿ ಜಾತಕದ ಪ್ರತಿಯೊಂದು ಕೊಡುತ್ತೇನೆ. ಇವತ್ತು ನಮ್ಮಲ್ಲೇ ಇಳಿದಿದ್ದರಾಯಿತು."

ಪ್ರಾಣೇಶಾಚಾರ್ಯರು ದೊನ್ನೆಗೆ ಸಾರು ಹಾಕಿಸಿಕೊಳ್ಳುತ್ತ ತಲೆ ಎತ್ತಿ ನೋಡಿದರು. ಸಾರನ್ನು ಬಡಿಸುವಾತ ಇವರ ಮುಖವನ್ನೇ ನೋಡುತ್ತಿದ್ದ. ಕ್ಷಣ ನಿಂತ. ಮತ್ತೆ ಮುಂದಕ್ಕೆ ಹೋದ.

"ಆಗಲಿ" ಎಂದರು ಪ್ರಾಣೇಶಾಚಾರ್ಯರು ಅಲ್ಲಿಗೇ ಮಾತನ್ನು ಸಾಕು ಮಾಡಲು. ಈ ಸಾರು ಬಡಿಸಲು ಬಂದವನಿಗೆ ನನ್ನ ಪರಿಚಯವಿರಬಹುದೇ? ಹಣೆಯ ಮೇಲೆ ಅಂಗಾರವಿತ್ತು. ಮಾಧ್ವರವ. ನನ್ನ ಪರಿಚಯವಿರಲಿಕ್ಕೆ ಸಾಕು. ಎದ್ದುಬಿಡುವ ಎಂದರೆ ಪರಿಷಂಚನೆ ಕಟ್ಟೆಯಾಗಿದೆ. ಕೈಯಲ್ಲಿ ತೀರ್ಥ ಹಿಡಿದಾಗಿದೆ. 'ಶ್ರೀಮದ್ ರಮಾರಮಣ ಗೋವಿಂದಾ ಗೋವಿಂದ' ಎಂದು ಕುಡಿದೂ ಆಗಿದೆ. ಬಿಸಿಬಿಸಿ ಅನ್ನಕ್ಕೆ ಸಾರನ್ನು ಕಲಿಸಿ ತಿಂದರು. ಎಷ್ಟು ದಿನ ವಾಗಿಬಿಟ್ಟಿತ್ತು ಊಟ ಮಾಡಿ? ಪರಮಾತ್ಮ. ಈ ಗಂಡಾಂತರದಿಂದ ಪಾರು ಮಾಡು. ಇವತ್ತಷ್ಟಕ್ಕೆ ನಾನು ಪತ್ತೆಯಾಗದಂತೆ ನೋಡಿಕೊ. ನನ್ನ ನಿಶ್ಚಯ ಇದು ಎಂದು ನಾನು ನಿಶ್ಚಯಮಾಡಲಾರೆ, ನನ್ನ ನಿಶ್ಚಯದಲ್ಲಿ ಉಳಿದವರೂ ಭಾಗಿಯಾಗಿಬಿಡುತ್ತಾರೆ. ಇಷ್ಟೆಲ್ಲ ಆದಮೇಲೆ ನಾರಣಪ್ಪನ ಶವದ ಸಂಸ್ಕಾರ ನಾನು ಮಾಡಬೇಕಿತ್ತು. ಆದರೆ ಒಬ್ಬನೇ ಹೇಗೆ ಮಾಡಲಿ? ಹೆಣವನ್ನು ಎತ್ತಿಹಾಕಲು ಇನ್ನು ಮೂವರು ಬೇಕು. ಆ ಮೂವರಿಗೆ ನಾನು ಹೇಳಬೇಕು. ಹೇಳಿದರೆ ಅವರ ಬ್ರಾಹ್ಮಣ್ಯವನ್ನು ನನ್ನ ನಿಶ್ಚಯಕ್ಕೆ ಒಳಪಡಿಸಿ ಬಿಟ್ಟಂತೆ. ಇದೇ ನನ್ನ ಆತಂಕದ, ಸಂಕಟದ ಮೂಲ. ಆದರೆ ಕಂಡರಿಯ ದಂತೆ ಚಂದ್ರಿಯ ಜೊತೆ ಕೂಡಿದಾಗಲೂ ಅಗ್ರಹಾರದ ಬಾಳನ್ನು ನನ್ನ ಕ್ರಿಯೆಗೆ ಒಳಪಡಿಸಿಬಿಟ್ಟೆ. ಪರಿಣಾಮವಾಗಿ ನನ್ನ ಬಾಳು ಲೋಕದ ಕಣ್ಣಿಗೆ ತೆರೆದಿಟ್ಟುಬಿಟ್ಟ ಪದಾರ್ಥವಾಗಿಬಿಟ್ಟಿತು. ಸಾರನ್ನು ಬಡಿಸಿದವ ಇನ್ನೊಮ್ಮೆ 'ಸಾರು ಸಾರು' ಎಂದು ಕೂಗುತ್ತ ಬಂದ. ಮತ್ತೆ ತನ್ನ ಎಲೆಯ ಎದುರು ನಿಂತು 'ಸಾರು' ಎಂದ. ಹೆದರುತ್ತ ಆಚಾರ್ಯರು ಕಣ್ಣೆತ್ತಿದರು.

"ನಿಮ್ಮನ್ನೆಲ್ಲೋ ನೋಡಿದ್ದೀನಿ" ಎಂದ ಅವ.

"ಇರಬಹುದು" ಎಂದರು ಆಚಾರ್ಯರು. ಮತ್ತೆ ಅವ ದೇವರ ದಯ ದಿಂದ ಇನ್ನೊಂದು ಸಾಲಿಗೆ ಸಾರನ್ನು ಬಡಿಸುತ್ತ ಹೋದ. ಅವನ ಕಣ್ಣುಗಳು ತನ್ನನ್ನೇ ನೆನೆಯುತ್ತಿವೆ; ಮನಸ್ಸಿನೊಳಗೆ ನನ್ನ ಬಿಂಬವನ್ನು ಕಳಿಸಿ ಪತ್ತೆ ಹಚ್ಚುತ್ತಿವೆ. ಚಂದ್ರಿಯ ಜೊತೆ ಹೋಗಿದ್ದರೂ ಯಾರಾದರೊಬ್ಬ ನನ್ನನ್ನು ಸಂಧಿಸಿ 'ನೀವು ಯಾರು' ಎನ್ನುತ್ತಾನೆ. ಯಾವ ಗೋತ್ರ? ಯಾವ ಪಂಗಡ? ಬ್ರಾಹ್ಮಣ್ಯವನ್ನು ಸಂಪೂರ್ಣ ತೊರೆದು ನಿಲ್ಲದ ಹೊರತು ಇದರಿಂದ ಸ್ವತಂತ್ರ ನಾಗಲಾರೆ. ತೊರೆದರೆ ಕೋಳಿ ಅಂಕದ ಆ ವ್ಯಾಘ್ರಲೋಕಕ್ಕೆ ಹುಳದಂತೆ ಬಿದ್ದು ಸುಟ್ಟುಬಿಡುವೆ. ಈ ಭೇತಾಳತನದಿಂದ ಹೇಗೆ ಪಾರಾಗಲಿ?

"ಎರಡನೆಯ ಸಾರಿ ಬಡಿಸಿದ ಸಾರಿಗೆ ನೀರು ಬೆರಸಿಬಿಟ್ಟಿದ್ದಾರೆ" ಎಂದ

ಪಕ್ಕದಲ್ಲಿ ಕೂತ ಬ್ರಾಹ್ಮಣ. "ಏನು ಬರೀ ಸಾರಿನಲ್ಲಿ ಹೊಟ್ಟೆ ತುಂಬಿಸಿ ಕೊಳ್ಳುತ್ತಿದ್ದೀರಲ್ಲ. ಭಕ್ಷ್ಯ—ಭೋಜ್ಯಗಳು ಬರುವುದಿದೆ. ಕಾಯಿರಿ" ಎಂದು ಹೇಳಿದ.

ಸಾರನ್ನು ತಂದವನೇ ಮತ್ತೆ ಹುಳಿಯನ್ನು ಬಡಿಸುತ್ತ ಅದೇ ಸಾಲಿಗೆ ಬಂದ, ಎದುರು ನಿಂತು,

"ಎಲ್ಲೆಂದು ನೆನಪೇ ಆಗುತ್ತಿಲ್ಲ. ಮಠದಲ್ಲಿ ಇರಬಹುದೆ? ಆರಾಧನೆಗೆ ಒಮ್ಮೊಮ್ಮೆ ನಾನು ಅಡಿಗೆಕೆಲಸಕ್ಕೆ ಹೋಗುವುದುಂಟು. ನಮ್ಮ ಅಗ್ರಹಾರ ಹೊಳೆಯಾಚೆಯಾಯಿತು. ಮೊನ್ನೆ ಮಠದಲ್ಲಿ ಆರಾಧನೆಯ ಅಡಿಗೆ ಮಾಡಿ ಇಲ್ಲಿಗೆ ಬಂದೆ"

ಎಂದು ಮತ್ತೆ ಅವಸರದಲ್ಲಿ 'ಹುಳೀ ಹುಳೀ ಹುಳೀ' ಎಂದು ಸಾರುತ್ತ, ಇನ್ನೊಂದು ಪಂಕ್ತಿಗೆ ಬಡಿಸುತ್ತ ನಡೆದ.

ತಾನೀಗ ಎದ್ದು ನಡೆದುಬಿಡಬೇಕೆಂದುಕೊಂಡರು. ಆದರೆ ಕಾಲು ಮರ ಗಟ್ಟಿಬಿಟ್ಟಿತ್ತು. ಪಕ್ಕದಲ್ಲಿ ಕೂತ ಬ್ರಾಹ್ಮಣ,

"ನಮ್ಮ ಹುಡುಗಿ ಅಡಿಗೆಕೆಲಸದಲ್ಲಿ ಜಾಣಳು. ಹಿರಿಯರಿಗೆ ವಿಧೇಯ ಳಾಗಿ ನಡೆಯುತ್ತಾಳೆ. ಅತ್ತೆ ಮಾವ ಇರುವ ದೊಡ್ಡದೊಂದು ಕುಲೀನರ ಮನೆಗೆ ಸೇರಿಸಬೇಕೆಂದು ನಮ್ಮ ಹಂಬಲ" ಎಂದ.

ಈ ಭೀತಿಯಿಂದ ಪಾರಾಗಲು ಇರುವುದು ಒಂದೇ ಮಾರ್ಗ. ನಾರಣಪ್ಪನ ಶವಸಂಸ್ಕಾರದ ಹೊಣೆ ಹೊರಬೇಕು. ನಾನು ಉದಾತ್ತವಾಗಿ ಬೆಳೆದ ಅಗ್ರಹಾರದ ಬ್ರಾಹ್ಮಣರ ಕಣ್ಣೆದುರಿನಲ್ಲೇ ನಿಲ್ಲಬೇಕು. ಗರುಡ,ಲಕ್ಷ್ಮಣರನ್ನು ಕರೆದು ಹೇಳಬೇಕು: ಹೀಗೀಗಾಯಿತು. ನನ್ನ ನಿಶ್ಚಯ ಹೀಗೆ, ನಿಮ್ಮ ಕಣ್ಣೆದುರಿನಲ್ಲಿ ಬೆಳೆದ ಉದಾತ್ತ ವ್ಯಕ್ತಿತ್ವವನ್ನು ತೊರೆದುಬಿಡುತ್ತೇನೆ. ನಿಮ್ಮ ಕಣ್ಣಿನ ಎದುರೇ ಅದನ್ನು ಬಿಸಾಕಲೆಂದು ಬಂದಿದ್ದೇನೆ. ಇಲ್ಲವೇ ನನ್ನ ಈ ಭೀತಿ ತಪ್ಪಿದ್ದಲ್ಲ, ನನಗೆ ಸ್ವಾತಂತ್ರ್ಯವಿಲ್ಲ.

ಆಗ—ಗಣಪತಿಯ ಮೀನನ್ನು ಹಿಡಿದು ಅಗ್ರಹಾರದ ಜೀವನವನ್ನು ತಲೆಕೆಳಗುಮಾಡಿದ ನಾರಣಪ್ಪನಂತೆಯೇ ನಾನೂ ಬ್ರಾಹ್ಮಣರ ಬಾಳನ್ನು ಬುಡಮೇಲು ಮಾಡಿಬಿಟ್ಟಂತಾಗುತ್ತದೆ. ಅವರಲ್ಲಿದ್ದ ನಂಬಿಕೆಗೆ ವಜ್ರಾಘಾತ ವಾಗಿಬಿಡುತ್ತದೆ. ಏನೆಂದು ಹೇಳಲಿ? ಚಂದ್ರಿಯನ್ನು ಕೂಡಿದೆ. ಹೆಂಡತಿ ಯನ್ನು ಕಂಡು ಹೇಸಿದೆ. ಹೋಟೆಲಲ್ಲಿ ಕಾಫಿ ಕುಡಿದೆ. ಕೋಳಿ ಅಂಕಕ್ಕೆ

ಹೋದೆ. ಪದ್ಮಾವತಿಯಿಂದ ಆಕರ್ಷಿತನಾದೆ. ಕೊನೆಗೆ ಸೂತಕದಲ್ಲಿದ್ದಾಗಲೂ ದೇವಸ್ಥಾನದಲ್ಲಿ ಬ್ರಾಹ್ಮಣರ ಜೊತೆ ಕೂತು ಊಟಮಾಡಿದೆ. ಮಾಲೇರರ ಹುಡುಗನೊಬ್ಬನನ್ನೂ ಜೊತೆಗೆ ಊಟಮಾಡಲಿಕ್ಕೆ ಕರೆದೆ. ನನ್ನ ಪಾಲಿನ ಸತ್ಯ ಇದು. ತಪ್ಪೊಪ್ಪಿಗೆಯಲ್ಲ ಇದು. ನಾನು ಪಾಪಿ ಎಂಬ ಪಶ್ಚಾತ್ತಾಪ ವಲ್ಲ ಇದು. ಬರಿ ಕಠೋರ ಸತ್ಯ. ನನ್ನ ಒಳಬಾಳಿನ ಸತ್ಯ. ಆದ್ದರಿಂದ ಇದು ನನ್ನ ನಿಶ್ಚಯ. ಈ ನಿಶ್ಚಯದ ಮೂಲಕ ಇಗೋ ಕಡಿದುಕೊಂಡೆ.

"ಒಂದಿಷ್ಟು ಬೇಕಾದರೆ ವರದಕ್ಷಿಣೆಯನ್ನೂ ಕೊಡಲಿಕ್ಕೆ ಅಡ್ಡಿಯಿಲ್ಲ, ಮಹಾಶಯರೆ. ಏಕೆಂದರೆ ಇತ್ತೀಚೆಗೆ ಕಾಲ ಕೆಟ್ಟು ಕಪ್ಪುಬಣ್ಣದ ಹುಡುಗಿಯರಿಗೆ ಮದುವೆಯಾಗೋದೇ ಕಷ್ಟಕ್ಕಿಟ್ಟುಕೊಂಡುಬಿಟ್ಟಿದೆ. ನೀವು ಬಂದು ಹುಡುಗಿಯನ್ನು ನೋಡಿ ಬೇಕಾದರೆ. ಕಪ್ಪೆಂದು ಒಂದು ಊನವೇ ಹೊರತು ಕಣ್ಣು ಮೂಗು ಲಕ್ಷಣವಾಗಿದೆ. ಜಾತಕದ ಪ್ರಕಾರ ಗಜಕೇಸರಿ ಯೋಗವಿದೆ. ಕಾಲಿಟ್ಟ ಮನೆಗೆ ಲಕ್ಷ್ಮಿಯಾಗುತ್ತಾಳೆ."

ಹುಳಿಯನ್ನವನ್ನು ಉಣ್ಣುತ್ತ ಪಕ್ಕದ ಬ್ರಾಹ್ಮಣ ಹೇಳಿದ.

ಆದರೆ ಅಗ್ರಹಾರದ ಬ್ರಾಹ್ಮಣರಿಗೆ ಹೇಳದಿದ್ದರೆ, ನಾರಣಪ್ಪನ ಶವ ಸಂಸ್ಕಾರ ಮಾಡದಿದ್ದರೆ ಭೀತಿ ತಪ್ಪಿದ್ದಲ್ಲ. ತಿಳಿಸದೇ ಚಂದ್ರಿಯ ಜೊತೆ ಬದುಕುವ ನಿಶ್ಚಯ ಮಾಡಿದರೆ ಪೂರ್ತಿಯಾದಂತಲ್ಲ. ನಾನೀಗ ಪೂರ್ಣ ನಿಶ್ಚಯಮಾಡಿಬಿಡಬೇಕು. ಪರೋಕ್ಷವಾದದ್ದೆಲ್ಲ ಪ್ರತ್ಯಕ್ಷವಾಗಿಬಿಡಬೇಕು. ಕಣ್ಣಿಗೆ ನೆಟ್ಟುಬಿಡಬೇಕು. ಆದರೆ ಹಾಗೂ ಸಂಕಟ, ಹೀಗೂ ಸಂಕಟ: ಮುಚ್ಚಿಟ್ಟುಕೊಂಡರೆ ಬದುಕಿನುದ್ದಕ್ಕೂ ಯಾರ ಕಣ್ಣಿಗೋ ಬಿದ್ದುಬಿಡುವೆನೆಂಬ ಸಂಕಟ; ನನ್ನ ಬ್ರಾಹ್ಮಣ್ಯ ಸೃಷ್ಟಿಯಾದ ಕಣ್ಣುಗಳ ಎದುರು ಸತ್ಯವನ್ನು ಬಿಚ್ಚಿ ತೋರಿಸಿದಲ್ಲಿ ಅವರ ಬದುಕೂ ಇದರಿಂದ ಪರಿಭ್ರಮಿತವಾಗಬಹುದೆಂಬ ಸಂಕಟ. ಇನ್ನೊಂದು ಬಾಳನ್ನು ನನ್ನ ನಿಶ್ಚಯಕ್ಕೆ ಒಳಪಡಿಸುವ ಅಧಿಕಾರ ನನಗಿದೆಯೇ ಎಂಬ ಸಂಕಟ. ಅಧೈರ್ಯ. ದೇವರೇ, ನಿಶ್ಚಯ ಮಾಡುವ ಜವಾಬ್ದಾರಿಯನ್ನು ತಪ್ಪಿಸಿಬಿಡು. ಕಾಡಿನಲ್ಲಿ ಕತ್ತಲಿನಲ್ಲಿ ಅವಾಕ್ಕಾಗಿ ಆಗಿಬಿಟ್ಟಂತೆ ಈ ನಿಶ್ಚಯವೂ ಆಗಿಬಿಡಲಿ. ಕಣ್ಣು ಮುಚ್ಚಿಬಿಡುವುದರೊಳಗೆ ಹೊಸ ಜನ್ಮ ಬಂದುಬಿಡಲಿ. ನಾರಣಪ್ಪ, ನಿನಗೆ ಈ ಸಂಕಟವಿತ್ತೇ? ಮಹಾಬಲ, ನೀನೂ ಪಟ್ಟಿಯ? ಕೇಳಬೇಕು.

ಸಾರು ಬಡಿಸಿದವನೇ ಮತ್ತೆ ಬುಟ್ಟಿಯಲ್ಲಿ ಲಾಡು ತುಂಬಿ ಬಡಿಸುತ್ತ ಬಂದ. ಪಕ್ಕದ ಬ್ರಾಹ್ಮಣ ಲಾಡುವನ್ನು ಎಲೆಗೆ ಹಾಕಿಸಿಕೊಳ್ಳದೆ ಎಡಗೈ

ಯಲ್ಲಿ ಇಸಕೊಂಡು ಪಕ್ಕದಲ್ಲಿಟ್ಟುಕೊಂಡ. ಮತ್ತೆ ಅವ ತನ್ನೆಲೆಯ ಎದುರು ನಿಂತ. ಎದೆ ಜಗ್ಗೆಂದಿತು.

"ಅಲ್ಲ, ನನ್ನ ಹಾಳು ಮರೆವಿಗೆ ಏನು ಹೇಳಬೇಕು? ನೀವು ದೂರ್ವಾಸಪುರದ ಪ್ರಾಣೇಶಾಚಾರ್ಯರಲ್ಲವೇ? ತಮ್ಮಂಥವರು ಇಲ್ಲಿ ಬಂದು ಊಟಕ್ಕೆ ಕೂರುವುದೇ? ಸಾಹುಕಾರರ ಮನೆಯಲ್ಲಿ ಚಿರೋಟಿ ಊಟವಿತ್ತು. ದೊಡ್ಡವರಿಗೆಲ್ಲ ಅಲ್ಲೇ ಸಂತರ್ಪಣೆ. ನಿಮ್ಮ ಹಣೆಯ ಮೇಲೆ ಅಂಗಾರ ಅಕ್ಷತೆ ಇಲ್ಲದ್ದರಿಂದ ನನಗೆ ಥಟ್ಟನೆ ಪತ್ತೆಯೇ ಆಗಲಿಲ್ಲ. ನೀವೂ ಹೇಳಲಿಲ್ಲ. ಸಾಹುಕಾರರಿಗೆ ಹೇಳದಿದ್ದರೆ ನನಗೆ ತಕ್ಕ ಶಾಸ್ತಿಯಾಗಿಬಿಡುತ್ತದೆ—ಮಹಾಪಂಡಿತರೊಬ್ಬರಿಗೆ ಕಂದಲೆಯ ಊಟ ಹಾಕಿದ ಅಂತ. ಒಂದು ಕ್ಷಣದಲ್ಲಿ ಬರುವೆ ಇರಿ"

ಎಂದು ಅವ ಲಾಡಿನ ಬುಟ್ಟಿಯನ್ನಲ್ಲೇ ಇಟ್ಟು ಓಡಿದ. ಪ್ರಾಣೇಶಾಚಾರ್ಯರು ಆಪೋಶನ ತೆಗೆದುಕೊಂಡು ಚಂಗನೆ ಎದ್ದು ಅಲ್ಲಿಂದ ನಡೆದುಬಿಟ್ಟರು. "ಸ್ವಾಮಿ. ಸ್ವಾಮಿ. ಇನ್ನೂ ಪಾಯಸ ಬರುವುದಿದೆ" ಎಂದು ಪಕ್ಕದ ಬ್ರಾಹ್ಮಣ ಕೂಗಿದ. ತಿರುಗಿ ನೋಡದೆ ದೇವಸ್ಥಾನದ ಹೊರಗೆ ಬಂದುಬಿಟ್ಟರು. ತೊಳೆಯದ ಕೈಯಲ್ಲಿ ಓಡಿದರು ಜನರಿಂದ ದೂರ, ದೂರ. ಅಷ್ಟು ದೂರ ಹೋಗುವುದರೊಳಗೆ ಕೇಳಿಸಿತು: "ಆಚಾರ್‍ರೇ....ಆಚಾರ್‍ರೇ...." ಪುಟ್ಟನ ಧ್ವನಿ. ಓಡಿ ಬಂದು ಜೊತೆಗೆ ನಿಂತ. ಪ್ರಾಣೇಶಾಚಾರ್ಯರು ಸರಸರನೆ ಕಾಲು ಹಾಕತೊಡಗಿದರು.

"ಇದೇನು ಮಾರಾಯರೆ. ಮಾತಿಲ್ಲ, ಕತೆಯಿಲ್ಲ. ಓಡುತ್ತಿದ್ದೀರಿ—ಒಳ್ಳೇ ಒಂದಕ್ಕೊ ಎರಡಕ್ಕೊ ಅವಸರವಾದವರ ಹಾಗೆ" ಎಂದು ಪುಟ್ಟ ನಕ್ಕ. ಜನರಿಂದ ದೂರವಾದ ಮೇಲೆ ಪ್ರಾಣೇಶಾಚಾರ್ಯರು ನಿಂತರು. ತಮ್ಮ ಎಂಜಲು ಕೈಯನ್ನು ನೋಡಿಕೊಂಡು ಹೇಸಿದರು.

"ಏನು, ಕೈ ತೊಳೆಯಲಿಕ್ಕೂ ಅವಸರವಾಗಿಬಿಟ್ಟಿತ, ಮಾರಾಯರೆ. ನನಗೂ ಹಾಗಾಗಿದ್ದುಂಟು. ಬನ್ನಿ, ಕೆರೆಗೆ ಹೋಗುವ."

ಕೆರೆಯ ಕಡೆ ನಡೆದದ್ದಾಯಿತು. ದಾರಿಯಲ್ಲಿ ಪುಟ್ಟ ಹೇಳಿದ:

"ನಾನೊಂದು ನಿಶ್ಚಯಮಾಡಿಬಿಟ್ಟೆ, ಆಚಾರ್‍ರೆ—ನಿಮ್ಮ ಜೊತೆಗೇ ನಾಳೆ ಬೆಳಿಗ್ಗೆ ಕುಂದಾಪುರಕ್ಕೂ ಬಂದುಬಿಡುವ ಅಂತ. ನಿಮಗೆ ಹೇಳಲಿಲ್ಲ ನಾನು. ನನ್ನ ಹೆಂಡತಿಮಕ್ಕಳು ತೌರಿಗೆ ಹೋಗಿ ತಿಂಗಳಾಯಿತು. ಕಾಗದ ಇಲ್ಲ. ಬುದ್ಧಿ ಹೇಳಿ ಕರೆದುಕೊಂಡು ಬರಬೇಕು. ನೀವು ಹಿರಿಯರು ಬ್ರಾಹ್ಮಣ

ರಲ್ಲವೆ? ಒಂದು ಉಪಕಾರ ಮಾಡಿ. ನನ್ನ ಹೆಂಡತಿಗಷ್ಟು ಬುದ್ಧಿವಾದ ಹೇಳಿ. ನಿಮ್ಮ ಮಾತು ಕೇಳಿಯಾಳು. ಒಂದು ದಿನದಲ್ಲೇ ನೀವು ನನ್ನ ಪ್ರಾಣ ಮಿತ್ರರಾಗಿಬಿಟ್ಟರಿ. ಇನ್ನೊಂದು ಮಾತು ಆಚಾರ್‍ರೆ, ನನ್ನಲ್ಲಿ ಚಾಡಿಹಿಡಿವ್ರದ ಸ್ವಭಾವವಿಲ್ಲ; ನೀವು ಪದ್ಮಾವತೀ ಮನೆಯಲ್ಲಿ ಮಲಗಿದ್ದನ್ನ ನಾನು ತಾಯಿಯ ಆಣೆ—ಯಾರಿಗೂ ಹೇಳುವವನಲ್ಲ. ನಾನಲ್ಲಿ ಮಂಗನ ಕುಣಿತ ನೋಡುತ್ತ ನಿಂತಿದ್ದೆ ಮಾರಾಯರೆ, ನೀವು ಓಡೋದು ನೋಡಿ ನಗೆ ಬಂದು ಬಿಟ್ಟಿತು. ಊಟ ಮಾಡುತ್ತಿದ್ದಂತೆ ಅವಸರವಾಗುವುದು ಉಂಟಲ್ಲವೆ? ಇರ ಬಹುದೆಂದು ನಕ್ಕುಬಿಟ್ಟೆ."

ಪ್ರಾಣೇಶಾಚಾರ್ಯರು ಕೆರೆಯಲ್ಲಿಳಿದು ಕೈತೊಳೆದುಕೊಂಡರು. ಮೇಲೆ ಕಟ್ಟೆಯ ಮೇಲೆ ಬೆನ್ನುಹಾಕಿ ನಿಂತ ಪುಟ್ಟ, ಕೈತೊಳೆದು ಪಕ್ಕದಲ್ಲಿ ಬಂದು ನಿಂತ ಪ್ರಾಣೇಶಾಚಾರ್ಯರಿಗೆ:

"ಏನು, ಇಷ್ಟು ಬೇಗ?" ಎಂದ.

"ಒಂದು ವಿಷಯ, ಪುಟ್ಟ."

ಪ್ರಾಣೇಶಾಚಾರ್ಯರು ಮೇಲಕ್ಕೆ ನೋಡಿದರು: ಬೇಸಗೆಯ ದೀರ್ಘ ಸಂಜೆ. ಪಶ್ಚಿಮದಲ್ಲಿ ಕೆಂಪು ಓಕಳಿ ಚೆಲ್ಲಿದೆ. ಬೆಳ್ಳಕ್ಕಿಗಳ ಸಾಲು ಸಾಲು ಗೂಡಿನ ದಾರಿ ಹಿಡಿದಿವೆ. ಕೆಳಗೆ ಕೆರೆಯ ಅಂಚಿನಲ್ಲಿ ಬಕ ಕುಗುರುತ್ತಿದೆ. ಇನ್ನೇನು ದೀಪ ಹಚ್ಚುವ ಹೊತ್ತು ಸಮೀಪ. ಅಗ್ರಹಾರದಲ್ಲಿ ದೀಪ ಹಚ್ಚಿ ಎಷ್ಟು ದಿನವಾಯಿತೋ. ಸಂಜೆ ಕೊಟ್ಟಿಗೆಗೆ ಬಂದ ದನಕರುಗಳನ್ನು ಕಟ್ಟಿ ಕರೆಸಿ, ದೇವರಿಗೆ ನೈವೇದ್ಯ ಮಾಡಿ ಎಷ್ಟು ದಿನವಾಯಿತೋ. ಕನಸಿನಲ್ಲಿ ಕರಗುತ್ತಿರುವ ಲೋಕದಂತೆ ಪಶ್ಚಿಮಘಟ್ಟದ ದಿಗಂತದ ಸ್ಪಷ್ಟರೂಪಗಳು ಮಸುಕಾಗುತ್ತಿವೆ. ಈಗಿನ ರಂಗು ಇನ್ನೊಂದು ಕ್ಷಣಕ್ಕೆ ಇಲ್ಲದೆ ಬಾನು ಬೆತ್ತ ಲಾಗುತ್ತಿದೆ. ಅಮಾವಾಸ್ಯೆ ಕಳೆದಿರಬೇಕು—ಇನ್ನಷ್ಟು ಹೊತ್ತಿನಲ್ಲಿ ಚಂದ್ರನ ಗೆರೆ ಬೆಟ್ಟಗುಡ್ಡಗಳ ನೆತ್ತಿಯ ಮೇಲೆ ಅಭಿಷೇಕಕ್ಕೆ ಬಗ್ಗಿಸಿದ ಬೆಳ್ಳಿಯ ಬಟ್ಟಲಿನ ಅಂಚಿನಂತೆ ಕಾಣುತ್ತೆ. ಬೆಟ್ಟಗಳ ಸಂದಿಯ ಕಣಿವೆಗಳಲ್ಲಿ ಮೌನ ಗಾಢವಾಗಿ ಕವಿದುಬಿಡುತ್ತದೆ. ರಾತ್ರೆಯ ಅರ್ಚನೆ ಮುಗಿಯುತ್ತಿದ್ದಂತೆ, ಹತ್ತಿಸಿದ ದೊಂದಿಗಳು ಮಂಕಾಗಿ ಜಾತ್ರೆಯ ಗಲಿಬಿಲಿ ಕಡಿಮೆಯಾಗುತ್ತಿದೆ. ಮತ್ತೆ ಮೇಳದವರ ಚಂಡೆಯ ಧ್ವನಿ ಉಕ್ಕೇರಿ ಹರಡುತ್ತದೆ. ಈಗ ನಡೆಮ ಬಿಟ್ಟರೆ ಅರ್ಧರಾತ್ರೆಯ ಹೊತ್ತಿಗೆ ಅಗ್ರಹಾರ ಸೇರುತ್ತೇನೆ—ಈ ಲೋಕ ದಿಂದ ದೂರನಾಗಿ. ಭಯಗ್ರಸ್ತ ಬ್ರಾಹ್ಮಣರ ದೃಷ್ಟಿಯಲ್ಲಿ ಹಸಿಹಸಿ ಪ್ರಾಣ

ದಂತೆ ತೊರೆದು ನಿಂತು, ಅವರ ನಡುವಿನ ಹಳಬ ನಡುರಾತ್ರಿಯಲ್ಲಿ ಹೊಸಬನಾಗುತ್ತೇನೆ. ಪ್ರಾಯಶಃ, ಅವನ ಶವದ ಸುತ್ತ ಬೆಂಕಿ ನೆಗೆದಾಡಿದರೆ ಒಂದು ಸಮಾಧಾನ. ಹೇಳುವಾಗ ಪಶ್ಚಾತ್ತಾಪದ ಸೋಂಕಿರಕೂಡದು, ತಾನು ಪಾಪಿಯಾಗಿಬಿಟ್ಟೆನೆಂಬ ದುಃಖವಿರಕೂಡದು. ಇಲ್ಲವೇ ದ್ವಂದ್ವ ಕಳೆಯದು. ಮಹಾಬಲನನ್ನು ನೋಡಬೇಕು. ನಮ್ಮ ನಿಶ್ಚಯದಲ್ಲಿ ನಾವು ಗಳಿಸಿಕೊಳ್ಳುವ ಸ್ವರೂಪ ಮಾತ್ರ ಖಾತ್ರಿಯಾಗಿ ನಮ್ಮದೆಂದು ಅವನಿಗೆ ಹೇಳಬೇಕು ಎಂಬುದಾದರೂ ನಿಜವೇ? ಹಾಗಾದರೆ ನಿನಗೇನೂ ಈಗ ದೇವರ ಹಂಬಲವೇ ಇಲ್ಲವೇ ಎಂದು ಕೇಳಬೇಕು. 'ಲಲಿತ ಲವಂಗ ಲತಾ ಪರಿಶೀಲನ ಕೋಮಲ ಮಲಯ ಸಮೀರೇ' ಪ್ರಾಣೇಶಾಚಾರ್ಯರಿಗೆ ಅತ್ಯಂತ ವ್ಯಾಕುಲವಾಗಿಬಿಟ್ಟಿತು. ಪ್ರೇಮ ಬಂದುಬಿಟ್ಟಿತು. ಪುಟ್ಟನ ಹೆಗಲಿನ ಮೇಲೆ ಪ್ರಥಮ ಬಾರಿಗೆ ಕೈಹಾಕಿದರು. ಬರಸೆಳೆದರು. ಅವನ ಭುಜವನ್ನು ತಟ್ಟುತ್ತ "ಏನೋ ಹೇಳಹೊರಟಿದ್ದೆಸಲ್ಲ" ಎಂದರು.

"ಅಲ್ಲ ಮಾರಾಯರೆ, ದಾರಿಯಲ್ಲಿ ನೀವು ಸಿಕ್ಕಾಗ ನಿಮ್ಮ ಮಾತಿನ ಬಿಗಿ ನೋಡಿ, ಇವರೇನು ನನ್ನಂಥವನ ಜೊತೆ ಸ್ನೇಹ ಮಾಡುವವರಲ್ಲವೆಂದುಕೊಂಡುಬಿಟ್ಟಿದ್ದೆ" ಎಂದು ಪುಟ್ಟ ಆಚಾರ್ಯರು ಹೆಗಲ ಮೇಲೆ ಕೈಹಾಕಿದರೆಂದು ಹರ್ಷಿತನಾಗಿ ಹೇಳಿದ.

"ನೋಡು ಪುಟ್ಟ, ನಾನು ಯಾಕೆ ಅವಸರದಲ್ಲಿ ಊಟ ಬಿಟ್ಟು ಬಂದೆ ನಿನಗೆ ಗೊತ್ತ? ಈ ಕ್ಷಣವೇ ನಾನು ದೂರ್ವಾಸಪುರಕ್ಕೆ ಹೋಗಿಬಿಡಬೇಕು."

"ಓಹೊ, ಅದೆಲ್ಲಿ ಸಾಧ್ಯ, ಮಾರಾಯರೆ? ನಿಮ್ಮ ಪದ್ಮಾವತಿ ಅಲ್ಲಿ ಸುಪ್ಪತ್ತಿಗೆ ಸಿದ್ಧಪಡಿಸಿ ಊದುಬತ್ತಿ ಹಚ್ಚಿ ಹೂಮುಡಿದು ಕಾದಿರುತ್ತಾಳೆ. ನೀವು ಜೊತೆಯಲ್ಲಿಲ್ಲದೆ ಅವಳಿಗೆ ಹೇಗೆ ಮುಖ ತೋರಿಸಲಿ? ಎಷ್ಟೇ ನಿರ್ವಾಹವಿರಲಿ ಅವಸರವಿರಲಿ, ಈ ರಾತ್ರಿ ತಂಗಿದ್ದು ಬೆಳಗ್ಗೆಯೇ ನೀವು ಹೋಗೋದು. ಈಗ ಹೊರಟರೆ ನನ್ನಾಣೆ"

ಎಂದು ಪುಟ್ಟ ಪ್ರಾಣೇಶಾಚಾರ್ಯರನ್ನು ಜಗ್ಗಿದ. ಪ್ರಾಣೇಶಾಚಾರ್ಯರಿಗೆ ಭಯವಾಯಿತು. ತನ್ನ ನಿಶ್ಚಯದಿಂದ ತಾನು ಕರಗಿಬಿಡಬಹುದೆಂದು ಅನುಮಾನವಾಯಿತು. ಈ ಪುಟ್ಟನಿಂದ ಪಾರಾಗಬೇಕು.

"ಇಲ್ಲ, ಪುಟ್ಟ. ಖಂಡಿತ ಸಾಧ್ಯವಿಲ್ಲ. ನಿಜ ಹೇಳಲೆ? ನಿನ್ನ ಮನಸ್ಸಿಗೆ ಯಾಕೆ ರಗಳೆ ಹಚ್ಚುವುದೆಂದು ಹೇಳಲಿಲ್ಲ." ಏನು ಹೇಳಲೆಂದು ಕ್ಷಣ ಚಿಂತಿಸಿ ಒಂದು ಸುಳ್ಳು ಹೇಳಿಬಿಡುವುದೇ ಕ್ಷೇಮವೆಂದು ಅಂದರು: "ನನ್ನ ಸೋದರ

ದೂರ್ವಾಸಪುರದಲ್ಲಿ ಸಕತ್ ಖಾಹಿಲೆಯಾಗಿ ಮಲಗಿದ್ದಾನೇಂತ ಊಟಕ್ಕೆ ನಾನೂ ಕೂತಿದ್ದಾಗ ತಿಳಿಯಿತು. ಅವ ಈಗಲೋ ಇನ್ನೊಂದು ಘಳಿಗೆಯೋ ಎಂದಿರುವಾಗ ನಾನು ಹೇಗೆ...."

ಪುಟ್ಟ ನಿಟ್ಟುಸಿರಿಟ್ಟ ನಿರಾಶೆಯಿಂದ.

"ಸರಿ ಹಾಗಾದರೆ" ಎಂದ.

ಪ್ರಾಣೇಶಾಚಾರ್ಯರು ಹೊರಡಲುದ್ಯುಕ್ತರಾಗಿ,

"ಇನ್ನೊಮ್ಮೆ ಎಂದು ನೋಡೋದು ನಿನ್ನ? ಕುಂದಾಪುರಕ್ಕೆ ಹೋಗುವ ಮಾರ್ಗ ಪದ್ಮಾವತಿಯನ್ನು ನೋಡುವೆನೆಂದು ಹೇಳು. ನಾನು ಹೊರಡಲೆ ಇನ್ನು?" ಎಂದರು. ಪುಟ್ಟ ಚಿಂತಿಸುತ್ತ ನಿಂತವನು,

"ನಿಮ್ಮೊಬ್ಬರನ್ನೇ ಈ ಕತ್ತಲಿನಲ್ಲಿ ಕಾಡಿನ ಮಾರ್ಗ ಹೇಗೆ ಕಳಿಸಲಿ? ನಾನೂ ಬಂದುಬಿಡುವೆ" ಎಂದ.

ಈಗ ಪ್ರಾಣೇಶಾಚಾರ್ಯರು ಅಪ್ರತಿಭರಾಗಿಬಿಟ್ಟರು. ಯಾವ ಯುಕ್ತಿಯಿಂದಲೂ ಇನ್ನು ಇವನನ್ನು ತಾವು ಅಟ್ಟುವಂತಿಲ್ಲ. ನನ್ನಿಂದ ನಿನಗೆ ಸುಮ್ಮನೇ ತೊಂದರೆ, ಬೇಡವೆಂದರು. ಪುಟ್ಟ ಜಗ್ಗಲಿಲ್ಲ.

"ತೊಂದರೆಯೂ ಇಲ್ಲ. ತಾಪತ್ರಯಾನೂ ಇಲ್ಲ. ದೂರ್ವಾಸಪುರದಲ್ಲಿ ನನ್ನದೂ ಒಂದು ಕೆಲಸವಿದೆ. ಪಾರಿಜಾತಪುರದಲ್ಲಿ ನನ್ನ ಜ್ಞಾತಿಗಳಿದ್ದಾರೆ. ನಾರಣಪ್ಪನವರ ಪರಿಚಯ ನಿಮಗಿರಲಿಕ್ಕೆ ಸಾಕು. ಪಾರಿಜಾತಪುರಕ್ಕೊಮ್ಮೆ ಹೋದಾಗ ನಿಮ್ಮ ಪರಿಚಯವಾದ ಹಾಗೇ ಅವರ ಪರಿಚಯವಾಯಿತು. ಅಲ್ಲ ಮಾರಾಯರೆ, ಒಳ್ಳೆದಾಯಿತು ನೆನಪಾದ್ದು. ಊರಿಗೇ ಗೊತ್ತಲ್ಲ ಹೇಗೆ ನಾರಣಪ್ಪನವರ ಆಸ್ತಿ ಪೋಲಾಯ್ತು ಅಂತ. ಸೀರೆಯುಟ್ಟದೊಂದು ಸುಳಿದರೆ ಬಾಯಿಬಿಡುವ ಪೈಕಿ ಅವರು. ನಿಮ್ಮಲ್ಲೇ ಇರಲಿ ಮಾರಾಯರೆ. ಅವರೇನಾದರೂ ನಿಮಗೆ ಪರಿಚಯವಿದ್ದಲ್ಲಿ ದಯಮಾಡಿ ನಿಮ್ಮನ್ನ ಪದ್ಮಾವತಿ ಕರೆದ ವಿಷಯ ತಿಳಿಸಬೇಡಿ. ನಿಮ್ಮ ಹತ್ತಿರ ಯಾಕೆ ಮುಚ್ಚುಮರೆ? ನಾರಣಪ್ಪನವರು ಪರಿಚಯವಾದ್ದೇ ನನಗೆ ಗಂಟುಬಿದ್ದುಬಿಟ್ಟರು: ಪದ್ಮಾವತೀನ್ನ ಗುರುತುಮಾಡಿಕೊಡು ಅಂತ. ನಾನು ಹಾಗೆಲ್ಲ ತೀರ ಹಡೆಯಲ್ಲ ನೋಡಿ. ಆದರೂ ಬ್ರಾಹ್ಮಣನೊಬ್ಬ ಗಂಟುಬಿದ್ದಮೇಲೆ ಏನು ಮಾಡಲಿಕ್ಕೆ ಶಕ್ಯ? ಆದರೆ ಪದ್ಮಾವತಿಗೆ ಅವರ ಮರ್ಜಿ ಸರಿಬೀಳಲಿಲ್ಲ, ಶುದ್ಧ ಕುಡುಕ ಅವರೂಂತ 'ಇನ್ನು ಮುಂದೆ ಇಲ್ಲಿಗವರನ್ನು ಕರೆಕೊಂಡು ಬರಬೇಡ' ಎಂದುಬಿಟ್ಟಳು. ಎಲ್ಲ ನಿಮ್ಮಲ್ಲೇ ಇರಲಿ ಮಾರಾಯರೆ. ಏನೋ ಹೇಳಹೋಗಿ ಮಾತು ಎತ್ತಲೊ

ಹರಿದುಬಿಟ್ಟಿತು. ನಿಮಗೆ ಹೇಳಿದೆನಲ್ಲ, ತೀರ್ಥಹಳ್ಳಿಯ ಆಚೆ ನಮ್ಮ ಗ್ರಾಮ ಅಂತ. ಅಲ್ಲಿ ನಾರಣಪ್ಪನವರದ್ದೊಂದು ತೋಟವಿದೆ. ಹಾಳುಬಿದ್ದು ನೆಲಸಮವಾಗಿದೆ. ಅವರಿಗೆ ಅದರ ಗೇಣಿಯು ಒಂದಡಕೆ ಸೇರದೆ ವರ್ಷಗಳಾಗಿಹೋದವು. ಪರಿಚಯವಲ್ಲವೆ, ನನಗೆ ಇಲ್ಲವೆನ್ನುತ್ತಾರ, ಕೇಳಿ ನೋಡುವ ಎಂದು ಒಂದು ಆಸೆ. ತೋಟವನ್ನು ಗುತ್ತಿಗೆಗೆ ಕೊಡಿ. ಊರ್ಜಿತಗೊಳಿಸಿ ನಿಮಗೂ ಒಂದು ಗೇಣಿಯ ದಾರಿ ಮಾಡಿಕೊಡುತ್ತೇನೆ, ಅಂತ. ಅದಕ್ಕೆ ಅಂದೆ—ನಿಮಗೂ ಕತ್ತಲಲ್ಲಿ ದಾರಿಗೊಂದು ಜನವಾಯಿತು. ನನಗೂ ಕೆಲಸವಾದ ಹಾಗೆ ಆಯಿತು ಅಂತ."

ಪ್ರಾಣೇಶಾಚಾರ್ಯರು ಒದ್ದಾಡಿಕೊಳ್ಳುತ್ತ ಪುಟ್ಟನ ಮಾತನ್ನು ಕೇಳಿಸಿಕೊಂಡರು. ನಾರಣಪ್ಪ ಸತ್ತನೆಂದು ಹೇಳಲೇ ? ನನ್ನ ನಿಜವಾದ ಸಮಸ್ಯೆಯನ್ನು ತಿಳಿಸಿಬಿಡಲೇ ? ಆದರೆ ಇಷ್ಟೊಂದು ಸರಳ ಮನಸ್ಸಿನಲ್ಲಿ ದೊಡ್ಡ ಗೊಂದಲವೆಬ್ಬಿಸುವ ಮನಸ್ಸಾಗಲಿಲ್ಲ. ಒಂದುವೇಳೆ ಅವನೇನಾದರೂ ಜೊತೆಗೆ ನಡದೇಬಿಟ್ಟರೆ ಹೇಳದೇ ಇರುವುದು ಅಶಕ್ಯ—ಹೀಗೆ ಯೋಚಿಸುತ್ತಿದ್ದಂತೆ ಪ್ರಾಣೇಶಾಚಾರ್ಯರಿಗೆ ಥಟ್ಟನೆ ಪುಟ್ಟ ತನ್ನ ಜೊತೆಗಿದ್ದರೆ ವಾಸಿ ಎನ್ನಿಸಿತು. ಒಂಟಿಯಾಗಿ ಹೇಗೆ ಆ ಬ್ರಾಹ್ಮಣರನ್ನೆಲ್ಲ ಎದುರಿಸಲಿ ? ಮೊದಲು, ಪರಮಾಪ್ತನಾಗಿಬಿಟ್ಟ ಪುಟ್ಟನಿಗೆ ಹೇಳಿನೋಡುವುದು. ಅವನ ಕಣ್ಣಲ್ಲಿ ತಾನೇನಾಗುತ್ತೇನೆಂದು ತಿಳಿಯುವುದು—ಅದೂ ಒಂದು ಒಳ್ಳೆಯ ಉಪಾಯ. ಈಗ ಬಾನು ಪೂರ್ಣ ಬೆತ್ತಲೆಯಾಗಿಬಿಟ್ಟಿತು. ದೇವಸ್ಥಾನದಲ್ಲಿ ಶಂಖ ಜಾಗಟೆಗಳನ್ನು ಬಾರಿಸಿದ ಶಬ್ದ. ಬೇಗ ಹೋಗಬೇಕು. ಇಲ್ಲೆ ನಿಂತಿದ್ದರೆ ತನ್ನನ್ನು ಪತ್ತೆಮಾಡಿದಾತ ಹುಡುಕಿಕೊಂಡು ಬಂದುಬಿಟ್ಟಾನು. 'ಹೋಗುವ ಹಾಗಾದರೆ' ಎಂದರು.

ಆ ವೇಳೆಗೆ ಸರಿಯಾಗಿ ಅವರ ಮಾರ್ಗವಾಗಿ ಒಂದು ಕಮಾನುಗಾಡಿ ಬಂದಿತು. "ಸ್ವಲ್ಪ ನಿಲ್ಲಿರಿ" ಎಂದ ಪುಟ್ಟ ಆಚಾರ್ಯರನ್ನು ನಿಲ್ಲಿಸಿ. ಕೈ ಅಡ್ಡ ಮಾಡಿ ಗಾಡಿಯನ್ನು ತಡೆದ. ಗಾಡಿಯಿಂದೊಬ್ಬರು ಜರಿಶಲ್ಲೆ ಹೊದ್ದ ಬ್ರಾಹ್ಮಣರು ತಲೆಹಾಕಿ "ಏನು ?" ಅಂದರು.

"ನಿಮ್ಮ ಗಾಡಿ ಏನಾದರೂ ಆಗುಂಬೆ ಮಾರ್ಗವಾಗಿ ಹೋಗುವುದೋ?" ಎಂದು ಪುಟ್ಟ ಕೇಳಿದ.

"ಹಾ" ಎಂದರು ಗಾಡಿಯೊಳಗಿಂದ ಶಲ್ಲೆ ಹೊದ್ದವರು.

"ಇಬ್ಬರಿಗೆ ಜಾಗವುಂಟೊ ? ದೂರ್ವಾಸಪುರದ ಮಾರ್ಗ ಹೊರಟವರು ನಾವು" ಎಂದ ಪುಟ್ಟ.

"ಒಬ್ಬರಿಗೆ ಮಾತ್ರ ಜಾಗವಿದೆಯಲ್ಲ."

ಪುಟ್ಟ ಪ್ರಾಣೇಶಾಚಾರ್ಯರ ಕೈಹಿಡಿದು, "ನೀವು ಹೋಗಿ, ಆಚಾರ್ಯರೆ" ಎಂದ. "ಬೇಡ, ಇಬ್ಬರೂ ಒಟ್ಟಿಗೆ ನಡೆದು ಹೋಗುವ" ಎಂದರು ಆಚಾರ್ಯರು. "ಛೆಛೆ, ಅಷ್ಟುದೂರ ನಡೆದು ದಣಿಯುವುದು ಬೇಡ. ನಾಳೆ ಬಂದು ನೋಡುತ್ತೇನೆ" ಎಂದ ಪುಟ್ಟ. ಶಲ್ಲೆ ಹೊದ್ದವರು ಅವಸರ ಮಾಡಿದರು: "ಏನು ಹಾಗಾದರೆ? ಬರುವವರೊ? ನಾವು ದೂರ್ವಾಸಪುರದ ಹತ್ತಿರ ಒಂದೆರಡು ಮೈಲಿಯಾಚೆ ತಿರುಗಿಬಿಡುತ್ತೇವೆ. ಒಬ್ಬರು ಬೇಕಾದರೆ ಬನ್ನಿ. ಬೇಗ ಬನ್ನಿ."

ಪುಟ್ಟ ಪ್ರಾಣೇಶಾಚಾರ್ಯರನ್ನು ಒತ್ತಾಯಪೂರ್ವಕ ತಳ್ಳಿದ. ಪ್ರಾಣೇಶಾಚಾರ್ಯರು ನಿರ್ವಾಹವಿಲ್ಲದೆ ಗಾಡಿಯನ್ನು ಹತ್ತಿ ಒಳಕ್ಕೆ ಕೂತರು. ಗಾಡಿ ಹೊರಟಿತು. "ನಾಳೆ ನಿಮ್ಮನ್ನು ನೋಡುತ್ತೇನೆ" ಎಂದ ಪುಟ್ಟ. "ಆಗಲಿ" ಎಂದರು ಪ್ರಾಣೇಶಾಚಾರ್ಯರು.

ಆಯಿತು. ಇನ್ನು ನಾಲ್ಕೈದು ಗಂಟೆಗಳ ಪ್ರಯಾಣ. ಮತ್ತೆ?

ಈಗ ಆಕಾಶದಲ್ಲಿ ನಕ್ಷತ್ರಗಳು. ಗೆರೆ ಚಂದ್ರ. ದಿಟ್ಟಗೆ ನಿಂತ ಸಪ್ತರ್ಷಿ ಮಂಡಳ. ಇದ್ದಕ್ಕಿದ್ದಂತೆ ಚಂಡೆಯ ಶಬ್ದ. ಅಲ್ಲೊಂದು ಇಲ್ಲೊಂದು ಕೊಳ್ಳಿಯ ಬೆಂಕಿ. ಗುಡ್ಡ ಹತ್ತುವ ಎತ್ತಿನ ಉಸಿರು. ಕೊರಳಿನ ಗೆಜ್ಜೆ. ನಾಲ್ಕೈದು ಗಂಟೆಗಳ ಪ್ರಯಾಣ. ಮತ್ತೆ?

ಪ್ರಾಣೇಶಾಚಾರ್ಯರು ನಿರೀಕ್ಷೆಯಲ್ಲಿ, ಆತಂಕದಲ್ಲಿ ಕಾದರು.

ಬರ್ಮಿಂಗಂ
ಏಪ್ರಿಲ್ ೨೮, ೧೯೬೫

—

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI.
Acc. No. ..... 49

